# ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಕಥನಸಾಹಿತ್ಯ : ತೌಲನಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಅಧ್ಯಯನ ಪ್ರಬಂಧ


ಸಂಶೋಧಕರು

ಚಂದ್ರಶೇಖರ್ ಜಿ.ಆರ್.

ನೋಂದಣಿಸಂಖ್ಯೆ : KRSM 00150

ಮಾರ್ಗದರ್ಶಕರು

ಡಾ. ಪಿ.ಬೆಟ್ಟೇಗೌಡ
ಸಹ ಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು,
ವಿಜಯನಗರ,ಮೈಸೂರು.





ಮಾನ್ಯತಾ ಕೇಂದ್ರ:

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ.

2015




# ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಕಥನಸಾಹಿತ್ಯ : ತೌಲನಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸಿದ ಅಧ್ಯಯನ ಪ್ರಬಂಧ



ಸಂಶೋಧಕರು

**ಚಂದ್ರಶೇಖರ್ ಜಿ.ಆರ್.**

ನೋಂದಣಿಸಂಖ್ಯೆ : KRSM 00150

ಮಾರ್ಗದರ್ಶಕರು

**ಡಾ. ಪಿ.ಬೆಟ್ಟೇಗೌಡ**
ಸಹ ಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು,
ವಿಜಯನಗರ,ಮೈಸೂರು.




ಮಾನ್ಯತಾ ಕೇಂದ್ರ:

**ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
ಕರ್ನಾಟಕ ಸಂಘ (ರಿ), ಮಂಡ್ಯ.

**2015**

## ಸಂಶೋಧಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುವ **ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಕಥನಸಾಹಿತ್ಯ : ತೌಲನಿಕ ಅಧ್ಯಯನ** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ, ಮಂಡ್ಯ. ಈ ಸಂಸ್ಥೆಯ ಮೂಲಕ ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ಸಹ ಪ್ರಾಧ್ಯಾಪಕರು ಹಾಗೂ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿರುವ **ಡಾ. ಪಿ. ಬೆಟ್ಟೇಗೌಡ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ಮಹಾಪ್ರಬಂಧ ನನ್ನ ಸ್ವಂತ ಸಂಶೋಧನೆಯಾಗಿದೆ. ಇದನ್ನು ಸಂಪೂರ್ಣವಾಗಿ ಆಗಲಿ ಅಥವಾ ಭಾಗಶಃ ಆಗಲಿ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೊಮಾಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ಚಂದ್ರಶೇಖರ್ ಜಿ.ಆರ್.)**

ನೋಂದಣಿಸಂಖ್ಯೆ: KRSM00150

ಸ್ಥಳ : ಮಂಡ್ಯ.

ದಿನಾಂಕ : ೧೭.೧೨.೨೦೧೫

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಚಂದ್ರಶೇಖರ್ ಜಿ.ಆರ್., ಇವರು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾಕೇಂದ್ರ, ಕರ್ನಾಟಕ ಸಂಘ, ಮಂಡ್ಯ. ಈ ಸಂಸ್ಥೆಯ ಮೂಲಕ **ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಕಥನಸಾಹಿತ್ಯ : ತೌಲನಿಕ ಅಧ್ಯಯನ** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ, ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಇವರು ಯಾವುದೇ ಪದವಿ ಅಥವಾ ಡಿಪ್ಲೊಮಾ ಪದವಿಗಾಗಿ ಬಳಸಿಕೊಂಡಿಲ್ಲ ಎಂದು ದೃಢೀಕರಿಸುತ್ತೇನೆ ಹಾಗೂ ಈ ಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ನಾನು ಸಮ್ಮತಿಸಿದ್ದೇನೆ.

**(ಡಾ. ಪಿ.ಬೆಟ್ಟೇಗೌಡ)**
ಸಹ ಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು,
ವಿಜಯನಗರ, ಮೈಸೂರು.

ಸ್ಥಳ : ಮಂಡ್ಯ

ದಿನಾಂಕ : ೧೭.೧೨.೨೦೧೫

# ಪರಿವಿಡಿ

---

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ವಿಭಿನ್ನ ದೃಷ್ಟಿಕೋನ, ಪ್ರಯೋಗಶೀಲತೆ, ಸೃಜನಾತ್ಮಕ ವ್ಯಕ್ತಿತ್ವ, ನಿಸರ್ಗದೆಡೆಗಿನ ಅಪಾರ ಒಲವು ಕಾಳಜಿಗಳಿಂದ ಪ್ರಸಿದ್ಧಿಯಾಗಿರುವ ಅಪೂರ್ವಜೋಡಿ ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ. ನನ್ನ ತಿಳುವಳಿಕೆಗೆ ಸಂಬಂಧಿಸಿದಂತೆ ಸಾಹಿತ್ಯ ಕ್ಷೇತ್ರದಲ್ಲಿ ತಂದೆ-ಮಕ್ಕಳಿಬ್ಬರೂ ಉತ್ತುಂಗಕ್ಕೇರಿ ಕೀರ್ತಿಗೆ ಭಾಜನರಾದವರು. ಮಲೆನಾಡಿನ ಪರಿಸರ ಇಬ್ಬರ ಮೂಲನೆಲೆ. ಮಲೆನಾಡಿನ ದಟ್ಟ ಅನುಭವಗಳನ್ನು ನೈಜವಾಗಿ ಕಟ್ಟಿಕೊಟ್ಟವರು. ಕುವೆಂಪು ಮತ್ತು ತೇಜಸ್ವಿ ಇಬ್ಬರ ಸಾಹಿತ್ಯ ರಚನೆಯ ಕಾಲ ಘಟ್ಟಕ್ಕೆ ದಶಕಗಳ ಅಂತರವಿದೆ.

ನವೋದಯದ ಸಂದರ್ಭದಲ್ಲಿ ಸಾಹಿತ್ಯ ರಚನೆಗೆ ತೊಡಗಿದ ಕುವೆಂಪು ಅವರ ಸಾಹಿತ್ಯದಲ್ಲಿರುವ ಚಿಂತನೆಗಳು, ಕಾಳಜಿಗಳು, ತಾತ್ತ್ವಿಕತೆ ಎಲ್ಲಾ ಕಾಲಕ್ಕೂ ಸಲ್ಲುವಂತಹವು. ಈ ಸಾರ್ವಕಾಲಿಕ ಸತ್ತ್ವ ಕುವೆಂಪು ಅವರ ಎಲ್ಲಾ ಪ್ರಕಾರದ ಸಾಹಿತ್ಯ ಕೃತಿಗಳ ಅಡಿಪಾಯವಾಗಿದೆ. ಕುವೆಂಪು ಅವರ ಸಾಹಿತ್ಯದಿಂದ ಹೊರಹೊಮ್ಮುವ ತಾತ್ತ್ವಿಕ ಅಂಶಗಳು ಸಾಮಾಜಿಕ ಪರಿವರ್ತನೆಯ ಮಾರ್ಗದರ್ಶಿ ಸೂತ್ರಗಳಾಗಿವೆ. ಅವರ ಶ್ರೀಸಾಮಾನ್ಯತಾ ತತ್ತ್ವ, ವಿಶ್ವಮಾನವತೆ, ನಿರಂಕುಶಮತಿತ್ವ, ಸೌಂದರ್ಯಾನುಭೂತಿ, ಪೂರ್ಣದೃಷ್ಟಿ ಎಲ್ಲವೂ ಪರಿವರ್ತನಶೀಲ ಸಮಾಜಕ್ಕೆ ಅವರ ಅಮೂಲ್ಯ ಕೊಡುಗೆಗಳಾಗಿವೆ.

ಕುವೆಂಪು ಅವರ ಸಂಸರ್ಗದ ಫಲಿತವೇನೋ ಎಂಬಷ್ಟು ಸತ್ತ್ವಪೂರ್ಣ ಬರವಣಿಗೆಗಳನ್ನು ನೀಡಿ ತಮ್ಮ ಪ್ರಯೋಗಶೀಲ ಗುಣದಿಂದ ತೇಜಸ್ವಿ ಪ್ರಸಿದ್ಧರಾಗಿದ್ದಾರೆ. ನವೋದಯ, ನವ್ಯ, ನವ್ಯೋತ್ತರ ಹೀಗೆ ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳಲ್ಲಿ ಕೃತಿಗಳನ್ನು ರಚಿಸುತ್ತಾ ಬಂದರೂ ಯಾವುದೇ ಪಂಥದ ಹಣೆಪಟ್ಟಿಗೆ ಸಿಲುಕದೆ ಪಂಥಾತೀತ ನೆಲೆಯಲ್ಲಿ ಸಾಹಿತ್ಯ ರಚಿಸಿದರು. ಬದುಕಿನೊಡನೆ ತೇಜಸ್ವಿ ಅವರಿಗಿದ್ದ ವಿಶಿಷ್ಟ ಧೋರಣೆ, ಸಮಾಜದೊಂದಿಗಿನ ಸೂಕ್ಷ್ಮ ಸಂವೇದನೆ, ಪ್ರಕೃತಿಯೊಂದಿಗಿನ ಅವರ ಅವಿನಾಭಾವ ಒಡನಾಟ, 'ಬದುಕಿನ

ಬಗೆಗಿನ ವಿಸ್ಮಯದೃಷ್ಟಿಗಳಿಂದಾಗಿ ಕನ್ನಡ ಸಾಹಿತ್ಯದಲ್ಲಿ ಇತರರಿಗಿಂತ ಬೇರೆಯಾಗಿಯೇ ನಿಲ್ಲುತ್ತಾರೆ.

ಇಬ್ಬರೂ ಲೇಖಕರು 'ಭಾರತೀಯ ಸಂಸ್ಕೃತಿ'ಗೆ ಇಪ್ಪತ್ತನೇ ಶತಮಾನದಲ್ಲಿ ಕರ್ನಾಟಕ ನೀಡಿದ ಶ್ರೇಷ್ಠ ಕೊಡುಗೆ. ಇವರು ಸಾಹಿತಿಯಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿಂತಕರಾಗಿ 'ಹೊಸ ದರ್ಶನ'ಗಳನ್ನು ನೀಡಿದರು. ಇವರಿಬ್ಬರ ಕಥನ ಸಾಹಿತ್ಯವು ಎಲ್ಲಾ ವಯೋಮಾನ ಮತ್ತು ವಿವಿಧ ಹಿನ್ನೆಲೆಯ ಓದುಗರ ಮೇಲೆ ಅಚ್ಚಳಿಯದ ಪ್ರಭಾವ ಬೀರಿವೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಸಾಹಿತ್ಯವು ಒಂದು ಬೌದ್ಧಿಕ ಚಟುವಟಿಕೆಯಾಗದೆ, ಅದು ಬದುಕನ್ನು ಆವರಿಸಿಕೊಳ್ಳುವ ಕ್ರಮವಾಗಬೇಕೆಂದು ಬಯಸಿದ್ದವರು. ಇವರಿಗಿದ್ದ ಅದ್ವಿತೀಯ ನಿರೀಕ್ಷಣಾ ಸಾಮರ್ಥ್ಯ ಮತ್ತು ಅದನ್ನು ಕಲೆಯಾಗಿಸುವ ಅದ್ಭುತ ಸೃಜನಶೀಲತೆ ಮತ್ತು ವೈಚಾರಿಕತೆ ಶಕ್ತಿಗಳು ಇವರ ಕೃತಿಗಳಿಗೆ ಅನನ್ಯತೆಯನ್ನು ತಂದುಕೊಟ್ಟಿವೆ. ಜ್ಞಾನಶಾಖೆಯ ವಿವಿಧ ಶಿಸ್ತುಗಳನ್ನು ಅರಗಿಸಿಕೊಂಡು ಸಮಕಾಲೀನ ಚರಿತ್ರೆಗೆ ಸ್ಪಂದಿಸುತ್ತಾ, ಪರಂಪರೆಯಿಂದ ಬಂದ ಜ್ಞಾನಧಾರೆಗಳಿಂದ ಅನುಸಂಧಾನ ಮಾಡುತ್ತಾ ಕೃತಿರಚನೆ ಮಾಡಿರುವ ಲೇಖಕರಲ್ಲಿ ಇವರಿಬ್ಬರೂ ಅದ್ವಿತೀಯರೆನಿಸುತ್ತಾರೆ.

ಅಲ್ಲದೆ, ಮುಖ್ಯವಾಗಿ ಇಬ್ಬರೂ ಸಹ್ಯಾದ್ರಿಯ ಪರಿಸರದಿಂದ ಬಂದವರು. ಮಲೆನಾಡಿನ ಅನುಭವಗಳನ್ನು ಸಶಕ್ತವಾಗಿ ಓದುಗರಿಗೆ ಕಟ್ಟಿಕೊಟ್ಟವರು. ಮಲೆನಾಡಿನ ಹಿನ್ನೆಲೆಯಲ್ಲೇ ಬಂದ ಹಲವಾರು ಕವಿಗಳು, ಲೇಖಕರಲ್ಲಿ ಕಾಣದ ಜಿಜ್ಞಾಸೆ, ತಾತ್ತ್ವಿಕ ಚಿಂತನೆ, ಪ್ರಜ್ಞೆ ಇಬ್ಬರ ಕೃತಿಗಳಲ್ಲಿ ಯಥೇಚ್ಛವಾಗಿದ್ದು ಅಧ್ಯಯನಕ್ಕೆ ಪ್ರೇರೇಪಿಸುತ್ತವೆ.

ಕುವೆಂಪು ಮತ್ತು ತೇಜಸ್ವಿ ಅವರು ಎರಡು ತಲೆಮಾರಿನ ಸಮರ್ಥ ಪ್ರತಿನಿಧಿಗಳು. ಎರಡು ಯುಗದ ಪ್ರಾತಿನಿಧಿಕ ಬರಹಗಾರರು. ಕುವೆಂಪುರವರಿಂದ ನವೋದಯ ಸಾಹಿತ್ಯ ಹಾಗೂ ಸಾಹಿತಿಗಳು ಪ್ರಭಾವಿತರಾಗಿದ್ದಾರೆ. ಅದೇ ರೀತಿ ತೇಜಸ್ವಿ ವಿಶಿಷ್ಟ ಗುಣಲಕ್ಷಣಗಳುಳ್ಳ ನವ್ಯೋತ್ತರ ಸಾಹಿತ್ಯದ ಪ್ರತಿನಿಧಿಯಾಗಿದ್ದಾರೆ. ತೇಜಸ್ವಿಯವರ ವಿಶಿಷ್ಟ ಚಿಂತನೆಗಳಿಂದ ನವ್ಯೋತ್ತರ ಸಾಹಿತ್ಯ ಪ್ರಭಾವಿತವಾಯಿತು. ಇವರಿಬ್ಬರ ಕಥೆ–ಕಾದಂಬರಿಗಳು, ಇವರ ಸಮಕಾಲೀನ ಲೇಖಕರಿಗಿಂತ ಭಿನ್ನವಾಗಿ ಪ್ರಕಟವಾಗುತ್ತವೆ. ಪರಂಪರೆ ಹಾಗೂ ಸಮಕಾಲೀನ ಬದುಕಿಗೆ,

ಸಮಾಜೋಧಾರ್ಮಿಕ ಸ್ಥಿತ್ಯಂತರಗಳಿಗೆ ಇವರೀರ್ವರು ತೋರುವ ಪ್ರತಿಕ್ರಿಯೆ ಹಾಗೂ ತಳೆಯುವ ನಿಲುವುಗಳು ವಿಶಿಷ್ಟವಾಗಿವೆ. ಈ ಹಿನ್ನೆಲೆಯಲ್ಲಿ ಇವರಿಬ್ಬರ ಕಥನ ಸಾಹಿತ್ಯದಲ್ಲಿ ಪ್ರಧಾನ ಸ್ಪಂದನವಾಗಿ ಕಂಡು ಬರುವ 'ಪರಿಸರ' 'ಸಾಮಾಜಿಕ ಪ್ರಜ್ಞೆ' 'ಆಧುನಿಕತೆ' 'ಬೇಟೆ' ಹಾಗೂ 'ಅಭಿವ್ಯಕ್ತಿ'ಯ ನೆಲೆಗಳನ್ನು, ಇವರ ದೃಷ್ಟಿ ಧೋರಣೆ ಹಾಗೂ ತಳೆಯುವ ನಿಲುವುಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಕುವೆಂಪು ಮತ್ತು ತೇಜಸ್ವಿಯವರ ಸಾಹಿತ್ಯ ಹಾಗೂ ಜೀವನದ ಮೇಲೆ ಅನೇಕ ಅಂಶಗಳು ಪ್ರಭಾವ ಬೀರಿವೆ. ತೇಜಸ್ವಿ ಸಾಹಿತ್ಯವು ತಂದೆ ಕುವೆಂಪು ಹಾಗೂ ಪ್ರಗತಿಶೀಲರ ಸಾಹಿತ್ಯಗಳಿಂದ ಅಪಾರವಾಗಿ ಪ್ರಭಾವಿಸಿದೆ. ಅದೇ ರೀತಿ ಕಾರಂತ ಮತ್ತು ಲೋಹಿಯಾ ತತ್ತ್ವ ಅವರ ಸಾಹಿತ್ಯದ ದಿಕ್ಕನ್ನು ಬದಲಿಸುವ ಪ್ರಧಾನ ಪ್ರೇರಣೆಗಳಾಗಿವೆ. ಕುವೆಂಪುರವರ ಸಾಹಿತ್ಯದಲ್ಲಿನ ಅಂತಃಸತ್ತ್ವವಾದ 'ಪಂಚ ಮಂತ್ರಗಳು' 'ಸಪ್ತಸೂತ್ರಗಳು' ಹಾಗೂ 'ಅನಿಕೇತನ ತತ್ತ್ವ'ಗಳಿಂದ ಕೂಡಿದ 'ವಿಶ್ವಮಾನವ ಪರಿಕಲ್ಪನೆ'ಯ ಹಿಂದೆ ಶ್ರೀರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರಬಿಂದು, ರವೀಂದ್ರನಾಥ ಠಾಗೋರ್ ಹಾಗೂ ಮಹಾತ್ಮ ಗಾಂಧೀಜಿಯವರ ನಿಚ್ಚಳ ಪ್ರಭಾವ ಕಾಣುತ್ತದೆ. ಇದೇ ರೀತಿ ಕುವೆಂಪು ಮತ್ತು ತೇಜಸ್ವಿಯವರ ಕಥನ ಸಾಹಿತ್ಯವನ್ನು ರೂಪಿಸಿರುವ ತಾತ್ವಿಕ ನೆಲೆಗಳು, ಇವರ ಸಾಹಿತ್ಯ ರಚನೆಯಲ್ಲಿ ಉಂಟು ಮಾಡಿರುವ ಗಾಢ ಪರಿಣಾಮಗಳನ್ನು, ಪ್ರಯೋಗಶೀಲ ಚಿಂತನಾ ಮನೋಭಾವಗಳ ವೈಶಿಷ್ಟ್ಯಗಳನ್ನು ಅವರಿಗೆ ಉಂಟಾದ ಪ್ರೇರಣೆ ಪ್ರಭಾವಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಕುವೆಂಪು ಮತ್ತು ತೇಜಸ್ವಿ ಇಬ್ಬರ ಸಾಹಿತ್ಯದಲ್ಲೂ 'ಪರಿಸರ'ದೆಡೆಗಿನ ಸ್ಪಂದನೆ ತೀವ್ರವಾಗಿ ಕಂಡು ಬರುತ್ತದೆ. ತೇಜಸ್ವಿ ಹಾಗೂ ಕುವೆಂಪುರವರ ಪ್ರಕೃತಿಯೆಡೆಗಿನ ದೃಷ್ಟಿಕೋನ ತೀರಾ ಭಿನ್ನವಾದದ್ದು. ಕುವೆಂಪು ಅವರು ಸೌಂದರ್ಯಾಸ್ವಾದನೆ. ಪ್ರಕೃತಿಯ ಮೂಲಕ ಬದುಕನ್ನು ನೋಡುವ ಆಯಾಮ. ಪ್ರಕೃತಿ ಆರಾಧಿಸುವಂತೆ ಚಿತ್ರಿಸಿರುವುದು 'ಕಾನೂರು ಹೆಗ್ಗಡಿತಿ' 'ಮಲೆಗಳಲ್ಲಿ ಮದುಮಗಳು' ಹಾಗೂ ಇನ್ನಿತರ ಕೃತಿಗಳಲ್ಲಿ ಕಂಡುಬರುತ್ತದೆ. ಆದರೆ ಪ್ರಕೃತಿಯೆಡೆಗೆ ತೇಜಸ್ವಿ ದೃಷ್ಟಿಕೋನ ಧೋರಣೆಗಳೇ ಬೇರೆ. 'ನಿಸರ್ಗ'ವನ್ನು ತೇಜಸ್ವಿ 'ರಹಸ್ಯ'ವೆಂದೇ ಪರಿಭಾವಿಸುತ್ತಾರೆ. ನಿಸರ್ಗದ ನಿಗೂಢತೆಯನ್ನು ಆಸ್ವಾದಿಸುತ್ತಾರೆ. ರಹಸ್ಯವನ್ನು ಬೇಧಿಸಲು ಕಾರ್ಯೋನ್ಮುಕರಾಗುತ್ತಾರೆ. ತನ್ಮೂಲಕ

ನಿಸರ್ಗದ ಬಗೆಗಿನ ಹೊಸ ಹೊಳಹುಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಪರಿಸರದ ಬಗೆಗಿನ ಈ ಇಬ್ಬರೂ ಲೇಖಕರ ದೃಷ್ಟಿ, ಧೋರಣೆ, ತಳೆಯುವ ನಿಲುವುಗಳನ್ನು ಪರಸ್ಪರ ತೌಲನಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕುವೆಂಪು ಅವರು ನವೋದಯ ಕಾಲದಲ್ಲಿ ಕೃತಿರಚನೆಗೆ ತೊಡಗಿದವರು. ಈ ಕಾಲಘಟ್ಟದಲ್ಲಿ ರಚನೆಯಾದ ಬಹುತೇಕ ಎಲ್ಲಾ ಕೃತಿಗಳಲ್ಲೂ 'ಆಧುನಿಕತೆ'ಯ ಬಗೆಗೆ ಧನಾತ್ಮಕ ಒಲವು ಹೆಚ್ಚಾಗಿರುವುದನ್ನೇ ಕಾಣಬಹುದಾಗಿದೆ. ಇದು ಸಹಜವೂ ಹೌದು. ಈ ಕಾಲಘಟ್ಟದ ನವೋದಯ ಮನಸ್ಥಿತಿಗಳು ಆಧುನಿಕತೆಯನ್ನು ಅಚ್ಚರಿ, ಸಂಭ್ರಮಗಳಿಂದಲೇ ಸ್ವಾಗತಿಸಿವೆ. ತೇಜಸ್ವಿ ಅವರು ಅರವತ್ತರ ದಶಕದಲ್ಲಿ ಸಾಹಿತ್ಯ ರಚನೆ ಆರಂಭಿಸಿದವರು. ಕುವೆಂಪು ಕೃತಿಗಳಲ್ಲಿ ಆಧುನಿಕತೆಯ ಬಗೆಗೆ ಸಂಭ್ರಮ ಕಂಡರೆ, ತೇಜಸ್ವಿ ಕೃತಿಗಳಲ್ಲಿ ಆಧುನಿಕತೆ ಸೃಷ್ಟಿಸುವ ಅವಾಂತರಗಳ ಬಗೆಗೆ ಗಮನ ಕೇಂದ್ರೀಕರಿಸುವುದನ್ನು ಕಾಣುತ್ತೇವೆ. 'ಆಧುನಿಕತೆ'ಯ ಬಗೆಗೆ ಕುವೆಂಪು ಮತ್ತು ತೇಜಸ್ವಿ ಇಬ್ಬರೂ ಪ್ರತಿಕ್ರಿಯಿಸಿರುವ ರೀತಿ, ಕೃತಿಗಳಲ್ಲಿ ಅವುಗಳನ್ನು ಅನುಸಂಧಾನ ಮಾಡಿರುವ ಕ್ರಮಗಳನ್ನು ಪರಸ್ಪರ ಹೋಲಿಸಿ ವಿಶ್ಲೇಷಣೆ ಮಾಡಲಾಗಿದೆ.

ತೇಜಸ್ವಿ ಹಾಗೂ ಕುವೆಂಪು ಅವರ ಸಾಮಾಜಿಕ ಚಿಂತನೆಗಳು ಅವರ ಕಥೆ-ಕಾದಂಬರಿಗಳಲ್ಲಿ ಅನನ್ಯವಾಗಿ ಅಭಿವ್ಯಕ್ತಗೊಂಡಿವೆ. ತೇಜಸ್ವಿ ಹಾಗೂ ಕುವೆಂಪು ಅವರಂತೆ, ಸಾಮಾಜಿಕ ಬದುಕನ್ನು ತಮ್ಮ ಕಾದಂಬರಿಗಳಲ್ಲಿ ಇಷ್ಟು ಸೂಕ್ಷ್ಮವಾಗಿ ದೇಸಿಸೊಗಡಿನಲ್ಲಿಯೇ ಅಭಿವ್ಯಕ್ತಿಸಿರುವ ಲೇಖಕರು ವಿರಳವೆಂದೇ ಹೇಳಬೇಕು. 'ಸಾಮಾಜಿಕತೆ' ಎಂದರೆ ಅದು ಕೇವಲ ಬದುಕಿನ ಚಿತ್ರಣವಲ್ಲ, ಬದುಕಿನ ಕಡೆಗೊಂದು ಮಾನವೀಯ ನೋಟ. ತಮ್ಮ ಸಾಹಿತ್ಯದಲ್ಲಿ ಸಮಾಜದಲ್ಲಿನ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನ, ಸಾಂಪ್ರದಾಯಿಕ ಬದುಕನ್ನು ವೈಜ್ಞಾನಿಕವಾಗಿ ಚಿಂತಿಸುವ, ಆ ಸಮಾಜದಲ್ಲಿನ ಆಚಾರ-ವಿಚಾರಗಳನ್ನು ಹೊಸ ದೃಷ್ಟಿಕೋನದಿಂದ ನೋಡುವ ಕ್ರಮ, ಸಂದರ್ಭಾನುಸಾರ ಸಮೂಹಕ್ಕೂ ವ್ಯಕ್ತಿತ್ವಕ್ಕೂ ಬೆಲೆ ನೀಡುವ ಔದಾರ್ಯ, ಧರ್ಮ, ಜಾತಿ ಬಗೆಗಿನ ಲೇಖಕರ ಧೋರಣೆ ಎಲ್ಲವೂ ಒಳಗೊಂಡು ಅದು 'ಸಾಮಾಜಿಕತೆ' ಎನಿಸುವುದು. ಕುವೆಂಪು ಮತ್ತು ತೇಜಸ್ವಿ ಅವರ ಕಥನ ಸಾಹಿತ್ಯದಲ್ಲಿ ಸಾಂದ್ರವಾಗಿರುವ 'ಸಾಮಾಜಿಕ ಪ್ರಜ್ಞೆ'ಯನ್ನು ಗುರುತಿಸಿ, ಅವುಗಳನ್ನು ತೌಲನಿಕವಾಗಿ ವಿಶ್ಲೇಷಣೆ ಮಾಡಲಾಗಿದೆ.

ಕನ್ನಡದಲ್ಲಿ 'ಮೃಗಯಾ ಸಾಹಿತ್ಯ'ವನ್ನು ಅಪಾರ ಪ್ರಮಾಣದಲ್ಲಿ ರಚಿಸಿರುವ ಸಾಹಿತಿಗಳೆಂದರೆ ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ. ಇದಕ್ಕೆ ಮುಖ್ಯ ಕಾರಣ ಮಲೆನಾಡು. ಮಲೆನಾಡಿನ ಜನರಿಗೆ ಕೃಷಿಯಂತೆಯೇ ಬೇಟೆಯೂ ಬದುಕಿನ ಅವಿಭಾಜ್ಯ ಅಂಗ. ಇಲ್ಲಿಯ ಜನರಿಗೆ ಬೇಟೆಯು ಬರಿಯ ವೃತ್ತಿಯಲ್ಲ, ಮನರಂಜನೆಯ ಮಾರ್ಗವಾಗಿದೆ. ಅವರ ಧೈರ್ಯ ಸಾಹಸಗಳನ್ನು ಪ್ರದರ್ಶಿಸುವ ಸಾಧನವೂ ಆಗಿದೆ. ಅನುವಂಶಿಕವಾಗಿ ಸಾಗಿ ಬಂದ ಈ ಕಲೆ ತಾವು ಹುಟ್ಟಿ ಬೆಳೆದ ಪರಿಸರವನ್ನೆಲ್ಲ ಅಗಾಧವಾಗಿ ಆವರಿಸಿಕೊಂಡಿದೆ. ಸಹಜವೆಂಬಂತೆ ಈ ಕಲೆ ಕುವೆಂಪು ಅವರಲ್ಲೂ ರಕ್ತಗತವಾಗಿದೆ. ಬಾಲ್ಯದಿಂದಲೇ ಬೇಟೆಗಾರರಾಗಿದ್ದ ಕಾರಣದಿಂದ ಬಹಳ ನೈಜತೆಯಿಂದ ಕೂಡಿದ ಬೇಟೆಯ ಸಾಹಿತ್ಯವನ್ನು ನೀಡಲು ಅವರಿಗೆ ಸಾಧ್ಯವಾಯಿತು. ತಮ್ಮ ಹುಟ್ಟು – ಬೆಳವಣಿಗೆ ಮೈಸೂರಿನಲ್ಲಾದರೂ ಮಲೆನಾಡಿನ ಕಾನನದ ಬಗೆಗಿನ ಹಂಬಲದಿಂದ ಬೇಟೆಯನ್ನು ಹವ್ಯಾಸವನ್ನಾಗಿ ರೂಢಿಸಿಕೊಂಡ ತೇಜಸ್ವಿ ಕೂಡ ತಂದೆಯ ಮಾರ್ಗದಲ್ಲೇ ರೋಚಕತೆಯ ಬೇಟೆಯ ಸಾಹಿತ್ಯವನ್ನು ಅಚ್ಚಳಿಯದಂತೆ ಕಟ್ಟಿಕೊಡಲು ಸಾಧ್ಯವಾಯಿತು. ಆದ್ದರಿಂದಲೇ ಈ ಇಬ್ಬರೂ ಲೇಖಕರು ತಮ್ಮದೇ ಆದ ಸ್ವಂತಿಕೆಯಿಂದ ಇತರ ಲೇಖಕರಿಗಿಂತ ಪ್ರತ್ಯೇಕವಾಗಿ ಕಾಣುತ್ತಾರೆ. ಕುವೆಂಪು ಮತ್ತು ತೇಜಸ್ವಿ ಅವರ ಕೃತಿಗಳಲ್ಲಿ ವ್ಯಕ್ತವಾಗಿರುವ 'ಬೇಟೆ'ಯ ಪರಿಕಲ್ಪನೆ ಮತ್ತು ಅವರ ದೃಷ್ಟಿ ಧೋರಣೆಗಳನ್ನು ಗುರುತಿಸಿ, ಅವುಗಳನ್ನು ತೌಲನಿಕ ವಿಶ್ಲೇಷಣೆಗೊಳಪಡಿಸಲಾಗಿದೆ.

ವ್ಯಕ್ತಿಯು ತನ್ನ ಅನುಭವ, ಅಮೂರ್ತ ಭಾವನೆ, ಆಲೋಚನೆ, ಬಯಕೆ ಚಿಂತನೆಗಳಿಗೆ ಸಾಮಾಜಿಕವಾಗಿ ಅಂಗೀಕೃತವಾದ ಯಾವುದೇ ಒಂದು ಮಾಧ್ಯಮದಲ್ಲಿ ತಕ್ಕಮಟ್ಟಿಗೆ ಖಚಿತವಾದ ಮೂರ್ತರೂಪ ಕೊಡುವ ಕ್ರಿಯೆಯೇ ಅಭಿವ್ಯಕ್ತಿ. ತನ್ನ ಅನುಭವ, ಚಿಂತನೆ, ಆಲೋಚನೆ, ತರ್ಕ ಇತ್ಯಾದಿಗಳನ್ನು ಸಮಾಜದ ಇತರರೊಂದಿಗೆ ಹಂಚಿಕೊಳ್ಳುವುದು ಮತ್ತು ತನ್ನ ಆಲೋಚನೆ ಚಿಂತನೆಗಳತ್ತ ಅವರನ್ನು ಒಲಿಸಿಕೊಳ್ಳುವುದು ಅಭಿವ್ಯಕ್ತಿಯ ಪ್ರಮುಖ ಉದ್ದೇಶ. ಅಭಿವ್ಯಕ್ತಿ ಎಂಬುದು ಭಾಷೆ, ಸಂಭಾಷಣೆ,ಸಾಹಿತ್ಯ, ಭಾಷಣ ಎಂಬ ಹಲವು ರೂಪಗಳಲ್ಲಿ ವ್ಯಕ್ತವಾಗುತ್ತವೆ. ಇವು ಸಾಹಿತ್ಯಕ್ಕೆ ಸಂಬಂಧಿಸಿದ್ದಾದರೆ, 'ಧ್ವನಿವ್ಯತ್ಯಾಸ' ಮತ್ತು 'ವಾದ್ಯಗಳು' ಸಂಗೀತಕ್ಕೆ ಸಂಬಂಧಿಸುತ್ತವೆ. ಆಂಗಿಕ ಚಲನೆ, ಹಾವಭಾವಗಳು ನಾಟಕ ಮತ್ತು ನಾಟ್ಯಕ್ಕೆ ಸಂಬಂಧಿಸಿದ ಅಭಿವ್ಯಕ್ತಿಯ ರೂಪಗಳೆನಿಸುತ್ತವೆ. ಇವರಿಬ್ಬರ ಕಥನಸಾಹಿತ್ಯದಲ್ಲಿನ ಅಭಿವ್ಯಕ್ತಿ ವಿಧಾನಗಳಲ್ಲಿ

ವಸ್ತು, ಕಾದಂಬರಿಯ ಶಿಲ್ಪ ಮತ್ತು ತಂತ್ರ ಹಾಗೂ ಭಾಷಿಕ ಅಂಶಗಳನ್ನು ಪರಸ್ಪರ ಹೋಲಿಸಿ ವಿಶ್ಲೇಷಿಸುವುದು. ಹಾಗೂ ಇವುಗಳ ಬಳಕೆಯ ಔಚಿತ್ಯವನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಯನ ವಿಧಾನ :**

ಪ್ರಸ್ತುತ ಅಧ್ಯಯನವು ಸಾಹಿತ್ಯಾಧ್ಯಯನ ವಿಧಾನವಾಗಿದೆ. ಇಬ್ಬರೂ ಲೇಖಕರ ಕಥನ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸುತ್ತಿರುವುದರಿಂದ 'ವಿಶ್ಲೇಷಣಾ ವಿಧಾನ'ವನ್ನೂ ಜೊತೆಗೆ 'ತೌಲನಿಕ ವಿಧಾನ'ವನ್ನು ಅನುಸರಿಸಲಾಗುತ್ತದೆ.

'ತೌಲನಿಕ ಅಧ್ಯಯನ' ಎಂಬುದು ಅಧ್ಯಯನದ ವಿಧಾನವನ್ನು ಸೂಚಿಸುತ್ತದೆ. ಅಲ್ಲದೆ, ಅನುವಾದ, ಆಧಾರಿತ ಕೃತಿ, ಸ್ವೀಕರಣ ಇವೆಲ್ಲ ಇದರ ಹರವಿನಲ್ಲಿ ಸೇರುತ್ತವೆ. ಕೆಲವು ಸಮಾನ ಅಂಶಗಳಿರುವ ಇಬ್ಬರು ಲೇಖಕರ ಅಥವಾ ಎರಡು ಕೃತಿಗಳಲ್ಲಿ ಭಿನ್ನವಾಗಿರುವ ಅಂಶಗಳನ್ನು ಗುರುತಿಸಿ, ಭಿನ್ನತೆಯ ಸ್ವರೂಪ, ಕಾರಣಗಳು, ಫಲಿತಾಂಶ ಇವನ್ನು ಅಧ್ಯಯನ ಮಾಡುವುದು 'ವೈದೃಶ್ಯ' ಎನಿಸುತ್ತದೆ. ಅದೇರೀತಿ ಬೇರೆ ಸಂಬಂಧವಿಲ್ಲದ ಎರಡು ಕೃತಿಗಳಲ್ಲಿ ಶೈಲಿಯಲ್ಲಿ ಅಥವಾ ಶಿಲ್ಪದಲ್ಲಿ ಅಥವಾ ವಿಚಾರ ರೀತಿಯಲ್ಲಿ ಇರಬಹುದಾದ ಹೋಲಿಕೆಯ ಅಧ್ಯಯನವು 'ಸಾದೃಶ್ಯ' ಎನಿಸುತ್ತದೆ. "ಒಬ್ಬ ಕವಿಯನ್ನು ಮತ್ತೊಬ್ಬ ಕವಿಯೊಂದಿಗೆ ಇರಿಸಿ ನೋಡುವುದರ ಉದ್ದೇಶ, ಈ ಕವಿ ಆ ಕವಿಯಿಂದ ಎಷ್ಟು ಎರವಲು ಪಡೆದಿದ್ದಾನೆ ಎಂಬುದನ್ನು ಮಾತ್ರ ನೋಡುವ ಏಕೈಕ ಉದ್ದೇಶಕ್ಕಾಗಿ ಅಲ್ಲ; ಒಬ್ಬೊಬ್ಬ ಕವಿಯ ಪ್ರತಿಭಾ ವೈಶಿಷ್ಟ್ಯವನ್ನೂ ತುಲನೆ ಮಾಡುವುದಕ್ಕಾಗಿ; ಸಮಾನವಾದ ವಸ್ತು, ಪಾತ್ರ ಸನ್ನಿವೇಶಗಳಲ್ಲಿ ಒಬ್ಬೊಬ್ಬ ಕವಿಯ ಪ್ರತಿಭೆಯೂ ಹೇಗೆ ಕೆಲಸ ಮಾಡಿದೆ ಎನ್ನುವುದನ್ನು ಗಮನಿಸುವುದರ ಮೂಲಕ ಆಯಾ ಕವಿಗೆ ಸಾಹಿತ್ಯದಲ್ಲಿ ನಿಜವಾಗಿಯೂ ಸಲ್ಲಬೇಕಾದ ಸ್ಥಾನವನ್ನು ಸಲ್ಲಿಸುವುದಕ್ಕಾಗಿ". (ಶಿವರುದ್ರಪ್ಪ ಜಿ.ಎಸ್., ವಿಮರ್ಶೆಯ ಪೂರ್ವ ಪಶ್ಚಿಮ, ೧೯೬೯, ಪುಟ ೩೮)

ಹಾಗಾಗಿ ಒಂದೇ ಪರಿಸರದ ಹಿನ್ನೆಲೆಯಲ್ಲೇ ಬಂದ ಇಬ್ಬರೂ ಲೇಖಕರ ದೃಷ್ಟಿ, ಧೋರಣೆ, ಆಶಯಗಳನ್ನು ಪರಸ್ಪರ ಹೋಲಿಸಿ, ವೈದೃಶ್ಯ-ಸಾದೃಶ್ಯತೆಯ ಅಂಶಗಳನ್ನು ನೋಡುವುದರಿಂದ ಪ್ರಸ್ತುತ 'ವಿಧಾನ'ವು ಅಧ್ಯಯನದ ದೃಷ್ಟಿಯಿಂದ ಸೂಕ್ತವಾದುದು ಎಂಬುದಾಗಿ ಭಾವಿಸಲಾಗಿದೆ.

**ವ್ಯಾಪ್ತಿ :**

ಕನ್ನಡ ಸಾಹಿತ್ಯದಲ್ಲಿ ಮೌಖಿಕ ಪರಂಪರೆಯಿಂದಲೂ ಕಥನಕ್ರಿಯೆ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಜನಪದ ಸಮುದಾಯ ಕಟ್ಟಿ ಹೇಳುವ ಕಥೆಗಳು ಜಗತ್ತಿನ ಎಲ್ಲಾ ಭಾಷೆಯ ಸಾಹಿತ್ಯದಲ್ಲೂ ಹೇರಳವಾಗಿವೆ. ಆದರೆ, ಜನಪದರ ಕಥನ ಕಲೆ ಹಾಗೂ ಕ್ರಮಕ್ಕಿಂತ ಶಿಷ್ಟ ಸಾಹಿತ್ಯದ ಕಥನ ಗುಣಗಳು, ತಮ್ಮದೇ ಆದ ಭಿನ್ನ ನೆಲೆಗಳಲ್ಲಿಯೇ ನಿಲ್ಲುತ್ತವೆ. ಆಧುನಿಕ ಕನ್ನಡ ಸಾಹಿತ್ಯದ ಸಂಧರ್ಭದಲ್ಲಿ 'ಕಥನ ಸಾಹಿತ್ಯ' ವಿಶಿಷ್ಟತೆಯಿಂದ ಕೂಡಿದ ಪ್ರಕಾರವಾಗಿದೆ. ಜನಪದ ಸಮುದಾಯದ 'ಕಥನ'ಕ್ಕೂ ಹತ್ತೊಂಬತ್ತನೇ ಶತಮಾನದಲ್ಲಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೊಸ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ರೂಪುಗೊಂಡ ಕಥನ ಸಾಹಿತ್ಯಕ್ಕೂ ಭಿನ್ನ ಆಯಾಮಗಳಿವೆ. ಇದಕ್ಕೆ ಹಲವಾರು ಅಂಶಗಳು ಕಾರಣವಾಗಿವೆ.

ಭಾರತೀಯ ಇತಿಹಾಸದಲ್ಲಿ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳು ಪ್ರಮುಖ ಘಟ್ಟ, ಸ್ಥಿತ್ಯಂತರದ ಅವಧಿ. ಇಂಗ್ಲೀಷರ ಆಗಮನ, ಕೊಡು-ಕೊಳ್ಳುವಿಕೆ, ಇಂಗ್ಲಿಷ್ ಶಿಕ್ಷಣ, ಆಧುನಿಕತೆಯ ಪ್ರಭಾವದಂತಹ ಬದಲಾವಣೆಗಳು ಸಂಭವಿಸಿದವು. ಇಂಗ್ಲಿಷ್ ಶಿಕ್ಷಣದಿಂದಾಗಿ ಭಾರತೀಯರಲ್ಲಿ ಹೊಸ ಬಗೆಯ ಚಿಂತನೆ, ಆಲೋಚನಾ ಕ್ರಮ, ವಿಭಿನ್ನ ಮನೋಭಾವ ಕಂಡುಬಂದಿತು. ವಿದೇಶಿಯರು ಭಾರತದ 'ಸಾಂಸ್ಕೃತಿಕ ಸತ್ತ್ವ'ವನ್ನು ಅಧ್ಯಯನ ಮಾಡುವ ಮೂಲಕ ಇಲ್ಲಿನ ಸಂಸ್ಕೃತಿ, ದೇಸಿತನ, ವೈವಿಧ್ಯತೆ, ಮಹತ್ವಗಳನ್ನು ಪ್ರಚಾರ ಪಡಿಸಿದ್ದು, ನವ ಪೀಳಿಗೆಗೆ ಹೊಸಹುರುಪನ್ನು ತಂದಿತು. ಇದರ ಫಲವಾಗಿ ಸಾಹಿತ್ಯರಚನೆಯಂತಹ ಸೃಷ್ಟಿಶೀಲ ಕ್ರಿಯೆ ಆರಂಭವಾಯಿತು. ಗದ್ಯ ಹೆಚ್ಚು ಜನಪ್ರಿಯವಾಯಿತು. ಇಂತಹ ಸಂಧರ್ಭದಲ್ಲಿ 'ಕಥನ ಸಾಹಿತ್ಯ' ಸಣ್ಣ ಕತೆ ಮತ್ತು ಕಾದಂಬರಿ ಎಂಬ ರೂಪಗಳಲ್ಲಿ ರಚಿಸಲ್ಪಟ್ಟವು. ಆದ್ದರಿಂದ 'ಕಥನ' (Ficton) ಎಂದರೆ 'ಸಣ್ಣ ಕತೆಗಳು ಹಾಗೂ ಕಾದಂಬರಿ ಎರಡನ್ನೂ ಒಳಗೊಂಡ ಸಾಹಿತ್ಯ ಪ್ರಕಾರ' ಎಂದು ಭಾವಿಸಿ,

ಅಧ್ಯಯನದಲ್ಲಿ ಕುವೆಂಪು ಮತ್ತು ಪೂರ್ಣ ಚಂದ್ರ ತೇಜಸ್ವಿಯವರ ಎಲ್ಲಾ ಕಾದಂಬರಿಗಳು ಹಾಗೂ ಸಣ್ಣ ಕತೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸಿದ್ಧ ಕಥೆಗಾರ ಫ್ರ್ಯಾಂಕ್ ಓ ಕಾನರ್, 'ಸಣ್ಣಕಥೆ ಮತ್ತು ಕಾದಂಬರಿಗಳ ನಡುವೆ ಇರುವ ಅಂತರ ಉದ್ದದ್ದಲ್ಲ' ಎನ್ನುತ್ತಾನೆ. ಸಣ್ಣಕಥೆ ಮತ್ತು ಕಾದಂಬರಿಗಳೆರಡರಲ್ಲೂ ಕಥನ ಕಲೆ ಇರುತ್ತದೆ. ವಸ್ತು, ಪಾತ್ರ, ನಿರೂಪಣೆ, ತಂತ್ರ, ಜೀವನದೃಷ್ಟಿ ಎಂಬ ಅಂಶಗಳು ಎರಡರಲ್ಲೂ ಇರುತ್ತವೆಯಾದ್ದರಿಂದ 'ಕಥನ ಸಾಹಿತ್ಯ' ಎಂಬುದನ್ನು ಕಾದಂಬರಿ ಹಾಗೂ ಸಣ್ಣ ಕಥೆ ಎರಡನ್ನೂ ಒಳಗೊಂಡ ಅಂಶವೆಂದೇ ಪರಿಭಾವಿಸಬೇಕಾಗಿದೆ. ಈ ಪರಿಕಲ್ಪನೆಯ ಹಿನ್ನೆಲೆಯಲ್ಲಿ ನನ್ನ ಅಧ್ಯಯನವು ಕುವೆಂಪು ಮತ್ತು ತೇಜಸ್ವಿ ಇವರ ಕಥೆಗಳು ಹಾಗೂ ಕಾದಂಬರಿಗಳನ್ನು ಮಾತ್ರ ಅಧ್ಯಯನಕ್ಕೆ ಸೀಮಿತಗೊಳಿಸಿಕೊಂಡಿದೆ.

ತೇಜಸ್ವಿಯವರ 'ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್' ಮತ್ತು 'ಪರಿಸರದ ಕಥೆಗಳು' ಕೃತಿಗಳು ಕಥನ ಕಲೆಯಿಂದ ಕೂಡಿರುವುದರಿಂದ ಅಧ್ಯಯನಕ್ಕೆ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ. ಕುವೆಂಪುರವರಿಗೆ ಪ್ರೇರಣೆ-ಪ್ರಭಾವ ಬೀರಿದ ಅಂಶಗಳ ವಿವರಗಳು 'ನೆನಪಿನ ದೋಣಿಯಲ್ಲಿ' ಹಾಗೂ ತೇಜಸ್ವಿ ಅವರ 'ಅಣ್ಣನ ನೆನಪು' ಕೃತಿಗಳಲ್ಲಿ ಹೇರಳವಾಗಿರುವುದರಿಂದ ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ, 'ಕುವೆಂಪು ಮತ್ತು ತೇಜಸ್ವಿ ಕಥನ ಸಾಹಿತ್ಯ : ತೌಲನಿಕ ಅಧ್ಯಯನ' ಎಂಬ ಶೀರ್ಷಿಕೆ ಇಟ್ಟುಕೊಂಡಿದ್ದರೂ ಇವರಿಬ್ಬರ ಕಥನ ಸಾಹಿತ್ಯದಲ್ಲಿ ಕಂಡು ಬರುವ 'ಪರಿಸರ' 'ಸಾಮಾಜಿಕ ಪ್ರಜ್ಞೆ' 'ಆಧುನಿಕತೆ' 'ಬೇಟೆ' ಹಾಗೂ 'ಅಭಿವ್ಯಕ್ತಿ'ಯ ನೆಲೆಗಳು – ಈ ಪ್ರಧಾನ ಅಂಶಗಳಿಗೆ ಮಾತ್ರ ಅಧ್ಯಯನವನ್ನು ಮಿತಿಗೊಳಿಸಿಕೊಂಡಿದ್ದೇನೆ.

ಕನ್ನಡ ವಿಶ್ವವಿದ್ಯಾಲಯದ ಸೂಚನೆ ಮೇರೆಗೆ ಅಡಿಟಿಪ್ಪಣಿಗಳನ್ನು ಪ್ರತಿ ಅಧ್ಯಾಯಗಳಲ್ಲಿ , ಉಲ್ಲೇಖಗಳ ಪಕ್ಕದಲ್ಲೇ ನೀಡಲಾಗಿದೆ. ಹಾಗೂ ಅಧ್ಯಯನಕ್ಕೆ ಬಳಕೆಮಾಡಲಾದ ಆಕರಗ್ರಂಥಗಳನ್ನು, ಪರಾಮರ್ಶನ ಗ್ರಂಥಗಳ ಜೊತೆಯಲ್ಲಿ ನೀಡಲಾಗಿದೆ.

## ಪ್ರಸ್ತುತ ಅಧ್ಯಯನದ ಮಹತ್ವ :

ಇತ್ತೀಚಿನ ದಿನಗಳಲ್ಲಿ ತೌಲನಿಕ ಅಧ್ಯಯನಗಳು ಹೆಚ್ಚಿನ ಮಹತ್ವ ಪಡೆದುಕೊಂಡಿವೆ. ಹಾಗೂ ಅತ್ಯಂತ ವ್ಯಾಪಕ ಹಾಗೂ ಜನಪ್ರಿಯ ಸಂಶೋಧನಾ ವಿಧಾನವಾಗಿದೆ. ಸಮಾನವಸ್ತು, ಆಂತರಿಕ ಭಾವ, ಆಶಯಗಳನ್ನು ಹೊಂದಿರುವ ಇಬ್ಬರು ಲೇಖಕರ ಕೃತಿಗಳನ್ನು ತೌಲನಿಕ ವಿಶ್ಲೇಷಣೆಗೆ ಒಳಪಡಿಸುವುದು, ಪ್ರಸ್ತುತ ಸಂದರ್ಭದಲ್ಲಿ ಅಗತ್ಯವಿದೆ. ಈಗಾಗಲೇ ಈ ಬಗೆಯ ಹಲವಾರು ತೌಲನಿಕ ಸಂಶೋಧನೆಗಳು ನಡೆದಿವೆ. ಅವುಗಳನ್ನು ಗಮನಿಸಿದಾಗ, ಇಬ್ಬರೂ ಲೇಖಕರನ್ನು ಪ್ರತ್ಯೇಕ ಅಧ್ಯಾಯನಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಿ, ಕೊನೆಯ ಅಧ್ಯಾಯದಲ್ಲಿ ಮಾತ್ರ ತೌಲನಿಕ ವಿಶ್ಲೇಷಣೆ ಮಾಡಿರುವುದು ಗಮನಿಸಿರುತ್ತೇನೆ. ಇಬ್ಬರೂ ಲೇಖಕರ ವಸ್ತು, ಧ್ಯೇಯ, ಧೋರಣೆ, ಆಶಯಗಳನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ಪರಸ್ಪರ ಸಾದೃಶ್ಯ-ವೈದೃಶ್ಯಗಳನ್ನು ಗುರುತಿಸಿ, ಅವುಗಳ ಮೇಲೆ ಬೆಳಕು ಚೆಲ್ಲಬೇಕು. ಆಗ ಮಾತ್ರ 'ತೌಲನಿಕ ಅಧ್ಯಯನ'ಗಳು ಅರ್ಥಪೂರ್ಣವಾಗುತ್ತವೆ.

ಪ್ರಸ್ತುತ ಸಂಶೋಧನೆ, ಕುವೆಂಪು ಮತ್ತು ತೇಜಸ್ವಿ ಅವರ ಕಥನ ಸಾಹಿತ್ಯದಲ್ಲಿರುವ ವಸ್ತು, ಆಶಯ, ಧ್ಯೇಯ-ಧೋರಣೆಗಳನ್ನು ಪರಸ್ಪರ ಪಕ್ಕಕ್ಕಿಟ್ಟು ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಈ ದೃಷ್ಟಿಯಿಂದ 'ತೌಲನಿಕ ಅಧ್ಯಯನ' ಕ್ಷೇತ್ರಕ್ಕೆ ನಾವೀನ್ಯಯುತ ಸಂಶೋಧನೆಯಾಗಿದೆ. ಅಲ್ಲದೆ, ಇದುವರೆಗೂ ಕುವೆಂಪು ಮತ್ತು ತೇಜಸ್ವಿ ಅವರನ್ನು ಕುರಿತು ಯಾವುದೇ 'ತೌಲನಿಕ ಅಧ್ಯಯನ' ಗಳು ನಡೆದಿರುವುದಿಲ್ಲ. ಈ ನಿಟ್ಟಿನಲ್ಲಿ ಪ್ರಸ್ತುತ ಸಂಶೋಧನೆ ಇಬ್ಬರೂ ಲೇಖಕರ ಕಥನಸಾಹಿತ್ಯದ ತೌಲನಿಕ ವಿಶ್ಲೇಷಣೆ, ಅಧ್ಯಯನಗಳಿಂದ ಮಹತ್ವಪೂರ್ಣದ್ದಾಗಿದೆ. ಓದುವ ಹವ್ಯಾಸವೇ ಕಡಿಮೆಯಾಗುತ್ತಿರುವ ಸನ್ನಿವೇಶದಲ್ಲಿ ಮರುಓದಿಗೆ ಪ್ರೇರೇಪಿಸುವ ಈ ಇಬ್ಬರೂ ಲೇಖಕರ ಕೃತಿಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಿರುವುದರಿಂದ ಈ ಸಂಶೋಧನೆ ಹೆಚ್ಚು ಪ್ರಸ್ತುತವಾಗಿದೆ ಹಾಗೂ ಮಹತ್ವಪೂರ್ಣದ್ದಾಗಿದೆ.

# ಅಧ್ಯಾಯ – ೨

# ಕುವೆಂಪು ಮತ್ತು ತೇಜಸ್ವಿ ಸಾಹಿತ್ಯಾಧ್ಯಯನ : ಸಂಕ್ಷಿಪ್ತ ಸಮೀಕ್ಷೆ

ಕುವೆಂಪು ಮತ್ತು ತೇಜಸ್ವಿಯವರನ್ನು ಕುರಿತಾದ ಸಾಕಷ್ಟು ಸಂಶೋಧನೆಗಳು, ಅಧ್ಯಯನಗಳು ಈಗಾಗಲೇ ನಡೆದಿರುವುದನ್ನು ಸಂಶೋಧನಾ ಸಮೀಕ್ಷೆಯಿಂದ ಕಂಡುಕೊಳ್ಳಲಾಗಿದೆ. ಕುವೆಂಪು ಅವರ ಸಾಹಿತ್ಯದ ಮೇಲೆ ಈಗಾಗಲೇ ಸಾಕಷ್ಟು ಸಂಶೋಧನೆಗಳು ನಡೆದಿವೆ. ಸಮೃದ್ಧವಾದ ವಿಮರ್ಶಾ ಲೇಖನಗಳೂ ಬಂದಿವೆ. ಅವುಗಳನ್ನು ವ್ಯಕ್ತಿಯೊಬ್ಬನಿಂದ ಓದಲು ಖಂಡಿತಾ ಸಾಧ್ಯವಿಲ್ಲ. ಆದರೆ ತೇಜಸ್ವಿ ಅವರ ಸಾಹಿತ್ಯ ಕುರಿತಾದಂತೆ ಭಿನ್ನನೆಲೆಗಳಲ್ಲಿ ಸಂಶೋಧನೆಗಳಾಗಬೇಕಿದೆ. ಈ ಇಬ್ಬರೂ ಲೇಖಕರನ್ನು ಕುರಿತಂತೆ ಇದುವರೆಗೂ ಯಾವುದೇ ತೌಲನಿಕ ಸಂಶೋಧನೆಗಳು ನಡೆದಿರುವುದಿಲ್ಲ. ಹಾಗಾಗಿ ಪ್ರಸ್ತುತ ಸಂಶೋಧನೆಗೆ ಅಗತ್ಯವಾದ ಕುವೆಂಪು ಮತ್ತು ತೇಜಸ್ವಿಯವರನ್ನು ಕುರಿತು ಪ್ರತ್ಯೇಕವಾಗಿ ನಡೆದಿರುವ ಕೆಲವು ಮುಖ್ಯವಾದ ಸಂಶೋಧನೆಗಳು ಹಾಗೂ ವಿಮರ್ಶಾ ಲೇಖನಗಳಲ್ಲಿ ಕೆಲವನ್ನು ಮಾತ್ರ ಪ್ರಸ್ತಾಪಿಸುತ್ತೇನೆ.

'ಕುವೆಂಪು ಸಾಹಿತ್ಯ ಒಂದು ಜೀವ ಪರಿಸರ ಅಧ್ಯಯನ' ಎಂಬ ಡಿ.ಲಿಟ್. ಪದವಿಯ ಮಹಾಪ್ರಬಂಧದಲ್ಲಿ ಕೆ. ಪುಟ್ಟಸ್ವಾಮಿ ಅವರು ಜೀವ ಪರಿಸರದ ಹಿನ್ನೆಲೆಯಲ್ಲಿ, ಕುವೆಂಪು ಅವರಿಗೆ ಪ್ರಕೃತಿ ಪ್ರಧಾನ ಪ್ರೇರಣೆ ಎಂಬ ಅಂಶವನ್ನು ಗುರುತಿಸಿದ್ದಾರೆ. ಅಲ್ಲದೆ ನಿಸರ್ಗ, ಪ್ರಕೃತಿ ಮತ್ತು ಪರಿಸರದ ಬಗೆಗೆ 'ಜೀವ ಪರಿಸರ'ದ ವೈಜ್ಞಾನಿಕ ಅಂಶವನ್ನು ಅನ್ವಯಿಸಿ ಪ್ರಕೃತಿ ನೋಡುವ ದೃಷ್ಟಿಯನ್ನು ಅಧ್ಯಯನ ಮಾಡುವುದು ಉದ್ದೇಶ ಎಂದು ಹೇಳಿದ್ದರೂ ವಿವರಣಾತ್ಮಕ ಅಂಶಗಳಿಂದ ಕೂಡಿವೆ. ಅಲ್ಲದೆ, ವಿಜ್ಞಾನ ಮತ್ತು ಸಾಹಿತ್ಯದ ಸಮನ್ವಯತೆಯನ್ನು ಕುವೆಂಪು ಅವರ ಕಾದಂಬರಿಗಳನ್ನು ಆಧಾರವಾಗಿಟ್ಟುಕೊಂಡು ವಿಶ್ಲೇಷಿಸಿದ್ದಾರೆ.

ಪರಿಸರದ ಬಗೆಗೆ ಕುವೆಂಪು ಅವರಿಗಿರುವ ಆರಾಧನಾ ದೃಷ್ಟಿಯನ್ನು ಈಗಾಗಲೇ ಹಲವರು ಗುರುತಿಸಿರುವಂತೆ ಇವರೂ ನಿದರ್ಶನಗಳನ್ನು ನೀಡಿದ್ದಾರೆ. 'ಕಾವ್ಯಗಳು ಪ್ರಕೃತಿಯ ನಿಸರ್ಗ ಸೌಂದರ್ಯ, ಆಧ್ಯಾತ್ಮಿಕ ಅನುಭೂತಿಯಿಂದ

ಮೇಲುಗೈ ಪಡೆದರೆ, ಗದ್ಯ ಕೃತಿಗಳಲ್ಲಿ ಪ್ರಕೃತಿಯ ವೈಜ್ಞಾನಿಕ ಮುಖ ಹೆಚ್ಚು ಪ್ರಧಾನವಾಗಿದೆ' ಎಂಬ ಅಂಶವನ್ನು ವಿಶ್ಲೇಷಿಸುತ್ತಾರೆ. ಆದರೆ 'ಕುವೆಂಪು ಅವರ ಗದ್ಯ ಸಾಹಿತ್ಯದಲ್ಲೂ ಪ್ರಕೃತಿ ಸೌಂದರ್ಯ ಹಾಗೂ ಆಧ್ಯಾತ್ಮಿಕ ಅಂಶಗಳು ಇರುವುದನ್ನು ನನ್ನ ಸಂಶೋಧನೆಯಲ್ಲಿ' ಗುರುತಿಸಲಾಗಿದೆ.

'ಕನ್ನಡ ಕಥನ ಪರಂಪರೆ ಮತ್ತು ಕುವೆಂಪು ಕಥಾ ಸಾಹಿತ್ಯ' ಎಂಬ ಪಿಎಚ್.ಡಿ ಪ್ರಬಂಧದಲ್ಲಿ ಉದ್ದಂಡಯ್ಯ ಅವರು ಕನ್ನಡದಲ್ಲಿ ಕಥಾ ಸಾಹಿತ್ಯ ಬೆಳೆದುಬಂದ ಬಗೆಯನ್ನು ವಿಶ್ಲೇಷಿಸುತ್ತಾ ವಸಾಹತುಶಾಹಿ ಸಂದರ್ಭದಲ್ಲಿ ಕುವೆಂಪು ಕಥೆಗಳ ಪ್ರಭಾವ, ಪರಿಣಾಮಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇವರು ಕುವೆಂಪು ಅವರ ಎಲ್ಲಾ ಕಥನಗಳ ಪ್ರಧಾನ ಪಾತ್ರವೇ ನಿಸರ್ಗ. ಇಂತಹ ಪ್ರಕೃತಿದತ್ತ ಸಹಜ ಜೀವನದಲ್ಲಿ ಪ್ರವೇಶಿಸುವ ಅನ್ಯಸಂಸ್ಕೃತಿ ಮತ್ತು ಆಧುನಿಕತೆಗಳು ಮಲೆನಾಡಿನಲ್ಲಿ ಉಂಟು ಮಾಡುವ ತಲ್ಲಣಗಳನ್ನು ಚರ್ಚಿಸಿದ್ದಾರೆ. ಮಲೆನಾಡಿನ ಶ್ರೇಣೀಕೃತ ವ್ಯವಸ್ಥೆಯ ಕರಾಳ ಬದುಕು, ಮತಾಂತರ ಸಮಸ್ಯೆ ಹಾಗೂ ಸಮಾಜವಾದಿ ಸಂವೇದನೆಗಳನ್ನು ತಮ್ಮ ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ವಸಾಹತುಶಾಹಿ ಸಂಸ್ಕೃತಿಯ ಮತಾಂತರ ಪ್ರಕ್ರಿಯೆಗೆ ಕುವೆಂಪು ಕಥನವು ತೋರಿದ ಪ್ರತಿಕ್ರಿಯೆ, ಸ್ಥಳೀಯ ಮತ್ತು ಕ್ರೈಸ್ತಾದಿ ಪುರೋಹಿತಶಾಹಿ ಸಂಸ್ಕೃತಿಗಳಿಗೆ ಕುವೆಂಪು ಅವರು ತಮ್ಮ ಕಾದಂಬರಿಗಳ ಮೂಲಕ ತೋರಿದ ಪ್ರತಿರೋಧವನ್ನು ನಿದರ್ಶನ ಸಹಿತ ಚರ್ಚಿಸಿದ್ದಾರೆ ಹಾಗೂ ಕುವೆಂಪು ಕಥಾಸಾಹಿತ್ಯದ ಬಗೆಗೆ ಸಮಕಾಲೀನರ ಪ್ರತಿಕ್ರಿಯೆಯನ್ನು ವಿಶ್ಲೇಷಿಸಿದ್ದಾರೆ.

'ಶ್ರೀ ಕುವೆಂಪು ಕೃತಿಗಳಲ್ಲಿ ಪರಂಪರೆ ಮತ್ತು ಆಧುನಿಕತೆ ಒಂದು ಅಧ್ಯಯನ' ಎಂಬ ಪಿಎಚ್.ಡಿ ಪ್ರಬಂಧದಲ್ಲಿ ಪಿ. ಭೋಗರಾಜು ಅವರು ಕುವೆಂಪು ಅವರ ಕಾವ್ಯ, ನಾಟಕ, ಕಾದಂಬರಿ ಹಾಗೂ ವಿಚಾರ –ವಿಮರ್ಶೆಗಳಲ್ಲಿ ಪರಂಪರೆ ಮತ್ತು ಆಧುನಿಕತೆಯ ನಡುವಿನ ಮುಖಾಮುಖಿಯನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಅಲ್ಲದೆ, ಇವರ ಕೃತಿಗಳಲ್ಲಿ ವ್ಯಕ್ತವಾಗುವ ಪರಂಪರೆ ಮತ್ತು ಆಧುನಿಕತೆಗಳ ನಡುವಿನ ಸಂಘರ್ಷಗಳನ್ನು ಗುರುತಿಸುತ್ತಾ ವಿಶ್ಲೇಷಿಸಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಕನ್ನಡ ಸಂಸ್ಕೃತಿ, ಕನ್ನಡತ್ವದ ನಿಜವಾದ ನೆಲೆಗಳು ಅನಾವರಣಗೊಳ್ಳಬೇಕಾದ ಅನಿವಾರ್ಯತೆಯನ್ನು ಸಂಶೋಧನೆಯಲ್ಲಿ ಚರ್ಚಿಸಿದ್ದಾರೆ. ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೊಸ

ಮನ್ವಂತರ ಆಗಬೇಕೆನ್ನುವ ಕುವೆಂಪು ಆಶಯದಲ್ಲಿ ಸರ್ವೋದಯ. ಸಮನ್ವಯ. ಪೂರ್ಣದೃಷ್ಟಿಯನ್ನು ಕಾಣುವ ಸಮತಾವಾದ ಸಮಾಜ ನಿರ್ಮಾಣವಾಗಬೇಕೆಂಬ ಕುವೆಂಪು ಅವರ ಆಶಯವನ್ನು ಕೇಂದ್ರವಾಗಿಟ್ಟುಕೊಂಡು ಸಂಶೋಧನೆ ಮಾಡಿದ್ದಾರೆ.

'ಸರ್ವೋದಯ ಸಂದರ್ಭ ಬೇಂದ್ರೆ –ಕುವೆಂಪು ಕೃತಿಗಳಲ್ಲಿ ಪರಿಸರದ ಪ್ರಶ್ನೆಗಳು' ಎಂಬ ಪಿಎಚ್.ಡಿ ಮಹಾಪ್ರಬಂಧದಲ್ಲಿ ಸಂಗೀತ ಪಿ. ಅವರು ಸಾಹಿತ್ಯ ಮತ್ತು ಕೃತಿಗಳಲ್ಲಿರುವ ಪರಿಸರವನ್ನು ಕುರಿತ ಅಂತರ್‌ಶಿಸ್ತೀಯ ಅಧ್ಯಯನಕ್ಕೊಳಪಡಿಸಿದ್ದಾರೆ. ಕುವೆಂಪು ಕಾವ್ಯದಲ್ಲಿ ಪರಿಸರ, ನಾಟಕದಲ್ಲಿ ಪರಿಸರ ಹಾಗೂ ಬೇಂದ್ರೆ ಕಾವ್ಯ ಪರಿಸರ ಈ ಬಗೆಯ ಅಧ್ಯಾಯಗಳಲ್ಲಿ ಜೀವವಿಕಾಸದ ಬಗೆಗೆ ಹಸಿರು ಅಧ್ಯಯನಗಳ ಹಿನ್ನಲೆಯಲ್ಲಿ ಪರಿಸರವಿಮರ್ಶೆ ಮತ್ತು ಸಾಹಿತ್ಯ ಸಂಬಂಧಗಳ ಬಗೆಗೆ ವಿಶ್ಲೇಷಣೆ ಮಾಡಿದ್ದಾರೆ. ಈ ಸಂಶೋಧನೆಯಲ್ಲಿ ಇಬ್ಬರೂ ಲೇಖಕರ ಪರಿಸರದ ಬಗೆಗಿನ ಚಿಂತನೆಗಳ ವಿಶ್ಲೇಷಣೆ ಆಗಿದೆ. ಆದರೆ, ತೌಲನಿಕವಾದ ಅಭಿಪ್ರಾಯ ವಿಶ್ಲೇಷಣೆ, ಮೌಲ್ಯ ನಿರ್ಧರಣೆಯಂತಹ ಪ್ರಮುಖವಾದ ಅಂಶಗಳು ಇದ್ದಿದ್ದರೆ, ಅಧ್ಯಯನ ಇನ್ನೂ ಉತ್ತಮವಾಗಿರುತ್ತಿತ್ತು. ಇಬ್ಬರು ಲೇಖಕರನ್ನು ಅಧ್ಯಯನಕ್ಕೆ ಒಳಪಡಿಸಿದಾಗ ವಿಶ್ಲೇಷಣಾ ವಿಧಾನದ ವೈಧಾನಿಕತೆಯನ್ನು ಅನುಸರಿಸಿದ್ದರೂ ತೌಲನಿಕವಾದ ವಿಶ್ಲೇಷಣೆ ಮಾಡುವುದು ಸಾಮಾನ್ಯ. ತೌಲನಿಕವಾದ ವಿಶ್ಲೇಷಣೆ ಸಾಕಷ್ಟು ಇಲ್ಲದಿರುವುದು ನನ್ನ ಪ್ರಕಾರ ಒಂದು ಕೊರತೆ ಎನಿಸುತ್ತದೆ. ಆದರೆ ಹಸಿರು ವಿಮರ್ಶೆಯ ತಾತ್ವಿಕತೆಯ ಇವರ ಚಿಂತನೆಗಳು ವಿಶ್ಲೇಷಣೆಗಳು ಉತ್ತಮವಾಗಿ ಮೂಡಿಬಂದಿವೆ. ಈ ಬಗೆಯ ತಾತ್ವಿಕತೆ ವರ್ತಮಾನ ಸಂವೇದನೆಯನ್ನು ಒಳಗೊಂಡಿದೆ.

'ಕುವೆಂಪು ಮತ್ತು ಶಿವರಾಮಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ ತೌಲನಿಕ ಅಧ್ಯಯನ' ಎಂಬ ಪಿಹೆಚ್.ಡಿ ಪ್ರಬಂಧವನ್ನು ಎಲ್.ಸಿ ಸುಮಿತ್ರ ಅವರು ಮಂಡಿಸಿದ್ದಾರೆ. ಕುವೆಂಪು ಮತ್ತು ಕಾರಂತರ ಕೃತಿಗಳಲ್ಲಿ ವರ್ಣಿತವಾಗಿರುವ 'ಪ್ರಕೃತಿ'ಯನ್ನು ಕುರಿತು ತುಲನಾತ್ಮಕ ವಿಶ್ಲೇಷಣೆ ಮಾಡಿದ್ದಾರೆ. ಇಬ್ಬರು ಲೇಖಕರು 'ಪ್ರಕೃತಿ'ಯನ್ನು ಪರಿಭಾವಿಸಿರುವ ರೀತಿ, ಪ್ರಭಾವ, ಪರಿಣಾಮಗಳ ಹಿನ್ನಲೆಯಲ್ಲಿ ವಿಶ್ಲೇಷಣೆಗೊಳಪಡಿಸಿದ್ದಾರೆ. ಕುವೆಂಪು ಅವರ ಜೀವನ ದೃಷ್ಟಿ ಮತ್ತು ಪ್ರಕೃತಿಯ ಬಗೆಗೆ ಅವರ ಒಲವು, ಆರಾಧನೆ, ಅವರು ಬೆಳೆದುಬಂದ ಪರಿಸರ, ಕಾದಂಬರಿಗಳಲ್ಲಿ

ಚಿತ್ರಿತವಾಗಿರುವ ಪರಿಸರ ಛಿತ್ತಿ ಹಾಗೂ ಪ್ರಕೃತಿ ದರ್ಶನದ ನೆಲೆಗಳನ್ನು ಸವಿಸ್ತಾರವಾಗಿ ಚರ್ಚಿಸಿದ್ದಾರೆ.

'ಕುವೆಂಪು ಅವರ ಭಾವಗೀತೆಗಳಲ್ಲಿ ಪ್ರಕೃತಿ ದರ್ಶನ: ದೃಷ್ಟಿ ಮತ್ತು ವಿಕಾಸ' ಎಂಬ ಲೇಖನದಲ್ಲಿ ಎಸ್.ವಿ.ಪರಮೇಶ್ವರಭಟ್ಟ ಅವರು ತಾಳಿರುವ ನಿಲುವುಗಳು ಉತ್ತಮವಾಗಿವೆ. ಕುವೆಂಪು ಅವರ ಆರಂಭದ ಕವನ ಸಂಕಲನಗಳ ಪ್ರಕೃತಿ ಆಧರಿಸಿದ ಕವಿತೆಗಳಲ್ಲಿ ಶಿಶು ಸಹಜ ಪ್ರಕೃತಿ ಪ್ರೇಮವಿದೆ. ವಯೋಮಾನಕ್ಕೆ ತಕ್ಕಂತೆ ಪ್ರಕೃತಿಯನ್ನು ಕಂಡಾಗ ತಮಗೆ ಆದ ಆನಂದ ಮಾತ್ರ ಸರಳವಾಗಿ, ಲಲಿತವಾಗಿ, ಅಯತ್ನಪೂರ್ವಕವಾಗಿ, ಪರಮಾರ್ಶನಹಿತವಾಗಿ ಪ್ರಕೃತಿಗೀತಗಳಲ್ಲಿ ಇಂತಹ ಶಿಶು ಸಹಜವಾದ ಪ್ರಕೃತಿಪ್ರೇಮದ ನೋಟ ನಮಗೆ ದೊರೆಯುತ್ತದೆ ಎಂದು ಅಭಿಪ್ರಾಯಪಡುತ್ತಾರೆ ಹಾಗೂ 'ಕೊಳಲು' ಕವನದ ಸಂಕಲನದ ಕೆಲವು ಪ್ರಕೃತಿ ಕವನಗಳನ್ನು ಉದಾಹರಿಸುತ್ತಾರೆ. ಅನೇಕ ಕವನಗಳು ಪ್ರಕೃತಿಯ ಸುಂದರ ದೃಶ್ಯಗಳನ್ನು ನೋಡಿದಾಗ ಕವಿಗೆ ಆದ ಬೆರಗು, ಆನಂದ ಮುಂತಾದವುಗಳ ನಿರೂಪಣೆಯೆಂದು ಅಭಿಪ್ರಾಯಪಟ್ಟಿದ್ದಾರೆ. 'ಕಾಲಕ್ರಮದಲ್ಲಿ ಕವಿಯ ಆತ್ಮ ಪ್ರಬುದ್ಧವಾಗಿ, ಸುತ್ತಣ ಪ್ರಪಂಚವೆಲ್ಲಾ ರಹಸ್ಯಮಯವಾದ ಪರಬ್ರಹ್ಮನ ಪ್ರತಿಮಾ ಪರಂಪರೆಯಾಗಿ ಗೋಚರಿಸುತ್ತದೆ. ತಾನು ಕಂಡುಂಡ ಚೇತನಾತ್ಮವಾದ ಪ್ರಕೃತಿಯ ಎಲ್ಲ ವಸ್ತುಗಳಿಗೂ ಹೊಸ ಅರ್ಥವೊಂದು ಸ್ಫುರಿಸುತ್ತದೆ'. ಎಂದು ಕವಿದೃಷ್ಟಿ ವಿಕಾಸವಾಗುವುದನ್ನು ವಿವರಿಸುತ್ತಾರೆ. ಆನಂತರ ಕವಿಯ ಪ್ರತಿಕ್ರಿಯೆ, ಸೌಂದರ್ಯ ಮೀಮಾಂಸೆ, ಆಧ್ಯಾತ್ಮಿಕ ಘಟ್ಟವನ್ನು ಮೀರಿ ಮಾನವ ಚೇತನಕ್ಕೂ ಪ್ರಕೃತಿಗೂ ಪರಸ್ಪರ ಸಂಬಂಧವಿರುವುದನ್ನು ಅರಿಯುವ ಘಟ್ಟವನ್ನು ಅನ್ವೇಷಿಸುತ್ತಾರೆ.

ಡಿ.ಆರ್. ನಾಗರಾಜ್ ಅವರು 'ಆಧುನಿಕ ಕನ್ನಡ ಕಾವ್ಯದ ನಾಲ್ಕು ವಸ್ತುಗಳು : ಒಂದು ಪರಿಶೀಲನೆ' (ಶಕ್ತಿಶಾರದೆಯ ಮೇಳ) ಎಂಬ ಸಂಶೋಧನಾ ಪ್ರಬಂಧದಲ್ಲಿ "ಕುವೆಂಪು ಪ್ರಕೃತಿ ಗೀತಗಳಲ್ಲಿ ನಾವು ಕಾಣುವುದು ಪ್ರಾಥಮಿಕ ಮಟ್ಟದ ಸೌಂದರ್ಯಾರಾಧನೆಯನ್ನಲ್ಲ, ಅವುಗಳ ಹಿಂದೆ ಕನ್ನಡಕ್ಕೆ ಹೊಸದಾದ ಒಂದು ಬಗೆಯ ತಹ ತಹ ಇದೆ. ದೈನಂದಿನ ಲಯಗಳಲ್ಲಿ ಸಾಧ್ಯವಾಗದ ಅಖಂಡತೆಯನ್ನು, ಏಕಾಗ್ರತೆಯನ್ನು ಪಡೆಯುವ ತವಕವಿದೆ... ಕುವೆಂಪು ಪ್ರಕೃತಿ ದರ್ಶನದ ಹಿಂದೆ ಒಂದು ಸಂಕೀರ್ಣವಾದ ಅನೇಕ ಚಾರಿತ್ರಿಕ ಪ್ರಕ್ರಿಯೆಗಳ ಹೆಣಿಗೆಗಳು ಕೆಲಸ ಮಾಡಿರುವುದನ್ನು ನೋಡಬಹುದು" ಎಂದು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಕುವೆಂಪು ಅವರ ಕಾವ್ಯದಲ್ಲಿ ಬರುವ ನಿಸರ್ಗ ಜನವಿಹಿತವಾದದ್ದು. ಅವರ

ನಿಸರ್ಗದಲ್ಲಿ ಜನರಿರುವುದು ತೀರಾ ಅಪರೂಪ. ವರ್ಡ್ಸ್‌ವರ್ತ್ ಕಾವ್ಯದಲ್ಲಿ ಬಹುಜನರ ಸಮಾಜವಿದೆ ಎಂಬ ವ್ಯತ್ಯಾಸವನ್ನು ಗುರುತಿಸುತ್ತಾರೆ. ಅಲ್ಲದೆ, ಪರಿಸರ ಮತ್ತು ಜನಜೀವನದ ಮೇಲೆ ಕೈಗಾರಿಕಾ ಕ್ರಾಂತಿಯಿಂದ ಉಂಟಾದ ಸಂಕಷ್ಟಗಳ ಪರಿಸ್ಥಿತಿಗೆ ತೋರಿದ ಪ್ರತಿಕ್ರಿಯೆಯಿಂದಾಗಿಯೇ ವರ್ಡ್ಸ್‌ವರ್ತ್ ಅವರ ಕಾವ್ಯದಲ್ಲಿ ಜನರಿಗೆ ಹೆಚ್ಚು ಮಹತ್ವವಿದೆಯೆನ್ನುತ್ತಾರೆ. ವರ್ಡ್ಸ್‌ವರ್ತ್ ಎದುರಿಸಿದ ಕೈಗಾರಿಕಾ ಕ್ರಾಂತಿಯ ನಂತರ ಇಂಗ್ಲೆಂಡ್‌ನಲ್ಲಿ ಉಂಟಾದ ಪ್ರಕೃತಿವಿನಾಶದ ಆತಂಕ ಕುವೆಂಪು ಅವರಿಗೆ ಎದುರಾಗಲಿಲ್ಲ. ಅಲ್ಲಿ ವಾಸಿಸುವ ಜನರು, ಪ್ರಕೃತಿ ಹಾಗೂ ಅಲ್ಲಿ ಬದುಕುವ ಪ್ರಾಣಿ ಪಕ್ಷಿಗಳ ವಿನಾಶದ ಆತಂಕ ಕುವೆಂಪು ಅವರಿಗೆ ಎದುರಾಗಲಿಲ್ಲ. ಹಾಗಾಗಿ ಡಿ.ಆರ್. ನಾಗರಾಜ್ ಅವರ ಪ್ರಕಾರ ಕುವೆಂಪು ಅವರಿಗೆ 'ಪ್ರಕೃತಿಯ ಚೆಲುವೆಲ್ಲವೂ ದೈವದ ಸಾಕ್ಷಾತ್ಕಾರವೇ. ಅಂತಿಮ ಹಂತದಲ್ಲಿ ಪ್ರಕೃತಿ ಸೌಂದರ್ಯ ಮತ್ತು ದೈವಗಳೆರಡರ ನಡುವೆ ಭಿನ್ನತೆ ಕಾಣುವುದಿಲ್ಲ' ಎಂಬ ಅಂಶಗಳನ್ನು ಸಕಾರಣವಾಗಿಯೇ ಗುರುತಿಸುತ್ತಾರೆ.

'ಕುವೆಂಪು ಕಾದಂಬರಿಗಳಲ್ಲಿ ಪರಿಸರ' ಎಂದು ನಿರ್ದಿಷ್ಟವಾಗಿ ಪರಿಸರದ ಬಗೆಗೇ ಬರೆದಿರುವ ಗುರುಪ್ರಸಾದ ಮರಿಗುದ್ದಿ ಅವರು "ಪರಿಸರದ ನಡುವೆ ಮನುಷ್ಯನ ಬದುಕು ಸಾಗುವುದನ್ನು ಅವುಗಳ ನಡುವಿನ ಸಂಘರ್ಷ ಸಾಮರಸ್ಯಗಳನ್ನು ಸಾಹಿತ್ಯದಲ್ಲಿ ಪ್ರಧಾನವಾಗಿ ಚಿತ್ರಿಸಿದ ವಿರಳರಲ್ಲಿ ಕುವೆಂಪು ಎದ್ದು ಕಾಣುತ್ತಾರೆ" ಎಂಬ ಧೋರಣೆಯಿಂದಲೇ ಅದನ್ನು ಅನ್ವೇಷಿಸಲು ತೊಡಗಿದ್ದಾರೆ. ಎರಡು ಕಾದಂಬರಿಗಳಲ್ಲಿ ಪರಿಸರವೇ ಮುಖ್ಯತತ್ತ್ವವಾಗಿದೆ ಎಂಬುದನ್ನು ಹಲವಾರು ನಿದರ್ಶನಗಳ ಮೂಲಕ ಸಮರ್ಥಿಸುತ್ತಾರೆ. ಆದರೆ ಮುಖ್ಯವಾಗಿ ಪರಿಸರ ಎಂಬುದು ಒಂದು ಸೀಮಿತ ಭೌಗೋಳಿಕ ಪ್ರದೇಶ ಎಂಬ ಸಾಮಾನ್ಯ ಅರ್ಥವೇ ಪ್ರಧಾನವಾಗಿದೆ. ಜೀವಜಾಲದ ಸಂಕೀರ್ಣ ಸಂಬಂಧಗಳನ್ನು ಪರಿಸರದ ಭಿತ್ತಿಯಲ್ಲಿ ವಿಶ್ಲೇಷಿಸುವ ಪ್ರಯತ್ನ ಉತ್ತಮವಾಗಿದೆ.

'ಕುವೆಂಪು ಪರಿಸರ ಮತ್ತು ಪರಿಸರ ವ್ಯವಸ್ಥೆ' ಎಂಬ ಲೇಖನದಲ್ಲಿ ಟಿ.ಎಸ್. ಸತ್ಯನಾಥ್ ಅವರು ಕುವೆಂಪು ಅವರ ಬರಹಗಳಲ್ಲಿ ಮಲೆನಾಡು ಮತ್ತು ಅದರ ಸಂಪನ್ಮೂಲಗಳ ಸೌಂದರ್ಯ ಮತ್ತು ವೈಜಾನಿಕತೆಗಳ ಸಮನ್ವಯಕ್ಕೆ ಹೆಚ್ಚಿನ ಆದ್ಯತೆ ನೀಡಿ ವಿಶ್ಲೇಷಿಸಿದ್ದಾರೆ. ಮಲೆನಾಡಿನ ಪರಿಸರ ವ್ಯವಸ್ಥೆಯ ಶೈಥಿಲ್ಯ ಮತ್ತು ವಸಾಹತುಶಾಹಿ ಪರಿಣಾಮಗಳನ್ನು ವಿಶ್ಲೇಷಿಸಿದ್ದಾರೆ. ಪರಿಸರದ ಜ್ಞಾನಶಾಖೆಯಾಗಿ ಕುವೆಂಪು ಅವರ ಸಾಹಿತ್ಯದಲ್ಲಿ ಪರಿಭಾವಿಸಿ ಮಾಡಿರುವ ವಿಶ್ಲೇಷಣೆ ಉತ್ತಮವಾಗಿದೆ.

ವಿ. ಚಂದ್ರಶೇಖರ ನಂಗಲಿ ಅವರು 'ಕುವೆಂಪು ಕಾದಂಬರಿಯಲ್ಲಿ ಜೈವಿಕ ಜಾಲ' ಕೃತಿಯಲ್ಲಿ ಕುವೆಂಪು ಅವರು ಬಳಸುವ ಪ್ರಕೃತಿಯು ಮಲೆನಾಡಿನ ಒಂದು ಪುಟ್ಟ ಪರಿಸರವಾದರೂ ಆ ಮೂಲಕ ವಿಶ್ವಾತ್ಮಕವಾಗುವ ಪ್ರಯತ್ನ ಪಡುವುದನ್ನು ಗುರುತಿಸುತ್ತಾರೆ. ಕುವೆಂಪು ಅವರು ಕನ್ನಡ ಸಾಹಿತ್ಯದಲ್ಲಿ ಕಾಣುವ ಮೊದಲ ಜೈವಿಕ ಮಾನವನನ್ನು ಸೃಷ್ಟಿಸಿರುವರೆಂದು ಅಭಿಪ್ರಾಯ ಪಡುತ್ತಾರೆ. "ಕುವೆಂಪು ಕಾದಂಬರಿಗಳಲ್ಲಿ ಮಾನವನ ಪರಿಕಲ್ಪನೆ ಆತ್ಮ – ವ್ಯಕ್ತಿ – ಕುಟುಂಬ – ಸಮಾಜ – ಸಮುದಾಯಗಳನ್ನು ಒಳಗೊಂಡಿರುವಂತೆಯೇ ಅಲ್ಲಿಗೇ ವಿರಮಿಸದೆ, ಸ್ಥಳೀಯ ಭೂಗೋಳ, ಜೈವಿಕ ಪರಿಸರ, ಅರಣ್ಯಕ ಜಗತ್ತು, ಜೀವಿಸಂಕುಲಗಳೊಡನೆ ಏಕೀಭವಿಸುವಂತ ಜೈವಿಕ ಮಾನವನ ಪರಿಕಲ್ಪನೆಯನ್ನು ಕಾಣಬಹುದು. ಕುವೆಂಪು ಅವರಿಗೆ 'ಪರಿಸರ ಪ್ರತ್ಯೇಕ ಮಾನವ' ಅಥವಾ 'ಪ್ರತ್ಯೇಕತಾ ಮಾನವ ಪರಿಸರ' ಮುಖ್ಯವಲ್ಲ. ಸಕಲ ಜೈವಿಕ ಪರಿಸರದೊಂದಿಗೆ ಬೆಸೆದುಕೊಂಡ ಮಾನವನ ಸಾಮಾಜಿಕ ಜೀವನದ ಸಂಕೀರ್ಣತೆ, ಆಕ್ರಮಣಶೀಲ ನಾಗರಿಕತೆಯಿಂದಾಗಿ ಕಗ್ಗಾಡಿನ ಹಳ್ಳಿಗಳಲ್ಲಾಗುವ ಸಂಕ್ಷೋಭೆ, ನಿಸರ್ಗದ ಮಡಿಲಲ್ಲಿ ಪ್ರಾಪ್ತವಾಗುವ ತನುಮನ ಪಟುತೆ ಸಂಸ್ಕೃತಿಯ ಚಲನಶೀಲತೆಯಿಂದ ದಕ್ಕುವ ಪ್ರಗತಿ ಮತ್ತು ಪರಿವರ್ತನೆಯ ನಿಯಮದಿಂದ ತಪ್ಪಿಸಿಕೊಳ್ಳಲಾಗದ ಜಟಿಲ ಜೀವನಜಾಲ – ಇವೆಲ್ಲವುಗಳ ಅಖಂಡ ಗ್ರಹಿಕೆ ಕುವೆಂಪು ಕಾದಂಬರಿಗಳಲ್ಲಿದೆ" ಎಂಬ ಅಂಶಗಳನ್ನು ಹಲವಾರು ನಿದರ್ಶನಗಳಿಂದ ಪ್ರತಿಪಾದಿಸುತ್ತಾರೆ.

'ಮಾಯಾಲೋಕ ಓದು' ಎಂಬ ಎಂ.ಫಿಲ್ ಪ್ರಬಂಧದಲ್ಲಿ ಈ.ರಮೇಶ ಅವರು ತೇಜಸ್ವಿ ಸಾಹಿತ್ಯ ಪರಿಚಯಿಸುವುದರೊಂದಿಗೆ 'ಮಾಯಾಲೋಕ'ದಲ್ಲಿ ಸಾಮಾಜಿಕತೆ, ಪರಿಸರ ಸಂಬಂಧಿತ ಅಂಶಗಳನ್ನು ಗುರುತಿಸಿ ವಿಶ್ಲೇಷಿಸಿದ್ದಾರೆ. ಈ ಪ್ರಬಂಧವು ತೇಜಸ್ವಿಯವರ ಮಾಯಾಲೋಕ ಕಾದಂಬರಿಯ ಬಗೆಗೆ ಪರಿಚಯಾತ್ಮಕ ವಿಶ್ಲೇಷಣೆಯನ್ನು ಒಳಗೊಂಡಿದೆ. ತೇಜಸ್ವಿಯವರ ತಾತ್ವಿಕತೆಯ ಗ್ರಹಿಕೆಯ ನೆಲೆಗಳ ಬಗೆಗೆ ಗಮನ ಕೇಂದ್ರೀಕರಿಸಿದ್ದರೆ ಇನ್ನೂ ಹೆಚ್ಚಿನ ಮಹತ್ವ ಪಡೆಯುತ್ತಿತ್ತು.

'ಪೂರ್ಣಚಂದ್ರ ತೇಜಸ್ವಿ ಮತ್ತು ಬಿ.ಜಿ.ಎಲ್. ಸ್ವಾಮಿಯವರ ಪರಿಸರದ ಬಗೆಗಿನ ಚಿಂತನೆಗಳು' ಎಂಬ ಪ್ರಬಂಧವನ್ನು ಎಂ.ಫಿಲ್. ಪದವಿಗೆ ಸುಮಲತ ಬಿ.ಕೆ ಅವರು ಸಲ್ಲಿಸಿದ್ದು, 'ಪರಿಸರದ ಕತೆ' ಮತ್ತು 'ಹಸಿರು ಹೊನ್ನು' ಕೃತಿಗಳನ್ನೇ ಪ್ರಮುಖ ಆಧಾರವಾಗಿಟ್ಟುಕೊಂಡು ಇಬ್ಬರು ಲೇಖಕರ ಪರಿಸರದ ಚಿಂತನೆಗಳನ್ನು

ಪ್ರತ್ಯೇಕ ಅಧ್ಯಾಯಗಳಲ್ಲಿ ವಿಶ್ಲೇಷಿಸಿದ್ದಾರೆ. ಇವರಿಬ್ಬರ ಪರಿಸರಾತ್ಮಕ ಚಿಂತನೆಗಳನ್ನು ಎರಡು ಮಾದರಿಗಳಾಗಿಟ್ಟುಕೊಂಡು, ಅವರ ಕೃತಿಗಳಲ್ಲಿ ವ್ಯಕ್ತವಾಗಿರುವ ಪರಿಸರದ ಸ್ವರೂಪಗಳನ್ನು ವಿಶ್ಲೇಷಿಸಿದ್ದಾರೆ. ಇಬ್ಬರೂ ಲೇಖಕರ ಪರಿಸರದ ಚಿಂತನೆಗಳ ಕೊಡುಗೆಗಳನ್ನು ವಿವರಣಾತ್ಮಕವಾಗಿ ನೀಡಿದ್ದು, ತೌಲನಿಕ ವಿಶ್ಲೇಷಣೆಯ ಅಂಶ ಇದ್ದಿದ್ದರೆ, ಇನ್ನೂ ಹೆಚ್ಚಿನ ಮಹತ್ವ ಪಡೆಯುತ್ತಿತ್ತು.

'ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಬದುಕು-ಬರಹ' ಎಂಬ ಕೃತಿಯನ್ನು ಕರೀಗೌಡ ಬೀಚನಹಳ್ಳಿ ಅವರು ಬರೆದಿದ್ದು, ತೇಜಸ್ವಿ ಅವರ ಜೀವನ ಸಾಧನೆಗಳನ್ನು ವಿವರವಾಗಿ ಕಟ್ಟಿಕೊಟ್ಟಿದ್ದಾರೆ. ತೇಜಸ್ವಿ ಅವರ ಸಣ್ಣ ಕಥೆಗಳು, ಕಾದಂಬರಿಗಳು, ವಿಮರ್ಶಾ ಲೇಖನಗಳು, ಪ್ರವಾಸ ಕಥೆಗಳು, ಅನುವಾದ ಸಾಹಿತ್ಯಗಳ ಬಗೆಗೆ ವಿಶ್ಲೇಷಣೆ ಮಾಡಿದ್ದಾರೆ. ತೇಜಸ್ವಿಯವರ ಬರವಣಿಗೆಯ ಹಿಂದಿರುವ ತಾತ್ವಿಕತೆ, ವೈಜ್ಞಾನಿಕ ಹಾಗೂ ವೈಚಾರಿಕ ದೃಷ್ಟಿಗಳನ್ನು ಗುರುತಿಸಿದ್ದಾರೆ. ತೇಜಸ್ವಿ ಸಾಹಿತ್ಯ ಅಧ್ಯಯನ ಮಾಡುವವರಿಗೆ ಈ ಕೃತಿ ಸಾಕಷ್ಟು ವಿವರಗಳನ್ನು ಒದಗಿಸುತ್ತದೆ.

'ತೇಜಸ್ವಿ ಕಥನ' ಎಂಬ ಟಿ.ಪಿ ಅಶೋಕ ಅವರ ಕೃತಿ, ತೇಜಸ್ವಿ ಅವರ ಸಮಗ್ರ ಸಾಹಿತ್ಯವನ್ನು ಅಂತರ್‌ಸಂಬಂಧಗಳ ನೆಲೆಯಲ್ಲಿ ವಿಮರ್ಶೆಗೆ ಒಳಪಡಿಸಿದ್ದಾರೆ. ತೇಜಸ್ವಿ ಅವರ ಕಥೆಗಳು ಹಾಗೂ ಕಾದಂಬರಿಗಳಲ್ಲಿ ವ್ಯಕ್ತವಾಗುವ ಆಶಯಗಳನ್ನು ವರ್ತಮಾನಸಂವೇದಿ ನೆಲೆಯಲ್ಲಿ ಸೂಕ್ಷ್ಮವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಈ ಕೃತಿ ತೇಜಸ್ವಿ ಅವರ ಎಲ್ಲಾ ಕೃತಿಗಳನ್ನು ಸಂಕ್ಷಿಪ್ತ ವಿಶ್ಲೇಷಣೆ ಮಾಡುವುದರೊಂದಿಗೆ ತೇಜಸ್ವಿಯವರ ಸಮಗ್ರ ಸಾಹಿತ್ಯವನ್ನು ಗ್ರಹಿಸಲು ಸಹಕಾರಿಯಾಗಿದೆ. ತೇಜಸ್ವಿ ಅವರನ್ನು ಕುರಿತು ಅಧ್ಯಯನ ಮಾಡುವವರಿಗೆ ಪೂರಕ ಆಕರವನ್ನು ಒದಗಿಸುತ್ತದೆ.

'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ' ಎಂಬ ಪಿಎಚ್.ಡಿ ಪ್ರಬಂಧದಲ್ಲಿ ಟಿ. ವಿಠಲರಾವ್ ಅವರು, ಕುವೆಂಪು ಅವರ ಒಟ್ಟಾರೆ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ವೈಚಾರಿಕ ನಿಲುವುಗಳ ಹಾಗೂ ಚಿಂತನೆಗಳನ್ನು ವಿಶ್ಲೇಷಣೆ ಮಾಡಿದ್ದಾರೆ.

'ಕುವೆಂಪು ಸಾಹಿತ್ಯದಲ್ಲಿ ಪ್ರಕೃತಿ' ಎಂಬ ವಿಷಯವನ್ನು ಕುರಿತು ಎಂ. ದಾಕ್ಷಾಯಣಮ್ಮ ಅವರು ಪ್ರಕೃತಿ ಕೇಂದ್ರಿತ ದೃಷ್ಟಿಯಲ್ಲಿ ಕುವೆಂಪು ಕೃತಿಗಳನ್ನು ವಿಶ್ಲೇಷಣೆ ಮಾಡಿದ್ದಾರೆ.

'ಪೂರ್ಣಚಂದ್ರ ತೇಜಸ್ವಿ ಅವರ ಸಮಗ್ರ ಸಾಹಿತ್ಯ-ಒಂದು ಅಧ್ಯಯನ' ಎಂಬ ಪಿಎಚ್.ಡಿ ಪ್ರಬಂಧದಲ್ಲಿ ಚೀರನಹಳ್ಳಿ ಸಂಗೀತ ಅವರು, ತೇಜಸ್ವಿ ಅವರ ಎಲ್ಲಾ ಸಾಹಿತ್ಯ ಕೃತಿಗಳನ್ನು ಪರಿಚಯಾತ್ಮಕವಾಗಿ ವಿಶ್ಲೇಷಿಸಿದ್ದಾರೆ.

ಹೀಗೆ ಕುವೆಂಪು ಮತ್ತು ತೇಜಸ್ವಿಯವರನ್ನು ಕುರಿತಾದ ಸಾಕಷ್ಟು ಸಂಶೋಧನೆಗಳು, ಅಧ್ಯಯನಗಳು ಈಗಾಗಲೇ ನಡೆದಿರುವುದನ್ನು ಸಂಶೋಧನಾ ಸಮೀಕ್ಷೆಯಿಂದ ಕಂಡುಕೊಳ್ಳಲಾಗಿದೆ. ಇವುಗಳ ಜೊತೆಗೆ ಕುವೆಂಪು ಮತ್ತು ತೇಜಸ್ವಿಯವರ ಕೃತಿಗಳ ಬಗೆಗೆ ಹಲವಾರು ವಿಮರ್ಶಾಕೃತಿಗಳು, ವಿಮರ್ಶಾಲೇಖನಗಳು ಸಹ ಪ್ರಕಟವಾಗಿವೆ. ಇವೆಲ್ಲವುಗಳನ್ನು ಗಮನಿಸಿ ಪ್ರಸ್ತುತ ಸಂಶೋಧನೆಯ ರೂಪರೇಷೆ ಸಿದ್ಧಪಡಿಸಲಾಗಿದೆ. ಈಗಾಗಲೇ ಸಮೀಕ್ಷೆ ಮಾಡಿರುವ ಆಧಾರದ ಮೇಲೆ ಕುವೆಂಪು ಮತ್ತು ತೇಜಸ್ವಿ ಅವರ ಬಗೆಗೆ ಪರಸ್ಪರ 'ತೌಲನಿಕ ಅಧ್ಯಯನ' ನಡೆಯದಿರುವುದನ್ನು ದೃಢಪಡಿಸಿಕೊಂಡಿದ್ದೇನೆ.

ಮಲೆನಾಡಿನ ಹಿನ್ನೆಲೆಯಲ್ಲಿ ಮೂಡಿಬಂದಿರುವ ಈ ಇಬ್ಬರು ಲೇಖಕರ ಕಥನ(Ficton)ಗಳಲ್ಲಿ ಮೂಡಿಬಂದಿರುವ ವಸ್ತು, ಆಶಯ, ಅಭಿವ್ಯಕ್ತಿ ವಿಧಾನಗಳನ್ನು ಪರಸ್ಪರ ಹೋಲಿಸಿ ವಿಶ್ಲೇಷಣೆ ಮಾಡುವ ಅಗತ್ಯವಿದೆ. ಕುವೆಂಪು ಮತ್ತು ತೇಜಸ್ವಿ ಅವರು ಎರಡು ತಲೆಮಾರಿನ ಸಮರ್ಥ ಪ್ರತಿನಿಧಿಗಳು. ಎರಡು ಯುಗದ ಪ್ರಾತಿನಿಧಿಕ ಬರಹಗಾರರು. ಕುವೆಂಪುರವರಿಂದ ನವೋದಯ ಸಾಹಿತ್ಯ ಹಾಗೂ ಸಾಹಿತಿಗಳು ಪ್ರಭಾವಿತರಾಗಿದ್ದಾರೆ.

ಅದೇ ರೀತಿ ತೇಜಸ್ವಿ ವಿಶಿಷ್ಟ ಗುಣಲಕ್ಷಣಗಳುಳ್ಳ ನವ್ಯೋತ್ತರ ಸಾಹಿತ್ಯದ ಪ್ರತಿನಿಧಿಯಾಗಿದ್ದಾರೆ. ತೇಜಸ್ವಿಯವರ ವಿಶಿಷ್ಟ ಚಿಂತನೆಗಳಿಂದ ನವ್ಯೋತ್ತರ ಸಾಹಿತ್ಯ ಪ್ರಭಾವಿತವಾಯಿತು. ಇವರಿಬ್ಬರ ಕಥೆ-ಕಾದಂಬರಿಗಳು, ಇವರ ಸಮಕಾಲೀನ ಲೇಖಕರಿಗಿಂತ ಭಿನ್ನವಾಗಿ ಪ್ರಕಟವಾಗುತ್ತವೆ. ಪರಂಪರೆ ಹಾಗೂ ಸಮಕಾಲೀನ ಬದುಕಿಗೆ, ಸಮಾಜೋಧಾರ್ಮಿಕ ಸ್ಥಿತ್ಯಂತರಗಳಿಗೆ ಇವರೀರ್ವರು ತೋರುವ ಪ್ರತಿಕ್ರಿಯೆ ಹಾಗೂ ತಳೆಯುವ ನಿಲುವುಗಳು ವಿಶಿಷ್ಟವಾಗಿವೆ. ಈ ಹಿನ್ನೆಲೆಯಲ್ಲಿ ಇವರಿಬ್ಬರ ಕಥನ ಸಾಹಿತ್ಯದಲ್ಲಿ ಪ್ರಧಾನ ಸ್ಪಂದನವಾಗಿ ಕಂಡು ಬರುವ 'ಪರಿಸರ' 'ಸಾಮಾಜಿಕ ಪ್ರಜ್ಞೆ' 'ಆಧುನಿಕತೆ' 'ಬೇಟೆ' ಹಾಗೂ 'ಅಭಿವ್ಯಕ್ತಿ'ಯ ನೆಲೆಗಳನ್ನು, ಇವರ ದೃಷ್ಟಿ ಧೋರಣೆ ಹಾಗೂ ತಳೆಯುವ ನಿಲುವುಗಳನ್ನು

ತೌಲನಿಕವಾಗಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಅಲ್ಲದೆ, ಕನ್ನಡದಲ್ಲಿ ಸಾಹಿತ್ಯ ಕೃತಿಗಳನ್ನು ಓದುವ ಓದುಗರ ಸಂಖ್ಯೆ ಕ್ಷೀಣಿಸುತ್ತಿರುವ ಸಂದರ್ಭದಲ್ಲಿ ಸಾಮಾಜಿಕ ಕಳಕಳಿ, ಜಾಗೃತಿ, ಪ್ರಜ್ಞೆಗಳನ್ನು ಸಶಕ್ತವಾಗಿ ಮೂಡಿಸಿರುವ ಈ ಇಬ್ಬರೂ ಲೇಖಕರ ಕೃತಿಗಳನ್ನು ಮರು ಓದಿಗೆ ಒಳಪಡಿಸಿ, ಪರಸ್ಪರ ಹೋಲಿಸಿ, ಅಧ್ಯಯನ ಮಾಡಬೇಕಾದ ಅಗತ್ಯವನ್ನು ಗ್ರಹಿಸಲಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಮಹತ್ವ ಪೂರ್ಣದ್ದಾಗಿದೆ.

# ಅಧ್ಯಾಯ – ೩

## ಪ್ರೇರಣೆ ಮತ್ತು ಪ್ರಭಾವ

ವ್ಯಕ್ತಿಯೊಬ್ಬ ತನ್ನ ಅಗತ್ಯತೆಗಳ ಪೂರೈಕೆಗೆ ನಿರ್ದಿಷ್ಟ ಗುರಿಯೊಂದನ್ನು ಆಯ್ದು ಅದನ್ನು ಸಾಧಿಸಬೇಕು. ಹೀಗೆ 'ಗುರಿ' ಯೊಂದನ್ನು ಸಾಧಿಸಲು ನಿರ್ದಿಷ್ಟ ಕಾರ್ಯ ವಿಧಾನವನ್ನು ಅನುಸರಿಸುವಂತೆ ಮಾಡುವ ಆಂತರಿಕ ಸ್ಥಿತಿಯೇ 'ಪ್ರೇರಣೆ'. ಇಚ್ಛಿತ ಗುರಿಯತ್ತ ಸಾಗಲು ವ್ಯಕ್ತಿಯನ್ನು ಕ್ರಿಯಾಶೀಲವಾಗಿ ಮಾಡುವ ಚಾಲಕ ಶಕ್ತಿಯೇ ಪ್ರೇರಣೆ. 'ಪ್ರೇರಣೆ' ಎಂಬುದು ಎರಡು ರೀತಿಗಳಲ್ಲಿ ಇರುತ್ತದೆ. ಮಾನವನು ನಿರ್ದಿಷ್ಟ ಕ್ರಿಯೆಗಳನ್ನು ಕೈಗೊಳ್ಳುವಂತೆ ಮಾಡುವ 'ಜೀವಿ'ಗಳ ಒಳಗಿನ ಪ್ರೇರಣೆಗಳು ಆಂತರಿಕ ಪ್ರೇರಣೆ. ಇವು ಜೀವಿಯ ವರ್ತನೆಯ ಮೇಲೆ ಹಿಡಿತವನ್ನು ಹೊಂದಿರುತ್ತವೆ. ಕೆಲವು ಹೊರಗಿನ ಅಂಶಗಳು ಮನುಷ್ಯನನ್ನು ನಿರ್ದಿಷ್ಟ ಕ್ರಿಯೆಗೆ ಪ್ರಚೋದಿಸುತ್ತವೆ. ಪ್ರಭಾವ ಬೀರುತ್ತವೆ. ಇವು ಬಾಹ್ಯ ಪ್ರೇರಣೆಗಳು. ಇವು ವ್ಯಕ್ತಿಯೊಬ್ಬನ ಕ್ರಿಯೆಯೊಂದನ್ನು ಪ್ರಭಾವಿಸುತ್ತವೆ. ನಿಯಂತ್ರಿಸುತ್ತವೆ. ನಿರ್ದೇಶಿಸುತ್ತವೆ.

ವ್ಯಕ್ತಿಯೊಬ್ಬನನ್ನು ತಾನು ಆಸಕ್ತನಾದ ಕ್ರಿಯೆಯೊಂದಕ್ಕೆ ತೊಡಗಿಸಿ ಕೊಳ್ಳುವಂತೆ ಮಾನಸಿಕವಾಗಿ ಪೂರ್ವಭಾವಿಯಾಗಿ ಉತ್ತೇಜಿಸುವುದು 'ಆಸಕ್ತಿ'. ತನ್ನ ಆಸಕ್ತ ಕ್ರಿಯೆಯೊಂದಕ್ಕೆ ನಾವಿನ್ಯತೆಯ ಸ್ಪರ್ಶ ನೀಡಿ ಹೊಸ ಉತ್ಪಾದಕ ಕಾರ್ಯಗಳಲ್ಲಿ ತನ್ನ ಸ್ವಂತಿಕೆಯನ್ನು ಮೆರೆಯುವುದು 'ಸೃಜನಶೀಲತೆ'. ಇದನ್ನೇ ಮೀಮಾಂಸಕರು 'ಪ್ರತಿಭೆ' ಎನ್ನುವರು. ವ್ಯಕ್ತಿಯಲ್ಲಿ ಸುಪ್ತವಾಗಿರುವ ಈ ಪ್ರತಿಭಾಶಕ್ತಿ ಪ್ರಕಾಶನಗೊಂಡಾಗ ಮಾತ್ರ ಸಾಹಿತ್ಯ ನಿರ್ಮಾಣದಂತಹ ವಿದ್ವತ್‌ಕಾರ್ಯ ಅನಾವರಣಗೊಳ್ಳುತ್ತದೆ. ಇದನ್ನೇ ಭಟ್ಟತೌತ,

"ಪ್ರಜ್ಞಾನವನವೋಲ್ಲೇಖಶಾಲಿನೀ ಪ್ರತಿಭಾ ಮತಾ ।
ತದನುಪ್ರಾಣನಾ ಜೀವದ್ವರ್ಣನಾ ನಿಪುಣಃ ಕವಿಃ ॥
ತಸ್ಯ ಕರ್ಮ ಸ್ಮೃತಂ ಕಾವ್ಯಂ.... ".

ಎಂದು ಹೇಳುತ್ತಾನೆ. ಕವಿ ಪ್ರತಿಭೆಯಲ್ಲಿ ಸಾಹಿತ್ಯ ಹೊರಹೊಮ್ಮುತ್ತದೆ. ಕವಿಸೃಷ್ಟಿಯ ರಹಸ್ಯವೆಲ್ಲ 'ಪ್ರತಿಭೆ' ಎಂಬ ಮೂರು ಅಕ್ಷರಗಳಲ್ಲಿ ಅಡಗಿರುತ್ತದೆ ಎಂಬ ತೀ.ನಂ.ಶ್ರೀ ಅವರ ಮಾತು ಸತ್ಯವಾದರೂ ಈ ಪ್ರತಿಭಾಸಂಪನ್ನತೆ, ಯುಕ್ತ ರೀತಿಯಲ್ಲಿ ಪ್ರಕಾಶಗೊಳ್ಳುವಂತೆ ಮಾಡುವುದು ಕೃತಿಕಾರರ ಮೇಲಾದ 'ಪ್ರಭಾವ-ಪ್ರೇರಣೆಗಳು'.

ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯು ಜನ್ಮಜಾತವಾಗಿ ಪ್ರತಿಭಾಸಂಪನ್ನತೆಯನ್ನು ಪಡೆದುಕೊಂಡು ಬರುವುದಿಲ್ಲ. ಸಾಹಿತಿಯಾಗಿ ರೂಪುಗೊಳ್ಳುವುದಕ್ಕೆ ಅಗತ್ಯವಾದ ಶಿಕ್ಷಣ, ಮನೆಯ ಪರಿಸರ, ಬೆಳೆದ ರೀತಿ, ಪ್ರಭಾವಿಸಿದ ವ್ಯಕ್ತಿಗಳು, ಪಡೆದ ಅನುಭವಗಳು ಮುಂತಾದ ಪ್ರೇರಣೆಗಳು ಪ್ರಮುಖ ಪಾತ್ರವಹಿಸುತ್ತವೆ. ಜಗತ್ತಿನ ಪ್ರತಿಯೊಬ್ಬ ಸಾಹಿತಿಯೂ ಇದಕ್ಕೆ ಹೊರತಲ್ಲ. ವ್ಯಕ್ತಿಯೊಬ್ಬನ ಸಾಹಿತ್ಯದ ಹುಟ್ಟಿಗೆ ಈ ಪ್ರೇರಕ ಅಂಶಗಳು ಕಾರಣವಾಗಿ, ಅವನ ಚೈತನ್ಯಕ್ಕೆ ನಿರಂತರ ಜೀವಸೆಲೆಯಾಗಿ ಮಾನಸಿಕ ಶಿಸ್ತಿಗೆ ಬದ್ಧವಾದ ಸೃಷ್ಟಿಶೀಲ ಪ್ರತಿಭೆಯು, ಮಾನವ ಚೈತನ್ಯ ಸಾಧಿಸಬಲ್ಲ ಬೌದ್ಧಿಕ ಮಾನದಂಡಗಳಾಗಿ ನಿಲ್ಲುತ್ತವೆ.

ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿಯವರ ಕಥನಸಾಹಿತ್ಯದಲ್ಲಿ ಚಿತ್ರಿತವಾಗಿರುವ ವ್ಯಕ್ತಿಗಳು, ಪರಿಸರ, ಕಥಾವಸ್ತು, ಸನ್ನಿವೇಶಗಳನ್ನು ಅಧ್ಯಯನ ಮಾಡಿದಾಗ ಪ್ರತಿಯೊಂದು ಅಂಶವೂ ಹಲವಾರು 'ಪ್ರೇರಣೆ'ಗಳ ಪ್ರಭಾವದಿಂದಲೇ ನಿರೂಪಿಸಲ್ಪಟ್ಟಿದೆ. ಇವರ ಕತೆ-ಕಾದಂಬರಿಗಳಲ್ಲಿನ ಪ್ರತಿಯೊಂದು ಪಾತ್ರದ ಹಿನ್ನೆಲೆಯನ್ನು ನೋಡಿದಾಗ ಅದಕ್ಕೆ ಪ್ರೇರಣೆಯಾಗಿ ಹಲವು ವ್ಯಕ್ತಿಗಳಿರುತ್ತಾರೆ. ಕೆಲವೊಂದು ಪಾತ್ರ ನಿರ್ದಿಷ್ಟ ವ್ಯಕ್ತಿಯೊಂದರ 'ಪ್ರೇರಣೆ' ಯಿಂದ ರೂಪಿಸಲ್ಪಟ್ಟಿದೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥನ ಸಾಹಿತ್ಯದಲ್ಲಿ ಬರುವ ಐಲುಮಂಜ, ಪ್ಯಾರ, ಕಿಟ್ಟಣ್ಣ, ಕರಾಟೆ ಮಂಜ, ಹಾವುಗೊಲ್ಲರ ವೆಂಕ್ಟ , ಕಿವಿ ಇತ್ಯಾದಿ ಪಾತ್ರಗಳು ಅವರ ಊರಿನವರೋ ಸ್ನೇಹಿತರೋ ನೆಂಟರೋ ಮನೆಯ ಕೆಲಸದವರೋ ಆಗಿದ್ದಾರೆ. ಕಥಾವಸ್ತುವೂ ಇದಕ್ಕೆ ಹೊರತಾಗಿಲ್ಲ. ಕುವೆಂಪುರವರ ಕತೆ, ಕಾದಂಬರಿಗಳಲ್ಲಿ ಮಲೆನಾಡಿನ ಸಂಕೀರ್ಣ ಜೀವನ ವ್ಯವಸ್ಥೆ, ಕಾಮ-ಪ್ರೇಮ ಜಿಜ್ಞಾಸೆ, ಮೌಢ್ಯ, ಶೋಷಣೆಗಳ ಚಿತ್ರಣವಿದ್ದರೆ ತೇಜಸ್ವಿಯವರ ಸಾಹಿತ್ಯದಲ್ಲಿ ಆಧುನಿಕತೆಯಿಂದಾಗುವ ತಲ್ಲಣಗಳು, ಏಲಕ್ಕಿ ಕಾಫಿ ಬೆಳೆಗಾರರ ಬವಣೆ, ಸಾಮಾಜಿಕ ವ್ಯವಸ್ಥೆಯ ಕಲಸುಮೇಲೋಗರ, ಬದಲಾವಣೆಯ ತುಡಿತಗಳು ವ್ಯಕ್ತವಾಗುವುದನ್ನು ಕಾಣುತ್ತೇವೆ. ಹೀಗೆ ಇವರೀರ್ವರೂ ತಮ್ಮ ಹುಟ್ಟೂರು, ಅಲ್ಲಿನ

ಪರಿಸರ, ಜನರು, ಅಲ್ಲಿನ ಬವಣೆ ಹಾಗೂ ಪಡೆದ ಅನುಭವಗಳನ್ನು ವೈಯಕ್ತಿಕ ನೆಲೆಯಲ್ಲಿ ಅನುಭವಿಸಿದ್ದರ ಪರಿಣಾಮವಾಗಿ ಕಥನಗಳನ್ನು ಸಾಮುದಾಯಿಕ ನೆಲೆಯಲ್ಲಿ ಅಭಿವ್ಯಕ್ತಿಗೊಳಿಸಲು ಸಾಧ್ಯವಾಯಿತು.

'ನಿಸರ್ಗ' ಕುವೆಂಪು ಮತ್ತು ತೇಜಸ್ವಿ ಇಬ್ಬರನ್ನೂ ಅಗಾಧವಾಗಿ ಪ್ರಭಾವಿಸಿದೆ. ಮಲೆನಾಡಿನ ಸುತ್ತ-ಮುತ್ತಲಿನ ಅಪಾರ ವನರಾಶಿ, ವೈವಿಧ್ಯಮಯ ಜೀವಸಂಕುಲ, ಹಳ್ಳ-ತೊರೆಗಳು ಇವರ ಚೇತನದಲ್ಲಿ ಸುಪ್ತವಾಗಿದ್ದ ಸೌಂದರ್ಯಪ್ರಜ್ಞೆಯನ್ನು ಉದ್ದೀಪನಗೊಳಿಸಿ ಸಾರಸತ್ತ್ವಲೋಕಕ್ಕೆ ತಮ್ಮ ಕೃತಿಗಳ ಮೂಲಕ ಅದ್ವಿತಿಯ ಕೊಡುಗೆ ನೀಡುವಂತೆ ಮಾಡಿವೆ. ಮಲೆನಾಡಿನ ಎಲ್ಲ ಮನೆಗಳಂತೆ ಕುವೆಂಪುರವರ ಕುಪ್ಪಳ್ಳಿಯ ಮನೆ ಪ್ರಕೃತಿ ಸೌಂದರ್ಯದ ನೆಲೆಬೀಡಾದ ಸಹ್ಯಾದ್ರಿಶ್ರೇಣಿಯ ದಟ್ಟಕಾಡು ಬೆಟ್ಟಗಳ ನಡುವೆ ಇದ್ದು, ಕವಿ ಹೃದಯ ಉದ್ದೀಪನಕ್ಕೆ ಪೂರಕವಾಗಿತ್ತು. ಕುವೆಂಪುರವರೇ ಸ್ವತಃ ಹೇಳುವಂತೆ,

"ಮನೆಯ ಮುಂದೆಯೇ ಅಡಕೆ ತೋಟದಾಚೆಯೆ ಮೊದಲುಗೊಂಡು ನಡೂ ಆಕಾಶದವರೆಗೆಂಬಂತೆ ಗೋಡೆ ಹಾಕಿದಂತೆ ಕಡಿದಾಗಿ ವಿಜೃಂಭಿಸಿ ಮಹೋನ್ನತವಾಗಿ ಮೇಲೆದ್ದು ನಿತ್ಯಶ್ಯಾಮಲ ಅರಣ್ಯಾಚ್ಛಾದಿತವಾಗಿರುವ ಮಲೆ: ಮತ್ತು ಮನೆಯ ಹಿಂಬದಿಯಿಂದಲೇ ಪ್ರಾರಂಭವಾಗಿ ವಿರಳ ಮರಪೊದೆಗಳಿಂದ ಹಕ್ಕಲು ಹಕ್ಕಲಾಗಿ ಮೇಲೇರಿ ಏರಿ ಬಂಡೆ ಮಂಡೆಯಲ್ಲಿ ಕೊನೆಗೊಂಡಿರುವ ಹಿರಿಯ ಹಾಸುಗಲ್ಲಿನ ಕವಿಶೈಲ. ಇವೆರಡೂ ಕವಿ ಹೃದಯದ ಅಕ್ಕಪಕ್ಕದಲ್ಲಿರುವ ಎರಡು ಶ್ವಾಸಕೋಶಗಳಂತೆ ನನ್ನ ಬಾಲ್ಯದ ರಸಜೀವನದ ಬದುಕಿಗೆ ಉಸಿರನ್ನಿತ್ತು ಪೊರೆದಿವೆ. ಮುಂದೆ ಮಹಾಕವಿಯಾಗಲಿರುವ ಒಂದು ಋಷಿಚೇತನದ ವಿಕಾಸಕ್ಕೆ ವಿಧಿ ಅದಕ್ಕಿಂತಲೂ ಹೆಚ್ಚು ಅರ್ಹವೂ ಅನುಕೂಲವೂ ಆದ ಚಿತ್ರಿರಂಗವನ್ನು ಸವೆಯಲಾರದೆಂದೆ ತೋರುತ್ತದೆ". (ಕುವೆಂಪು., ನೆನಪಿನ ದೋಣಿಯಲ್ಲಿ ೧. ೨೦೦೨. ಪುಟ ೧೧) ಕುವೆಂಪುರವರೇ ಸ್ವತಃ ತಮ್ಮನ್ನು ಮಹಾನ್ ಕವಿಯಾಗಿ ರೂಪಿಸಿರುವಲ್ಲಿ ನಿಸರ್ಗದ ಪ್ರಭಾವವನ್ನು ಈ ಮೇಲಿನ ಸಾಲುಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಬಾಲ್ಯದಿಂದಲೇ ಕುವೆಂಪುರವರಿಗೆ ನಿಸರ್ಗದೆಡೆಗೆ ಅದಮ್ಯ ಆಸಕ್ತಿ. ತಮ್ಮ ಊರಿನ ಸಮೀಪದಲ್ಲಿದ್ದ ಮಾವನ ಮನೆಗೆ ಆಳಿನ ಹೆಗಲ ಮೇಲೆ ಕುಳಿತು ಸವಾರಿ ಮಾಡುತ್ತಿದ್ದಾಗ ದಟ್ಟಕಾಡು ಬೆಟ್ಟಗುಡ್ಡಗಳ ಆ ಪ್ರದೇಶದ ಸೌಂದರ್ಯವನ್ನು ಆಸ್ವಾದಿಸುತ್ತಿದ್ದರು. "ಆನೆಯ ಮೇಲೆ ಕುಳಿತ ಮಾವಟಿಗನಂತೆ ಅಥವಾ

ಅಂಬಾರಿಯ ಮೇಲೆ ಕುಳಿತ ಅರಸುಕುವರನಂತೆ ತುಸು ಎತ್ತರದಿಂದಲೇ ಆ ಅರಣ್ಯಕ ಮನೋಹರ ಭಯಂಕರ ದೃಶ್ಯವನ್ನು ನಿರಪಾಯಸ್ಥಾನದಿಂದ ಮುಗ್ಧ ವಿಸ್ಮಿತವಾಗಿ ವೀಕ್ಷಿಸುತ್ತಾ ಸಾಗುತ್ತಿದ್ದರು. ಬಹುಶಃ ಆಗಲೇ ಇರಬೇಕು ಸಹ್ಯಾದ್ರಿಯ ಅರಣ್ಯದೇವಿ ನನ್ನ ಕವಿಚೇತನದಲ್ಲಿ ದೈವದತ್ತವಾಗಿದ್ದು ಪ್ರಸುಪ್ತಸ್ಥಿತಿಯಲ್ಲಿದ್ದ ಸೌಂದರ್ಯ ಪ್ರಜ್ಞೆಯನ್ನು ಎಚ್ಚರಿಸಿ ಅದಕ್ಕೆ ನಿಸರ್ಗಪ್ರೇಮದೀಕ್ಷೆಯನ್ನಿತ್ತು. ನನ್ನನ್ನು ಪ್ರಕೃತಿ-ಉಪಾಸನೆಗೆ ನಿವೇದಿಸಿದ್ದು" (ಕುವೆಂಪು.. ನೆನಪಿನ ದೋಣಿಯಲ್ಲಿ ೧. ೨೦೦೨. ಪುಟ ೬) ಎಂಬ ಅಂಶಗಳನ್ನು ಗಮನಿಸುವುದಾದರೆ ಕುವೆಂಪುರವರಿಗೆ ತಮ್ಮ ಮನೆ, ಸುತ್ತಲ ನಿಸರ್ಗ ಅವರಲ್ಲಿದ್ದ ಕವಿ ಹೃದಯವನ್ನು ಪ್ರೇರಣೆಗೊಳಿಸಿ ಆ ಮೂಲಕ ಸಾಹಿತ್ಯರಚನೆಗೆ ತೊಡಗುವಂತೆ ಮಾಡಿದೆ. ಅಲ್ಲದೆ ಕುವೆಂಪುರವರ ನಿಸರ್ಗವನ್ನು ಆರಾಧನಾಭಾವದಿಂದ ಕಾಣುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು.

ಕುವೆಂಪುರವರು ಬಾಲ್ಯದಿಂದಲೂ ಪರಿಸರದ ಪ್ರೇರಣೆ--ಪ್ರಭಾವಕ್ಕೆ ಒಳಗಾದರೂ ತೇಜಸ್ವಿ ಮಾತ್ರ ತೀರ ಭಿನ್ನ. ತೇಜಸ್ವಿಯವರ ಬಾಲ್ಯ ಹಾಗೂ ವಿದ್ಯಾಭ್ಯಾಸ ಮೈಸೂರಿನಲ್ಲೇ ಆಯಿತು. ಈ ಕಾರಣದಿಂದ ಕುವೆಂಪುರವರನ್ನು ನಿಸರ್ಗ ಪ್ರಭಾವಿಸಿದಷ್ಟು ತೇಜಸ್ವಿಯವರನ್ನು ಪ್ರಭಾವಿಸಲಿಲ್ಲ ಎನ್ನಲಾಗದು. ತೇಜಸ್ವಿಯವರಿಗೆ ಚಿಕ್ಕದಿನಿಂದಲೂ 'ನಿಸರ್ಗ' ಒಂದು ಕುತೂಹಲ. ನಿಸರ್ಗದೆಡೆಗೆ ಸದಾ ತುಡಿಯುತ್ತಿದ್ದರು. ಇದಕ್ಕೆ ಪ್ರಮುಖ ಕಾರಣ ತಂದೆ ಕುವೆಂಪು. ತಮ್ಮ ಮಲೆನಾಡಿನ ಸೊಗಸು, ಬೇಟೆಯ ರೋಮಾಂಚಕ ಅನುಭವಗಳನ್ನು ತೇಜಸ್ವಿಯವರೊಂದಿಗೆ ಹಂಚಿಕೊಳ್ಳುತ್ತಿದ್ದರು. ಇದರಿಂದ ತೇಜಸ್ವಿ ಅವರು ಸಹಜವೆಂಬಂತೆ ಪರಿಸರ ಪ್ರೇಮ ಬೆಳೆಸಿಕೊಂಡರು. ಪರಿಸರದಿಂದ ಪ್ರಭಾವಿತರಾದರು.

ಇವರ ಎಲ್ಲಾ ಕತೆ, ಕಾದಂಬರಿಗಳಿಗೆ ಮಲೆನಾಡಿನ ಪರಿಸರದಿಂದಲೇ ವಸ್ತುವನ್ನು ಆಯ್ದುಕೊಂಡಿದ್ದಾರೆ. ಕುವೆಂಪು ಪರಿಸರದ ಮಧ್ಯೆ ಹುಟ್ಟಿ ಬೆಳೆದವರು. ಆದರೆ ತೇಜಸ್ವಿ ಬಯಲು ಸೀಮೆಯಲ್ಲಿ ಹುಟ್ಟಿ-ಬೆಳೆದರೂ 'ನಿಸರ್ಗ' ಅವರನ್ನು ಕುವೆಂಪುರವರನ್ನು ಪ್ರಭಾವಿಸಿದಷ್ಟು ವ್ಯಾಪಕವಾಗಿ ಅಲ್ಲದಿದ್ದರೂ ಪ್ರಭಾವ ಬೀರಿರುವುದಂತು ಸತ್ಯ.

ನಿಸರ್ಗದ ಜೊತೆಗೆ ಕುವೆಂಪು ಮತ್ತು ತೇಜಸ್ವಿಯವರು ಹಲವಾರು ವ್ಯಕ್ತಿಗಳಿಂದ ಪ್ರೇರಿತರಾಗಿದ್ದಾರೆ. ಕುವೆಂಪುರವರು ತೀರ್ಥಹಳ್ಳಿಯಲ್ಲಿದ್ದ ದೇವಂಗಿಯವರ ಮನೆಯಲ್ಲಿ ಓದುತ್ತಿದ್ದಾಗ ಹತ್ತಿರದ ನೆಂಟರಾದ ಮಂಜಪ್ಪಗೌಡರು ಕುವೆಂಪುರವರಿಗೆ ತಾನು ಇಂಗ್ಲೀಷ್ ಪುಸ್ತಕಗಳಲ್ಲಿ ಓದಿ ಮೆಚ್ಚಿದ್ದ ವಿಷಯಗಳನ್ನೂ ಜಗತ್ತಿನ ಪಾಶ್ಚಾತ್ಯ ಜಗತ್ತಿನ ಮಹಾಪುರುಷರ ಮಹಾಲೇಖಕರ, ಮಹಾಸೇನಾನಿಗಳ ಮಹಾಕವಿಗಳ ಜೀವನದ ಸಂಗತಿಗಳನ್ನು ಸ್ವಾರಸ್ಯವಾಗಿ ಹೇಳುತ್ತಿದ್ದರು. ಇದರಿಂದ ಕುವೆಂಪು ತುಂಬಾ ಪ್ರಭಾವಿತರಾಗಿದ್ದಾರೆ. ಸ್ವತಃ ಕುವೆಂಪು ಹೇಳುವಂತೆ 'ನನ್ನ ಅಂತಃಶ್ಚೇತನದ ಪೆಟ್ರೋಲಿಗೆ ಇವರು ಹೇಳುವ ವಿಷಯಗಳು ಬೆಂಕಿ ತೋರಿಸಿದಂತಾಗುತ್ತಿತ್ತು'. ಅಲ್ಲದೆ, ಕುವೆಂಪುರವರನ್ನು ಮುಂದಿನ ವಿದ್ಯಾಭ್ಯಾಸಕ್ಕೆ ಮೈಸೂರಿಗೆ ಕಳುಹಿಸುವಂತೆ ಮಾಡಿದವರೂ ಮಂಜಪ್ಪಗೌಡರು.

"ಮೈಸೂರಿನ ವಿಚಾರ, ವಿದ್ಯಾಭ್ಯಾಸ ವಿಚಾರ, ವಿದ್ಯೆಯಿಂದೊದಗುವ ಏಳ್ಗೆಯ ವಿಚಾರ ಗ್ರಂಥಗಳಿಂದ ನಮ್ಮ ಚೇತನ ವಿಕಾಸಗೊಂಡು ನಮಗುಂಟಾಗುವ ಅಭ್ಯುದಯ ವಿಚಾರ ಏನೇನೋ ಹೇಳುತ್ತಾ ಹೇಳುತ್ತಾ.... ಅವರು ನೆನಪಿನಿಂದಲೇ 'ಲಾಂಗ್ ಫೆಲೋ' ಕವಿಯ 'ದಿ ಸಾಮ್ ಆಫ್ ಲೈಫ್' ಎಂಬ ಕವನವನ್ನು ಒಂದೊಂದೆ ಪದ್ಯವನ್ನಾಗಿ ಹೇಳುತ್ತಾ ವಿವರಿಸುತ್ತಾ ಸಾಧ್ಯವಾದಲ್ಲಿ ನಿದರ್ಶನಗಳನ್ನು ಕೊಡುತ್ತಾ ಸಾಗಿದರು.... ಆಲಿಸುತ್ತಾ ಆಲಿಸುತ್ತಾ ಎನ್ನ ಜೀವ ಜ್ವಾಲಾಮಯವಾಯ್ತು, ನನ್ನ ಅಂತಃಶ್ಚೇತನ'ಕ್ಕೊಂದು ಮೊತ್ತಮೊದಲನೆಯ ಉಪನಯನವಾಯ್ತು. ಚೈತನ್ಯ ಕಣ್ಣು ಬಿಟ್ಟಿತು". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೧೧೫)

ಈ ಕವನ ಕುವೆಂಪುರವರ ಬಾಲ್ಯದ 'ಗುರು'ವಾಗಿ ಅವರ ಚೇತನವನ್ನು ಕಣ್ದೆರೆಯಿಸಿದ ಪ್ರಥಮ ದೀಕ್ಷಾಗುರುವಾಗಿಯೆ ನಿಂತಿರುವುದಾಗಿ ಹೇಳಿಕೊಂಡಿರುವುದನ್ನು ನೋಡಿದಾಗ ಹೊಸಮನೆ ಮಂಜಪ್ಪಗೌಡರು, ಕುವೆಂಪು ಅವರು ಇಂಗ್ಲೀಷ್ ಸಾಹಿತ್ಯಕ್ಕೆ ತೆರೆದುಕೊಳ್ಳುವುದಕ್ಕೆ, ಉನ್ನತ ವಿದ್ಯಾಭ್ಯಾಸಕ್ಕೆ ಮೂಲ ಪ್ರೇರಣೆಯಾಗಿರುವುದು ತಿಳಿದುಬರುತ್ತದೆ.

ಕುವೆಂಪು ಸಾಹಿತ್ಯ ರಚನೆಗೆ ತೊಡಗಿನ ಆರಂಭದಲ್ಲಿದ್ದ 'ಕಾಲಘಟ್ಟ' ಕೂಡ ಅವರನ್ನು ಬಹಳವಾಗಿ ಪ್ರಭಾವಿಸಿದೆ. ಬ್ರಿಟೀಷರ ಆಗಮನದೊಂದಿಗೆ ಭಾರತಕ್ಕೆ

ಕಾಲಿಟ್ಟಿದ್ದ ಇಂಗ್ಲೀಷ್ ಶಿಕ್ಷಣ, ಪಾಶ್ಚಾತ್ಯ ಕವಿಗಳ ಪ್ರಭಾವ, ಪಾಶ್ಚಾತ್ಯ ಸಾಹಿತ್ಯದ ವಿಸ್ತೃತ ಅಧ್ಯಯನ ಕುವೆಂಪುರವರನ್ನು ಅಪಾರವಾಗಿ ಪ್ರಭಾವಿಸಿವೆ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿಯೇ ಇದೊಂದು ಸ್ಥಿತ್ಯಂತರದ ಘಟ್ಟವಾಗಿತ್ತು. ಬಂಗಾಳದಲ್ಲಿ ತ್ವರಿತಗತಿಯಲ್ಲಿ ಉತ್ಕೃಷ್ಟ ಸಾಹಿತ್ಯ ಕೃಷಿ ಆರಂಭವಾಗಿತ್ತು.

ಅಲ್ಲದೆ, ಪಾಶ್ಚಾತ್ಯ ಕವಿಗಳು, ಬುದ್ಧಿಜೀವಿಗಳ ಸಾಹಿತ್ಯಿಕ ಆಲೋಚನೆಗಳು, ಮನೋಧರ್ಮಕ್ಕೆ ಇಂಬುಕೊಡುವಂತಹ ಸಾಹಿತ್ಯ ನಿರ್ಮಾಣವಾಗತೊಡಗಿತು. ಇಲ್ಲಿಯವರೆಗೂ ಸಾಧಾರಣವಾಗಿಯೇ ಇದ್ದ ಕನ್ನಡ ಸಾಹಿತ್ಯದಲ್ಲಿ ಹೊಸ ಬಗೆಯ ಸಾಹಿತ್ಯ ಸೃಷ್ಟಿಯ ಗಾಳಿ ಬೀಸತೊಡಗಿತು. ಇದಕ್ಕೆ ಮುಖ್ಯ ಕಾರಣ ಇಂಗ್ಲೀಷ್ ಶಿಕ್ಷಣ. ಪ್ರೌಢಶಾಲೆಯ ಹಂತದಲ್ಲಿಯೇ ವಿದ್ಯಾರ್ಥಿಗಳು ಛಾಸರ್ ಕವನಗಳು, ಷೇಕ್ಸ್‌ಪಿಯರ್‌ನ ನಾಟಕಗಳನ್ನು ಅಭ್ಯಾಸ ಮಾಡುತ್ತಿದ್ದರು. ಅಲ್ಲದೆ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಬ್ರೌನಿಂಗ್, ಟೆನಿಸನ್‌ರ ಕವನಗಳನ್ನೂ ಅಗಾಧ ಪ್ರಮಾಣದ ಇಂಗ್ಲೀಷ್ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರಿಂದ ವಿಭಿನ್ನ ಚಿಂತನಾ ಮನೋಭಾವ, ವಿಶ್ಲೇಷಣಾ ಮನೋಧರ್ಮ ಬೆಳೆಯಿತು. ಅಲ್ಲದೆ ಎಲ್ಲವನ್ನೂ ಒಪ್ಪಿಕೊಳ್ಳುವ ಪಾರಂಪರಿಕ ಗುಣ ಕಡಿಮೆಯಾಗಿ ಪ್ರತಿಯೊಂದನ್ನು ಒರೆಗೆ ಹಚ್ಚಿ ಸ್ವೀಕರಿಸುವ ಮನೋಧರ್ಮ ಬೆಳೆಯಿತು.

ಇಂತಹ ಒಂದು ವೇದಿಕೆ ಕುವೆಂಪುರವರ ಸಾಹಿತ್ಯಾಸಕ್ತಿಗೆ ಸಿದ್ಧವಾಗಿದ್ದು, ಸಹಜವಾಗಿಯೇ ಇದರಿಂದ ಪ್ರೇರಣೆಗೊಂಡರು. ಕುವೆಂಪುರವರು ಕೂಡ ಪ್ರೌಢಶಾಲಾ ಹಂತದಲ್ಲಿಯೇ ಸ್ಕಾಟ್ ಕವಿಯ 'ದಿ ಲೇಡಿ ಆಫ್ ದಿ ಲೇಕ್', ಪ್ರಿಚರ್ಡ್‌ನ 'ಸ್ಟಡೀಸ್ ಇನ್ ಲಿಟರೇಚರ್', ಡಾನಿಯೇಲ್ ಡೀಪೋ ಬರೆದ 'ರಾಬಿನ್‌ಸನ್ ಕ್ರೂಸೋ' ಪಠ್ಯಗಳನ್ನು ಅಭ್ಯಾಸ ಮಾಡಿದ್ದರು.

ಮೈಸೂರಿನ 'ಪಬ್ಲಿಕ್ ಲೈಬ್ರರಿ' ಇವರ ಓದಿನ ದಾಹಕ್ಕೆ ನೀರೆರೆಯುವ ಕೆಲಸ ಮಾಡುತ್ತಿತ್ತು. ಗ್ರಂಥಾಲಯವನ್ನು ಪ್ರವೇಶಿಸುತ್ತಿದ್ದಾಗಲೇ ಕುವೆಂಪು ಅಲ್ಲಿನ ಪುಸ್ತಕ ರಾಶಿಯನ್ನು ಕಂಡು ಪುಳಕಗೊಳ್ಳುತ್ತಿದ್ದರು.

"ನಾನು ಬೆರಗು ಬಡಿದಂತೆ ನಿಂತೆ. ಉನ್ನತವಾದ ಬೀರುಗಳಲ್ಲಿ ಕನ್ನಡಿ ಬಾಗಿಲುಗಳ ಹಿಂದೆ ಸಾಲ್ಗೊಂಡು ನಿಂತಿದ್ದ ಗ್ರಂಥರಾಶಿಗಳ ಮುಂದೆ. ಆ ಗ್ರಂಥಗಳೋ ಎಂತೆಂತಹ ಬಣ್ಣದ ಕ್ಯಾಲಿಕೋ ರಟ್ಟುಗಳಿಂದ ಶೋಭಾಯಮಾನವಾಗಿ ಮನಮೋಹಿಸುತ್ತಿವೆ. ಅವುಗಳ ಹೆಸರುಗಳೋ ಚಿನ್ನದ

ಅಕ್ಷರಗಳಲ್ಲಿ ರಂಜಿಸುತ್ತಿವೆ. ಇಂಗ್ಲೀಷ್ ಅಕ್ಷರಗಳು ಕವಾಯಿತು ಮಾಡುವ ಸೈನಿಕರಂತೆ ಮಿಂಚುತ್ತವೆ. The Poetical works of tennyson ! the Dramas of Shakespeare ! Miloton's paradise lost ! ಇತ್ಯಾದಿ ಇತ್ಯಾದಿ ಬುಡದಿಂದ ನೆತ್ತಿಯವರೆಗೂ ನೋಡಿದಷ್ಟು ಸಾಲದು ನೋಡಿದಷ್ಟೂ ಕಣ್ಣು ತಣಿಯದು. ವಿಪುಲೈಶ್ವರ್ಯಮಯಿಯಾದ ಸಾಕ್ಷಾತ್ ತಾಯಿ ಸರಸ್ವತಿ ದೇವಿಯೆ ಸೆರಗು ಓಸರಿಸಿ. ಸ್ವರ್ಣ ಕಲಶಸದೃಶಗಳಾದ ತನ್ನ ದುಗ್ಧಪೀನ ಪಯೋಧರಗಳನ್ನು ತನ್ನ ಮುಗ್ಧ ಕವಿಕಂದನ ಮುಂದೆ ಚಾಚಿ ನಿಂತಂತ್ತಿತ್ತು. ಬಾ ಪೀಯುಷ ಪಾನಗೈ ಎಂದು". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೧೧೭)

ಕವಿ ತಮ್ಮ ನೆನಪಿನ ದೋಣಿಯಲ್ಲಿ ಹೇಳಿಕೊಂಡಿರುವ ಈ ಸಾಲುಗಳನ್ನು ಗಮನಿಸಿದಾಗ ಅವರಿಗಿದ್ದ ಸಾಹಿತ್ಯಾಸಕ್ತಿಗೆ ಮೈಸೂರಿನ ಕೇಂದ್ರ ಗ್ರಂಥಾಲಯ ಹೇಗೆ ಪ್ರೇರಣೆ ಮಾಡಿದೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ತಮ್ಮ ಮಾನಸಿಕ ಶ್ರದ್ಧೆಯನ್ನು ಸಾಹಿತ್ಯ ರಚನೆಗೆ 'ಗ್ರಂಥಾಲಯ'ದ ಮೂಲಕ ಬಳಸಿಕೊಂಡರು. ಅಲ್ಲದೆ, ಕುವೆಂಪುರವರು ವಿವೇಕಾನಂದರ, ರಾಮಕೃಷ್ಣ ಪರಮಹಂಸರ ಪ್ರಭಾವಕೊಳ್ಳಗಾಗಲು ಮುಖ್ಯ ಕಾರಣವೇ 'ಗ್ರಂಥಾಲಯ'.

ಕುವೆಂಪುರವರ ಓದುಗುಳಿತನದಿಂದ ಸಾರ್ವಜನಿಕ ಗ್ರಂಥಾಲಯದ ಭಾಗವೆಂದೇ ಗುರುತಿಸಲ್ಪಟ್ಟಿದ್ದರು ಅವರೇ ಸ್ವತಃ ಹೇಳುವಂತೆ "ಒಮ್ಮೆ ಚೀರುಗಳಲ್ಲಿ ತುಂಬ ಎತ್ತರವಾಗಿದ್ದ ಅರೆಗಳಲ್ಲಿದ್ದ ಒಂದು ಚಕ್ರಕಾಲಿನ ಏಣಿಯ ಸಹಾಯದಿಂದ ನೋಡಬಹುದಿತ್ತು. ಹೀಗೆ ನೋಡುತ್ತಿದ್ದಾಗಲೇ ನನಗೆ ನನ್ನ ಜೀವನದ ದಿಕ್ಕನ್ನೇ ತಿರುಗಿಸಿ, ನನ್ನ ಬದುಕನ್ನೆಲ್ಲ ಮರ್ತ್ಯದಿಂದ ಅಮರ್ತ್ಯಕ್ಕೆತ್ತ ಚೀಸಿದ ಭಗವತ್ ಕೃಪಾ ಹಸ್ತರೂಪದ ಶ್ರೀರಾಮಕೃಷ್ಣ –ವಿವೇಕಾನಂದ ವಿಷಯಕವಾದ ಕೃತಿಶ್ರೇಣಿಯ ದರ್ಶನವಾದದ್ದು". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೧೩೧)

ಹೀಗೆ ಕುವೆಂಪುರವರನ್ನು ಅಪಾರವಾಗಿ ಪ್ರಭಾವಿಸಿದ ಈ ವಿಭೂತಿ ಪುರುಷರ ಪರಿಚಯ ಗ್ರಂಥಾಲಯದಿಂದಲೇ ಪ್ರಾರಂಭವಾಯಿತು ಎಂಬುದು ಗಮನಾರ್ಹವಾಗಿದೆ

'ನಿಸರ್ಗ'ದ ನಂತರ ಕುವೆಂಪುರವರ ಜೀವನದ ಮೇಲೆ ಕೃತಿಗಳ ಮೇಲೆ ಅತ್ಯಂತ ಪರಿಣಾಮಕಾರಿಯಾಗಿ ಪ್ರಭಾವವನ್ನು ಬೀರಿರುವ ಶಕ್ತಿಗಳೆಂದರೆ,

ಶ್ರೀರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿವಿವೇಕಾನಂದರು. ವಿವೇಕಾನಂದರ ಕೃತಿ ಶ್ರೇಣಿಗಳಿಂದ ಆಕರ್ಷಿಕತರಾದ ಕುವೆಂಪು ಸಂಪೂರ್ಣವಾಗಿ ಅವರ ಜೀವನ, ಉಪದೇಶ, ದರ್ಶನಗಳನ್ನು ಕಂಡು ಪ್ರಭಾವಿತರಾಗುತ್ತಾರೆ. ವಿವೇಕಾನಂದರನ್ನೇ ತಮ್ಮ 'ಗುರುದೇವ' ಎಂದೇ ಭಾವಿಸುತ್ತಾರೆ. ಶ್ರೀ ರಾಮಕೃಷ್ಣ ಜೀವನ ಚರಿತ್ರೆ ಮತ್ತು ವಿವೇಕಾನಂದ ಭಾಷಣಗಳನ್ನು ಓದಿ ಪ್ರಭಾವಿತರಾಗುತ್ತಾರೆ. ಅಲ್ಲದೆ, ಶ್ರೀರಾಮಕೃಷ್ಣ ಆಶ್ರಮಕ್ಕೆ ಭೇಟಿ ನೀಡಿದ ನಂತರ ಸ್ವಾಮಿ ಸಿದ್ದೇಶ್ವರಾನಂದರ ಪರಿಚಯದಿಂದ ಈ ಮೊದಲೇ ಇದ್ದ ಆಧ್ಯಾತ್ಮದ ಬಗೆಗಿನ ಒಲವು, ಇಮ್ಮಡಿಗೊಳ್ಳುತ್ತದೆ. ಅಲ್ಲದೆ ಮೊದಲೇ ತತ್ವಶಾಸ್ತ್ರದ ವಿದ್ಯಾರ್ಥಿಯಾಗಿದ್ದ ಕುವೆಂಪು ಹಲವು ಮತಸ್ಥಾಪಕರ ಹಾಗೂ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿಕೊಳ್ಳುತ್ತಾರೆ.

ಗಾಂಧೀಜಿ, ರವೀಂದ್ರನಾಥ ಠಾಕೂರ್, ಅರವಿಂದರ ಕೃತಿಗಳಲ್ಲಿರುವ ಆದರ್ಶ, ತತ್ವಗಳಿಂದ ಪ್ರಭಾವಿತರಾಗಿದ್ದಾರೆ. ಕುವೆಂಪುರವರ ಹಲವಾರು ಕವನಗಳಲ್ಲಿ ರವೀಂದ್ರನಾಥ ಠಾಕೂರ್‌ರ ಗೀತಾಂಜಲಿಯ ಪ್ರಭಾವ ಕಾಣಬಹುದು. ಗಾಂಧೀಜಿಯವರ ಅಹಿಂಸಾ ಸತ್ಯಾಗ್ರಹದ ಪ್ರಭಾವವನ್ನು The Petriot ಕವನದಲ್ಲಿ ನೋಡಬಹುದು. ಕೇವಲ ಮೂರ್‍ನಾಲ್ಕು ದಿನಗಳಲ್ಲಿ ಸರಳರಗಳೆಯಲ್ಲಿ ಬರೆದ ಜಲಗಾರ, ಯಮನಸೋಲು ಮತ್ತು ಮಹಾರಾತ್ರಿಗಳ ಮೇಲೆ ರವೀಂದ್ರರ, ವಿವೇಕಾನಂದರ ಮತ್ತು ಗಾಂಧೀಜಿಯವರ ಪ್ರಭಾವ ಇದ್ದೇ ಇದೆ. ವಿವೇಕಾನಂದರ ಅಧ್ಯಾತ್ಮದ ಪ್ರಭಾವ ಅವರ ಕತೆ, ಕಾದಂಬರಿಗಳಲ್ಲಿವೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿಯೂ ವಿವೇಕಾನಂದರ ಪ್ರಸ್ತಾಪ ಬರುತ್ತದೆ.

ಸ್ವಾಮೀಜಿ ಅಮೇರಿಕೆಯಿಂದ ಹಿಂದುರುಗಿದ ನಂತರ, ಭಾರತ ಖಂಡದಲ್ಲೆಲ್ಲ ಸಂಚರಿಸಿ, ಬೋಧಿಸಿ ಹೊಸದೊಂದು ಯುಗಶಕ್ತಿಯನ್ನೆ ಉದ್ಬೋಧನಗೊಳಿಸುತ್ತಾರೆ. ವೈಚಾರಿಕಯುಗಕ್ಕೆ ನಾಂದಿ ಹಾಡುತ್ತಾರೆ ಎಂಬ ಸಂಗತಿಯನ್ನು ಗಡದ್ದಯ್ಯ ಪಾತ್ರದ ಮೂಲಕ ತಿಳಿಸುತ್ತಾರೆ. 'ನನ್ನ ಗೋಪಾಲ' ಎಂಬ ಜನಪ್ರಿಯ ಶಿಶುನಾಟಕ ಕೂಡ ವಿವೇಕಾನಂದರ ಪ್ರಭಾವದಿಂದ ರಚಿತವಾದದ್ದೇ ಆಗಿದೆ. ಕಾನೂರು ಹೆಗ್ಗಡಿತಿಯ 'ಹೂವಯ್ಯ' ಹಿಂದೂ ಧರ್ಮದ ಪುನರುತ್ಥಾನದ ಜೊತೆಗೆ ತನ್ನ ಅಂತರ್ಮುಖಿ ವ್ಯಕ್ತಿತ್ವ, ಚಿಂತನೆ, ಆಲೋಚನೆಗಳು ಊರ್ಧ್ವಮುಖಿ ವ್ಯಕ್ತಿತ್ವಗಳಿಂದ ಕಂಗೊಳಿಸುವುದನ್ನು ಗಮನಿಸಿದಾಗ ವಿವೇಕಾನಂದರ ಪ್ರಭಾವ ನಿಚ್ಚಳವಾಗಿರುವುದು ಕಂಡುಬರುತ್ತದೆ.

ಅಲ್ಲದೆ ಹೂವಯ್ಯ ತಾರ್ಕಿಕ ಬದುಕಿನ ಬಗೆಗೆ ನಿರಾಶಾಭಾವನೆಯಿಂದ ಬುದ್ಧನ ಧ್ಯೇಯ-ಧೋರಣೆಗಳಲ್ಲಿ ಆಸಕ್ತವಾಗುವುದು ಕೂಡ ಕುವೆಂಪು ಬುದ್ಧನೆಡೆಗೆ ಪ್ರಭಾವಿತರಾಗಿದ್ದುದ್ದರ ಸೂಚನೆಯೇ ಆಗಿದೆ. ಅಲ್ಲದೆ ಕುವೆಂಪುರವರ ಕಾನೂರು ಹೆಗ್ಗಡಿತಿಯ ಕೊನೆಯಲ್ಲಿ ಬರುವ 'ಸರ್ವೋದಯ'ದ ಪರಿಕಲ್ಪನೆಯನ್ನು ನೋಡಿದಾಗ ವಿನೋಭಾ ಭಾವೆ ಮತ್ತು ಗಾಂಧೀಜಿಯವರ ಚಿಂತನೆಗಳ ಪ್ರಭಾವ ಇವರ ಮೇಲಾಗಿದ್ದುದು ಕಂಡುಬರುತ್ತದೆ. ಅಲ್ಲದೆ ಇವರ ಕಥನ ಸಾಹಿತ್ಯದಲ್ಲಿ ಬರುವ ಬಹಿರಾಡಂಬರದ ಪೂಜೆ, ಡಂಭಾಚಾರ, ಅಂಧಶ್ರದ್ಧೆ, ಅರ್ಥಹೀನ ಸಂಪ್ರದಾಯಗಳ ಬಹಳ ತೀಕ್ಷ್ಣ ತಿರಸ್ಕಾರಕ್ಕೆ ವಿನೋಬಾ ಭಾವೆ, ಗಾಂಧೀಜಿರವರ ತತ್ವ-ಆದರ್ಶಗಳ ಪ್ರಭಾವವೇ ಕಾರಣ. ಅಲ್ಲದೇ ಕುವೆಂಪು ಪ್ರತಿಪಾದಿಸಿದ ಸಪ್ತಸೂತ್ರಗಳು, ಪಂಚಮಂತ್ರಗಳು ಹಾಗೂ ವಿಶ್ವಮಾನವ ಸಂದೇಶವು ಅವರ ಒಟ್ಟಾರೆ ಸಾಹಿತ್ಯದ ಅಂತಸತ್ತ್ವವೇ ಆಗಿದೆ. ಇವುಗಳ ಹಿಂದಿರುವ ಪ್ರಬಲ ಪ್ರೇರಣೆ 'ರಾಮಕೃಷ್ಣ ಪರಮಹಂಸರು, ಸ್ವಾಮಿವಿವೇಕಾನಂದರು, ವಿನೋಭಾ ಭಾವೆ ಹಾಗೂ ಗಾಂಧೀಜಿಯವರ ಜೀವನ, ದರ್ಶನ, ತತ್ತ್ವ ಆದರ್ಶ'ಗಳೇ ಆಗಿವೆ.

ಕುವೆಂಪು ಅವರ ಸಾಹಿತ್ಯಜೀವನದ ಮೇಲೆ ಪ್ರಭಾವ ಬೀರಿದ ಎರಡು ಮುಖ್ಯಘಟನೆಗಳನ್ನು 'ನೆನಪಿನ ದೋಣಿ'ಯಲ್ಲಿ ಪ್ರಸ್ತಾಪಿಸುತ್ತಾರೆ. ವೆಸ್ಲಿಯನ್ ಮಿಶನ್ ಹೈಸ್ಕೂಲಿನಲ್ಲಿ 'ಸುಂದರ' ಎಂಬ ಉಪಾಧ್ಯಾಯರು 'ಬ್ರೌನಿಂಗ್' ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಅನ್ನು ಬೋಧಿಸಿದ ಶೈಲಿಯು ಮುಂದೆ ಸ್ವತಃ 'ಬೊಮ್ಮನ ಹಳ್ಳಿಯ ಕಿಂದರಜೋಗಿ'ಯನ್ನು ರಚಿಸಲು ಪ್ರೇರಣೆಯಾಗುತ್ತದೆ. ಅಲ್ಲದೇ ರವೀಂದ್ರನಾಥ ಠಾಕೂರ್‌ರವರನ್ನು ಹಾಗೂ ಅವರ 'ಗೀತಾಂಜಲಿ'ಯನ್ನು ಪರಿಚಯಿಸಿದವರು 'ಸುಂದರ' ಅವರು ಎಂಬುದನ್ನು ಈ ರೀತಿ ದಾಖಲಿಸುತ್ತಾರೆ.

"ಪೈಡ್ ಪೈಪರ್ ಆಫ್ ಹ್ಯಾಮಲಿನ್ ತನ್ನ ನೃತ್ಯಮಯ ಶೈಲಿಯಿಂದಲೂ ಬಾಲಕ ಚೇತನಗಳಿಗೆ ಕಚಗುಳಿಯಿಟ್ಟು ನಗಿಸುವಂತಹ ಹಾಸ್ಯದಿಂದಲೂ ನನ್ನ ಮೆಚ್ಚಿಗೆಯನ್ನು ಸೂರೆಗೊಂಡಿತು. ಅದು ಎಷ್ಟರಮಟ್ಟಿಗೆ ನನ್ನ ಅಂತಃಕರಣದ ಭಾವಕೋಶವನ್ನು ಪ್ರವೇಶಿಸಿತ್ತು ಎಂದರೆ, ಮುಂದೆ ೧೯೨೬ ರಲ್ಲಿ ಅಂದರೆ ಆರೇಳು ವರ್ಷಗಳ ತರುವಾಯ.... ಆ ಕಥೆಯನ್ನು ಆಧರಿಸಿ 'ಬೊಮ್ಮನ ಹಳ್ಳಿಯ ಕಿಂದರಜೋಗಿ'ಯನ್ನು ರಚಿಸಿದಾಗ ಇಂಗ್ಲಿಷ್ ಭಾಷೆಯ ಮೂಲ ಕವಿತೆ ನನ್ನ ಬಳಿ ಇರಲೇ ಇಲ್ಲ..... ಅದು ಭಾಷಾಂತರವೂ ಅಲ್ಲ, ಅನುವಾದವೂ ಅಲ್ಲ. ಆ ಕಥೆಯನ್ನು ಆಧರಿಸಿರುವ ರೂಪಾಂತರ ಸೃಷ್ಟಿ.

ಮೇಲಿನದಕ್ಕಿಂತಲೂ ಮಹತ್ತ್ವಪೂರ್ಣವಾದ ಮತ್ತೊಂದು ರಸಕ್ಷೇತ್ರಕ್ಕೂ ನನಗೆ ಪ್ರಪ್ರಥಮ ಪ್ರವೇಶವನ್ನು ದೊರಕಿಸಿಕೊಟ್ಟವರೂ ಶ್ರೀಸುಂದರ ಅವರೇ..... ತಮಗೆ ನೂತನ, ಪ್ರಚಲಿತ, ಸ್ವಾರಸ್ಯಕರ ಎಂದು ತೋರಿದವುಗಳನ್ನು ಆಗಾಗ್ಗೆ ಪ್ರಸ್ತಾಪಿಸಿ ನಮ್ಮ ಕುತೂಹಲವನ್ನು ಕೆರಳಿಸಿ, ಚೇತನಕ್ಕೆ ವಿಕಾಸವಿಟ್ಟು, ಪ್ರಜ್ಞೆಯನ್ನು ವಿಕಾಸಗೊಳಿಸುತ್ತಿದ್ದರು..... ಒಂದು ಇಡೀ ಪೀರಿಯಡ್ಡನ್ನೇ ರವೀಂದ್ರನಾಥ ಠಾಕೂರ್‌ರವರ 'ಗೀತಾಂಜಲಿ'ಗೆ ಮುಡಿಪು ಮಾಡಿಕೊಟ್ಟರು..... ಪುಸ್ತಕ ಕೊಂಡು ರೂಮಿಗೆ ಬಂದೆ. ಓದಿದೆ, ಮತ್ತೆ ಓದಿದೆ. ಒಬ್ಬ ಪ್ರೇಮಿ ತನ್ನ ಪ್ರಿಯೆಯನ್ನು ಕೂಡ ಆ ರೀತಿ ಮುದ್ದಾಡಿ ಆಸ್ವಾದಿಸುತ್ತಾನೊ ಇಲ್ಲವೊ? ಎಷ್ಟು ದಿನಗಳು ಅದರ ಮಾದಕತೆಯಲ್ಲಿ ಕಳೆದುವೊ? ದೈನಂದಿನ ಯಥಾಸ್ಥಿತಿಯ ವ್ಯಾಪಾರಗಳೇನೊ ನಡೆಯುತ್ತಿದ್ದುವು ಯಾಂತ್ರಿಕವಾಗಿ..... ಶ್ರೀರಾಮಕೃಷ್ಣ-ವಿವೇಕಾನಂದ ಸಾಹಿತ್ಯದಿಂದ ನನಗೆ ಆಗಲೇ ಗೋಚರವಾಗತೊಡಗಿದ್ದ ಆಧ್ಯಾತ್ಮಿಕ ಸತ್ವಕ್ಕೆ ಒಂದು ಕಾವ್ಯಸೌಂದರ್ಯದ ದರ್ಶನ ದೀಪ್ತಿ ಸಂಗಮಿಸಿದಂತಾಯ್ತು". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೧೪೫)

ಇದೇ ರೀತಿ, ಐರಿಶ್ ಕವಿಯಾದ ಜೇಮ್ಸ್ ಎಚ್. ಕಸಿನ್ಸ್ ಕುವೆಂಪುರವರ ಸಾಹಿತ್ಯಿಕ ಬದುಕಿಗೆ ಪ್ರಮುಖ ತಿರುವನ್ನು ನೀಡಿದವರು. ಪ್ರಾರಂಭದಲ್ಲಿ ಇಂಗ್ಲೀಷ್ ಸಾಹಿತ್ಯದ ಮೇಲೆ ಮೋಹಗೊಂಡು ಇಂಗ್ಲೀಷ್‌ನಲ್ಲೇ ಸಾಹಿತ್ಯ ರಚನೆಗೆ ತೊಡಗಿದ್ದವರನ್ನು ಕನ್ನಡದಲ್ಲಿಯೇ ಕವನ ಕಟ್ಟುವಂತೆ ಸೂಚಿಸಿದರು. ನಮ್ಮ ಅನುಭವ, ಅನಿಸಿಕೆ, ಭಾವನೆಗಳನ್ನು ಇತರೆ ಭಾಷೆಗಿಂತ ಮಾತೃಭಾಷೆಯಲ್ಲಿ ಸುಲಭವಾಗಿ ಸಹಜವಾಗಿ ವ್ಯಕ್ತಪಡಿಸಬಹುದು. ಇದರಿಂದ ನಮ್ಮ ಭಾಷೆಯ ಸಾಹಿತ್ಯವನ್ನು ಶ್ರೀಮಂತಗೊಳಿಸಬಹುದು ಎಂಬ ಸತ್ಯವನ್ನು ಮನದಟ್ಟು ಮಾಡಿದರು. ಇಲ್ಲದಿದ್ದರೆ 'ಶ್ರೀರಾಮಾಯಣದರ್ಶನಂ' ನಂತಹ ಮಹಾಕಾವ್ಯ, ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು ಹಾಗೂ ಇತರ ಉತ್ಕೃಷ್ಟ ಮಟ್ಟದ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ರಚಿವಾಗುತ್ತಲೇ ಇರಲಿಲ್ಲ ಎನ್ನಬಹುದು ಈ ನಿಟ್ಟಿನಲ್ಲಿ ಜೇಮ್ಸ್ ಎಚ್. ಕಸಿನ್ಸ್‌ರ ಪ್ರೇರಣೆ ಅತ್ಯಗತ್ಯವಾಗಿ ಗಮನಿಸಲೇ ಬೇಕಾದದ್ದು. ಕಸಿನ್ಸ್‌ರಷ್ಟೇ ಅಲ್ಲದೆ, ಅದಕ್ಕೂ ಮೊದಲೇ ಬಿ.ಎಂ.ಶ್ರೀಯವರು ಕನ್ನಡದ ಕಡೆಗೆ ತಿರುಗುವಂತೆ ಪ್ರೇರೇಪಿಸಿದ್ದರು ಎಂಬುದನ್ನು ಕುವೆಂಪು ಸ್ವತಃ 'ನೆನಪಿನ ದೋಣಿ'ಯಲ್ಲಿ ಹೇಳಿಕೊಂಡಿದ್ದಾರೆ. "ನನ್ನನ್ನು ಕನ್ನಡದ ಕಡೆಗೆ ತಿರುಗುವಂತೆ ಪರೋಕ್ಷವಾಗಿ ಪ್ರೇರೇಪಿಸಿದವರು ಬಿ.ಎಂ.ಶ್ರೀಯವರೆಂದು ಹೇಳಬಹುದು. ಮುಂದೆ

ಪ್ರತ್ಯಕ್ಷವಾಗಿ ಆ ಕೆಲಸವನ್ನು ಮಾಡಿದವರು ಜೇಮ್ಸ್ ಎಚ್. ಕಸಿನ್ಸ್ ಮಹಾಶಯರಾದರೂ". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೩೩೭)

ಹೀಗೆ ಕನ್ನಡದಲ್ಲಿ ಸಾಹಿತ್ಯ ರಚನೆಗೆ ತೊಡಗುವಂತೆ ಬಿ.ಎಂ.ಶ್ರೀ ಯವರು ಅವರ ಕವನಗಳ ಮೂಲಕ ಕುವೆಂಪುರವರನ್ನು ಪ್ರೇರಣೆ ನೀಡಿದ್ದರೆಂಬುದು ಗಮನಾರ್ಹ ಸಂಗತಿ. ಅಲ್ಲದೆ ಕುವೆಂಪುರವರ ಸಾಹಿತ್ಯ ಜೀವನದ ಪ್ರಾರಂಭದಲ್ಲಿ ಕಾವ್ಯ, ನಾಟಕ ಪ್ರಕಾರಗಳಲ್ಲಿ ಹೆಚ್ಚು ಆಸಕ್ತಿ ತೋರಿದ್ದು, 'ಕಾದಂಬರಿ' ರಚನೆಯೆಡೆಗೆ ನಿರ್ಲಕ್ಷ್ಯ ತೋರಿದ್ದದ್ದು ಕಂಡುಬರುತ್ತದೆ. ಆದರೆ ಟಾಲ್‌ಸ್ಟಾಯ್‌ರವರ ಕಾದಂಬರಿಗಳ ಅಧ್ಯಯನದಿಂದ 'ಕಾದಂಬರಿ ಪ್ರಕಾರ'ದ ಬಗೆಗಿದ್ದ ನಿರ್ಲಕ್ಷ್ಯ ಭಾವ ಹೋಗಿ ಕಾದಂಬರಿ ರಚಿಸಲು ತೀರ್ಮಾನಿಸುತ್ತಾರೆ. ಅವರ 'ನೆನಪಿನ ದೋಣಿಯಲ್ಲಿ' ಆತ್ಮ ಕಥನದಲ್ಲಿ ಟಾಲ್‌ಸ್ಟಾಯ್ ರವರ ಬಗೆಗೆ ಹೇಳಿರುವ ಸಾಲುಗಳು ಈ ಅಂಶವನ್ನು ಸ್ಪಷ್ಟೀಕರಿಸುತ್ತದೆ.

"ಕಾದಂಬರಿಗಳ ವಿಚಾರವಾಗಿ ಮೊದಲಿನಿಂದಲೂ ನಾನು ಅಶ್ರದ್ಧ. ಇಂಗ್ಲೀಷ್ ಸಾಹಿತ್ಯದಲ್ಲಿಯೂ ನಾನು ಕವಿತೆ ಮತ್ತು ನಾಟಕಗಳಿಂದ ಆಕರ್ಷಿತನಾದಂತೆ ಇತರ ಸಾಹಿತ್ಯ ಪ್ರಕಾರಗಳಿಂದ ಮೋಹಿತನಾಗಿರಲಿಲ್ಲ. ಕಾದಂಬರಿ ಎಂದರಂತೂ ಒಂದು ವಿಧವಾದ ತಿರಸ್ಕಾರವಿತ್ತು. ಅವುಗಳಲ್ಲಿ ಏನೂ ಗಾಂಭೀರ್ಯ ಗುರುತ್ವಗಳಿಲ್ಲ ಎಂಬ ಭಾವನೆಯಿಂದಾಗಿ ಆ ಭಾವನೆಯಿಂದ ನನ್ನನ್ನು ಪಾರು ಮಾಡಿ ಕಾದಂಬರಿಗಳಲ್ಲಿಯೂ ಓದಲು ಅರ್ಹವಾದ ಗಂಭೀರವಾದ ಸತ್ವವು ಇದೆ ಎಂಬುದನ್ನು ತೋರಿಸಿಕೊಟ್ಟವನು ಟಾಲ್ ಸ್ಟಾಯ್. 'ರಿಸರಿಕ್ಷನ್' 'ಅನ್ನಾಕರೇನಿನಾ' ಮತ್ತು 'ವಾರ್ ಅಂಡ್ ಪೀಸ್' ಇವುಗಳಲ್ಲಿ.... 'ರಿಸರಕ್ಷನ್' ಎಂಬ ಶೀರ್ಷಿಕೆಯ ಆತನ ಕಾದಂಬರಿಗಳಲ್ಲಿಯೇ ಕಿರಿಯ ಗಾತ್ರದ್ದನ್ನು ಓದಲು ಆರಿಸಿಕೊಂಡೆ ಓದಿದೊಡನೆಯ ಕಾದಂಬರಿಗಳ ಮೇಲಿದ್ದ ನನ್ನ ಪೂರ್ವಾಗ್ರಹ ಸ್ವರೂಪದ ಜಿಗುಪ್ಸೆ. ತಿರಸ್ಕಾರಗಳು ತಿರೋಹಿತವಾಗಿ, ಬರೆಯುವವನಲ್ಲಿ ಮಹತ್ತು ಮಹದ್ದರ್ಶನವೂ ಇರುವ ಪಕ್ಷದಲ್ಲಿ ಕಾದಂಬರಿಯೂ ಗುರುಗಂಭೀರವಾದ ಪೂಜ್ಯಕೃತಿಯೇ ಆಗಿಬಿಡಬಹುದು ಎಂಬುದು ಮನವರಿಕೆಯಾಯಿತು.... ಮುಂದೆ ಕನ್ನಡದಲ್ಲಿ ನಾನೇ ಮೊಟ್ಟ ಮೊದಲನೆಯ ಮಹಾಕಾದಂಬರಿ ಕಾನೂರು ಹೆಗ್ಗಡತಿಯನ್ನು, ತರುವಾಯ ಮಲೆಗಳಲ್ಲಿ ಮದುಮಗಳು ಎಂಬುದನ್ನು ಬರೆದೆ. ಅವುಗಳಲ್ಲಿರುವ ಹರವು, ವಿವರ, ವೈವಿಧ್ಯ, ಕಲೆಗಾರಿಕೆ ಎಲ್ಲವೂ ಟಾಲ್‌ಸ್ಟಾಯ್ ಜಟ್ಟಿಯ ಗರಡಿಯಲ್ಲಿ

ತರಚಿಯತ್ತಾಗಿರುವುದನ್ನು ಕಾಣಬಹುದು ಸುತೀಕ್ಷ್ಣಮತಿಯ ಓದುಗರು". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೬೫೨)

ಟಾಲ್‌ಸ್ಟಾಯ್, ಕುವೆಂಪುರವರು ಮಹಾನ್ ಕಾದಂಬರಿಗಳನ್ನು ರಚಿಸಲು ಪ್ರೇರಣೆಯಾಗಿದ್ದು ಮಾತ್ರವಲ್ಲದೆ ಅದುವರೆಗೆ ಕಾದಂಬರಿ ಪ್ರಕಾರ ಬಗೆಗಿದ್ದ ಪೂರ್ವಾಗ್ರಹಪೀಡಿತ ನಕಾರಾತ್ಮಕ ಮನೋಧೋರಣೆಯನ್ನು ಹೋಗಲಾಡಿಸುವುದಕ್ಕೆ ಪ್ರಭಾವಿಸಲ್ಪಟ್ಟಿರುವುದು ಸ್ಪಷ್ಟವಾಗುತ್ತದೆ.

ಹೀಗೆ ಕುವೆಂಪುರವರ ಸಾಹಿತ್ಯದ ಮೇಲೆ ಅವರ ಪಡೆದ ಶಿಕ್ಷಣ, ಮಲೆನಾಡಿನ ದಟ್ಟ ವನರಾಶಿ, ಮಲೆನಾಡಿನ ಬದುಕು, ಮೈಸೂರಿನ ಶಿಕ್ಷಣ ವ್ಯವಸ್ಥೆ, ಆಂಗ್ಲಕವಿಗಳು, ನೆಂಟರಿಷ್ಟರು, ತಾಯಿ, ಅಧ್ಯಾಪಕವರ್ಗ-ಒಂದಲ್ಲ ಒಂದು ರೀತಿ ಪ್ರಭಾವ ಬೀರಿ, ಪ್ರೇರಣೆ ನೀಡಿದ್ದಾರೆ. ಅವರ ಕೃತಿಗಳಲ್ಲಿ ಸೃಷ್ಟಿಸಿರುವ ಪಾತ್ರಗಳಲ್ಲಿ ಕಥಾವಸ್ತುವಿನಲ್ಲಿ ಅದು ವ್ಯಕ್ತವಾಗಿದೆ.

ಕುವೆಂಪುರವರಿಗೆ ದೊರೆತ ಪ್ರಭಾವ ಪ್ರೇರಣೆಗಳು, ವೈವಿಧ್ಯಮಯ ಅಂಶಗಳು ತೇಜಸ್ವಿ ಅವರಿಗೆ ದೊರಕಿದ್ದು ಕಡಿಮೆ. ಕುವೆಂಪುರವರನ್ನು ಪ್ರಭಾವಿಸಿದಷ್ಟು ನೇರವಾಗಿ ಮಲೆನಾಡಿನ ನಿಸರ್ಗ, ಅಲ್ಲಿನ ಜನ-ಜೀವನ, ಜೀವನ ವಿಧಾನ, ನೈಜ ಅನುಭವಗಳು ಬಾಲ್ಯದ ಘಟನೆಗಳು ಪ್ರಭಾವಿಸಲಿಲ್ಲ. ಆದರೂ ಮಲೆನಾಡಿನ ಪರಿಸರವನ್ನು, ನಿಸರ್ಗದ ನಿಗೂಢತೆ, ಭೇದಿಸುತ್ತಾ ಹೋದಷ್ಟು ಕುತೂಹಲ ಕೆರಳಿಸುವ ಕೌತುಕದ ನೆಲೆಯಲ್ಲಿ ಪರಿಭಾವಿಸಿದ್ದಾರೆ. ನವೋದಯ ಕಾಲಘಟ್ಟದಲ್ಲಿ ಸಾಹಿತ್ಯ ರಚನೆಗೆ ತೊಡಗಿದ ಕುವೆಂಪು ಅವರು ನಿಸರ್ಗವನ್ನು ಆರಾಧನಾ ದೃಷ್ಟಿಯಲ್ಲಿ, ಸೌಂದರ್ಯಾಸ್ವಾದನಾ ನೆಲೆಯಲ್ಲಿ, ದೈವದಂತೆ ಪರಿಭಾವಿಸಲ್ಪಟ್ಟಿದ್ದರೆ, ತೇಜಸ್ವಿ ಇದಕ್ಕಿಂತ ಭಿನ್ನವಾಗಿ ನಿಲ್ಲುತ್ತಾರೆ.

ನವ್ಯಯುಗದಲ್ಲಿ ಸಾಹಿತ್ಯ ರಚನೆಗೆ ಕೈ ಹಾಕಿದ ತೇಜಸ್ವಿಗೆ ನಿಸರ್ಗವು ಗೌಪ್ಯತೆ, ಕುತೂಹಲ, ರಹಸ್ಯ ಕೆರಳಿಸುವ ಚೈತನ್ಯಶೀಲ ಅಂಶವಾಗಿದೆ. ಇವರ ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿಕ್ರಾಸ್, ನಿಗೂಢ ಮನುಷ್ಯರು ಹಾಗೂ ಇತರ ಕಥನ ಸಾಹಿತ್ಯದಲ್ಲಿ ಬರುವ 'ನಿಸರ್ಗ' ತೇಜಸ್ವಿಯವ ಗ್ರಹಿಕೆಯ ಮೂಸೆಯಲ್ಲಿ ವಿಭಿನ್ನವಾಗಿಯೇ ನಿಲ್ಲುತ್ತದೆ. ಕುವೆಂಪುರವರ ಕಥನ ಸಾಹಿತ್ಯದಲ್ಲಿ ಚಿತ್ರಿಸಲ್ಪಟ್ಟಿರುವಷ್ಟು ವರ್ಣಾನಾತ್ಮಕತೆಯನ್ನು ಕಾಣಲು ಸಾಧ್ಯವಿಲ್ಲ. ಆದರೆ ಇಲ್ಲಿನ

'ನಿಸರ್ಗ' ಕುತೂಹಲ ರಹಸ್ಯಗಳನ್ನು ಕೆರಳಿಸುವ ಜೊತೆಗೆ, ನಿಸರ್ಗದ ಬಗೆಗಿನ ಅಗಾಧ ಮಾಹಿತಿ ದೊರೆಯುತ್ತದೆ.

ಯಾವುದೇ ಕೃತಿ ಕಲಾತ್ಮಕತೆಯನ್ನು ಪಡೆದುಕೊಳ್ಳುವುದು, ಸ್ಥಾಪಿತ ನಿಲುವುಗಳನ್ನು ಇರುವಂತೆಯೇ ಬರಿದೇ ಒಪ್ಪಿಕೊಳ್ಳದೆ ಲೇಖಕನ ಚಿಂತನೆಯ ಮೂಸೆಯಲ್ಲಿ ಮಥಿಸಿ ವಿಭಿನ್ನವಾಗಿ ನಿರೂಪಿಸಲ್ಪಟ್ಟಾಗ ಮಾತ್ರ. ಕುವೆಂಪು ಮತ್ತು ತೇಜಸ್ವಿ ಇಬ್ಬರಲ್ಲೂ ಈ ವಿಷಯದಲ್ಲಿ ಸಾಮ್ಯತೆ ಇದೆ. ಇವರಿಬ್ಬರ ಕಥನದಲ್ಲಿ ಬರುವ ಪಾತ್ರಗಳು, ಪರಿಸರ, ವಸ್ತು ಎಲ್ಲವೂ ಇವರು ಪಡೆದ ಪ್ರೇರಣೆ ಹಾಗೂ ಪ್ರಭಾವಗಳಿಂದಲೇ ರೂಪಿತವಾಗಿವೆ. ಆದರೂ ಸ್ಥಾಪಿತ ನೆಲೆಯಲ್ಲಿ ನಿಲುವುಗಳನ್ನು ಒಪ್ಪಿಕೊಳ್ಳದೆ, ಅದನ್ನು ಕೂಲಂಕಷವಾಗಿ ಪರಿಶೀಲಿಸಿ, ವಿಶ್ಲೇಷಿಸಿ ವಿಭಿನ್ನ ಆಯಾಮಗಳಲ್ಲಿ, ವಿಭಿನ್ನ ಶೈಲಿಗಳಲ್ಲಿ ಅನಾವರಣಗೊಳಿಸುವುದು ಇಬ್ಬರ ವೈಶಿಷ್ಟ. ಕುವೆಂಪುರವರು ಸಾಹಿತ್ಯ ರಚಿಸಲು ತೊಡಗಿದ ಕಾಲಘಟ್ಟಕ್ಕೂ ತೇಜಸ್ವಿಯವರು ಸಾಹಿತ್ಯ ರಚಿಸಿದ ಕಾಲಘಟ್ಟಕ್ಕೂ ದಶಕಗಳ ಅಂತರವಿದೆ. ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಕಾಲಘಟ್ಟದ ಜಗಿತವನ್ನು ಕಾಣುತ್ತೇವೆ.

ಪೂರ್ಣಚಂದ್ರ ತೇಜಸ್ವಿಯವರನ್ನು ನಿಸರ್ಗದಡೆಗೆ ಪ್ರಚೋದಿಸಿದವರು ಪ್ರೇರಣೆ ನೀಡಿದವರು ತಂದೆ ಕುವೆಂಪು. ಪ್ರಾರಂಭಿಕ ಜೀವನ, ಪ್ರಾಥಮಿಕ ಶಿಕ್ಷಣವನ್ನು ಮಲೆನಾಡಿನಲ್ಲೇ ಕಳೆದ ಕುವೆಂಪು ತಮ್ಮ ಸಾಹಿತ್ಯ ರಚನೆಗೆ ತೊಡಗಿದ್ದು ಮೈಸೂರಿನಲ್ಲಿ. ಮಲೆನಾಡನ್ನು ಬಿಟ್ಟು ಬಂದರೂ ಅದರ ಮೇಲಿನ ವಾಂಛೆ, ಹಂಬಲ ಅವರ ಕೃತಿಗಳಲ್ಲಿ ವ್ಯಕ್ತವಾಗುತ್ತವೆ. ತೇಜಸ್ವಿ ಮೈಸೂರಿನಲ್ಲೇ ಹುಟ್ಟಿ ಬೆಳೆದರೂ, ಮಲೆನಾಡಿನ ನಿಸರ್ಗ ಅವರನ್ನು ಅಪಾರವಾಗಿ ಪ್ರಭಾವಿಸಿದೆ. ಇದಕ್ಕೆ ಕಾರಣ ತಂದೆ ಕುವೆಂಪು. 'ಪರಿಸರದ ಕಥೆ'ಯ ಮುನ್ನುಡಿಯಲ್ಲಿ ತೇಜಸ್ವಿ ಹೇಳುವ ಮಾತುಗಳನ್ನು ನೋಡಿದಾಗ ಈ ಅಂಶ ಸ್ಪಷ್ಟವಾಗಿ ಗೋಚರವಾಗತ್ತದೆ. "ನನ್ನ ತಂದೆ ಕುವೆಂಪು ಅವರು ಕ್ರಿಮಿ ಕೀಟಗಳ ಬಗ್ಗೆ ಹೇಳುತ್ತಿದ್ದ ವಾಖ್ಯಾನ್ನ ವಿವರಣೆಗಳು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಅವರ ತಾರುಣ್ಯದ ಕಾಡಿನ ಮತ್ತು ಬೇಟೆಯ ರೋಮಾಂಚನ ಅನುಭವಗಳನ್ನು ಕೇಳಿ ಪ್ರಭಾವಿತನಾದ ನಾನು ತಮ್ಮ ತಂದೆಯವರು ಏಕಾದರೂ ಮೈಸೂರಿಗೆ ಪಾಠ ಹೇಳಲು ಮಲೆನಾಡನ್ನು ತೊರೆದು ಬಂದರೋ ಎಂದು ವ್ಯಥೆ ಪಡುತ್ತಿದ್ದೆ. ನಾನು ಮಲೆನಾಡಿನ ಮೂಡಿಗೆರೆಯಲ್ಲಿ ಕಾಡು ತೆಗೆದುಕೊಂಡು ಕಾಫಿ ತೋಟ ಮಾಡಲು ನಿರ್ಧರಿಸಲು, ಕಾಫಿ ತೋಟದ ಲಾಭಕ್ಕಾಗಲೀ ಹಳ್ಳಿಗೆ ಹಿಂದುರುಗುವ

ಆದರ್ಶಕ್ಕಾಗಲೀ ವ್ಯವಸಾಯದ ಮೇಲಿನ ಪ್ರೀತಿಯಿಂದಾಗಲೀ ಖಂಡಿತ ಅಲ್ಲ. ಯಾರ ಹಂಗು, ಭಯ, ಬೈಗುಳಗಳ ಕಾಟ ಇಲ್ಲದೆ ಕಾಡು-ಮೇಡು ಅಲೆದುಕೊಂಡು ಇರಬೇಕು ಎಂಬುದೊಂದೆ ಮುಖ್ಯ ಕಾರಣ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೪)

ತೇಜಸ್ವಿಗೆ ನಿಸರ್ಗದ ಬಗೆಗೆ ಬಾಲ್ಯದಿಂದಲೂ ಒಂದು ಬಗೆಯ ಪ್ರೀತಿ, ಕೌತುಕ ಇದೆ. ಅಲ್ಲದೆ ತಮ್ಮ ತಂದೆಯವರ ಅನುಭವಗಳನ್ನು ಸ್ವಂತ ಅನುಭವಗಳನ್ನಾಗಿ ಮಾಡಿಕೊಳ್ಳಲು ಬಯಸಿದರು. ಅದರಂತೆ ಮೈಸೂರನ್ನು ತೊರೆದು ಮಲೆನಾಡಿನ ಮೂಡಿಗೆರೆಯಲ್ಲಿ ಕಾಡು ತೆಗೆದುಕೊಂಡು ಕಾಫಿತೋಟ ಮಾಡಲು ನಿರ್ಧರಿಸಿದ್ದು, ನಿಸರ್ಗದೆಡೆಗೆ ಅವರಿಗಿದ್ದ ಕುತೂಹಲದಿಂದ, ನಿಸರ್ಗದ ಮಧ್ಯೆ ಜೀವಿಸಬೇಕೆಂಬ ಪ್ರೀತಿಯಿಂದ. ಇವರ ಬಹುತೇಕ ಎಲ್ಲಾ ಕೃತಿಗಳಲ್ಲಿ ನಿಸರ್ಗದೆಡೆಗೆ ಇವರಿಗಿರುವ ಪ್ರೀತಿ, ಕೌತುಕ ವ್ಯಕ್ತವಾಗಿವೆ.

ಈ ಅಂಶಗಳನ್ನು ಗಮನಿಸಿದಾಗ ಮಲೆನಾಡಿನ ನಿಸರ್ಗದ ರಮಣೀಯತೆಯನ್ನು, ಮಲೆನಾಡಿನ ಜೀವನದ ಭಾಗವೇ ಆದ 'ಬೇಟೆ'ಯ ರೋಚಕತೆಯನ್ನು ಕುವೆಂಪು ಹೇಳಿದ್ದರಿಂದಲೇ ತೇಜಸ್ವಿ ಅವರು ನಿಸರ್ಗದೆಡೆಗೆ ಕೌತುಕ, ಪ್ರೀತಿಯನ್ನು ಬೆಳೆಸಿಕೊಂಡರು ಎಂಬುದು ಅವರ ಕೃತಿಗಳಲ್ಲಿ ಕಂಡುಬರುತ್ತದೆ. 'ಕರ್ವಾಲೋ', 'ಜುಗಾರಿಕ್ರಾಸ್', 'ಚಿದಂಬರ ರಹಸ್ಯ', 'ನಿಗೂಢ ಮನುಷ್ಯರು' ಕೃತಿಗಳಲ್ಲಿ ಚಿತ್ರಿತವಾಗಿರುವ 'ನಿಸರ್ಗ' ಮಲೆನಾಡಿನ ನಿಸರ್ಗವೇ ಆಗಿದೆ. ಮಲೆನಾಡಿನ ಸ್ವಚ್ಛಂದ ಬದುಕನ್ನು ಬದುಕಲು, ಆಸ್ವಾದಿಸಲು ತೇಜಸ್ವಿ ಮೈಸೂರನ್ನು ತೊರೆದು ಮಲೆನಾಡಿಗೆ ಬಂದು ನೆಲಸಲು ಕಾರಣವು ಇದೇ ಆಗಿದೆ. ಪರಿಸರದ ಕತೆಯಲ್ಲಿ ಅವರೇ ಹೇಳುವಂತೆ ಪ್ರಕೃತಿ ಮತ್ತು ಪರಿಸರದ ಬಗ್ಗೆ ತೇಜಸ್ವಿಯವರಿಗೆ ಚಿಕ್ಕಂದಿನಿಂದಲೂ ಇರುವ ಕುತೂಹಲಕ್ಕೆ ಮುಖ್ಯ ಕಾರಣವೇ ಕುವೆಂಪು, ತಂದೆಯವರ ಪ್ರಭಾವಕ್ಕೊಳಗಾಗಿ, ಕೊನೆಗೆ ಪರಿಸರದ ಬಗ್ಗೆ ಶ್ರದ್ಧೆ ಮೂಡಿಸಿಕೊಂಡರು. ಅವರ ಕೃತಿಗಳಲ್ಲೂ ಅದನ್ನು ಪರಿಣಾಮಕಾರಿಯಾಗಿ ದುಡಿಸಿಕೊಂಡರು ಅಲ್ಲದೆ ಅವರ ಬಹುತೇಕ ಎಲ್ಲಾ ಕತೆಗಳಿಗೂ ಕಾದಂಬರಿಗಳಿಗೂ ಮಲೆನಾಡಿನ ಪರಿಸರದಿಂದಲೇ ವಸ್ತುವನ್ನು ಆಯ್ದುಕೊಂಡಿದ್ದಾರೆ.

ತೇಜಸ್ವಿ ಹಾಗೂ ಕುವೆಂಪುರವರ ಪ್ರಕೃತಿಯೆಡೆಗಿನ ದೃಷ್ಟಿಕೋನ ತೀರಾ ಭಿನ್ನವಾದದ್ದು. ಕುವೆಂಪುರವರು ಸೌಂದರ್ಯಾಸ್ವಾದನೆ, ವರ್ಣನಾತ್ಮಕವಾಗಿ

ಪ್ರಕೃತಿಯನ್ನು ಆರಾಧಿಸುವಂತೆ ಚಿತ್ರಿಸಿರುವುದು 'ಕಾನೂರು ಹೆಗ್ಗಡಿತಿ' 'ಮಲೆಗಳಲ್ಲಿ ಮದುಮಗಳು' ಹಾಗೂ ಇನ್ನಿತರ ಕೃತಿಗಳಲ್ಲಿ ಕಂಡುಬರುತ್ತದೆ. ಆದರೆ ಪ್ರಕೃತಿಯಡೆಗೆ ತೇಜಸ್ವಿ ದೃಷ್ಟಿಕೋನ ಧೋರಣೆಗಳೇ ಬೇರೆ. 'ನಿಸರ್ಗ'ವನ್ನು ತೇಜಸ್ವಿ 'ರಹಸ್ಯ'ವೆಂದೇ ಪರಿಭಾವಿಸುತ್ತಾರೆ. ನಿಸರ್ಗದ ನಿಗೂಢತೆಯನ್ನು ಆಸ್ವಾದಿಸುತ್ತಾರೆ. ರಹಸ್ಯವನ್ನು ಬೇಧಿಸಲು ಕಾರ್ಯೋನ್ಮುಕರಾಗುತ್ತಾರೆ. ತನ್ಮೂಲಕ ನಿಸರ್ಗದ ಬಗೆಗಿನ ಹೊಸ ಹೊಳಹುಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಕರ್ವಾಲೋ ಕಾದಂಬರಿಯಲ್ಲಿಯ 'ಹಾರುವ ಓತಿ' ಅನ್ವೇಷಣೆ ಇದಕ್ಕೊಂದು ಸ್ಪಷ್ಟ ನಿದರ್ಶನ.

ಭೇದಿಸುತ್ತಾ ಹೋದಷ್ಟು ಪ್ರಕೃತಿ ನಿಗೂಢ. ಅದನ್ನು ಆಸ್ವಾದಿಸುತ್ತಾ ಹೋಗಬೇಕೇ ಹೊರತು ಮೂಲ ಹುಡುಕುತ್ತಾ ಹೋಗುವುದು ಮೂರ್ಖತನ. ಪ್ರಕೃತಿ ಮನುಷ್ಯನ ಪ್ರಜ್ಞೆಗೂ ಮೀರಿದ್ದು. ಉನ್ನತವಾದದ್ದು. ಅಗಾಧ ರಹಸ್ಯವನ್ನು ಬಚ್ಚಿಟ್ಟುಕೊಂಡಿರುವ ವೈಚಿತ್ರಗಳ ಗಣಿ ಎಂಬ ಪಾರಮಾರ್ಥಿಕ ಸತ್ಯವನ್ನು ಅವರ ಕೃತಿಗಳಲ್ಲಿ ವ್ಯಕ್ತಪಡಿಸುತ್ತಾರೆ. ಇದಕ್ಕೆ ಜುಗಾರಿಕ್ರಾಸ್‌ನ 'ಕೆಂಪುಹರಳು'ಗಳ ಶೋಧ, 'ಮಾಯಾಲೋಕ'ದಲ್ಲಿ 'ಝುರಿ'ಯ ಮೂಲವನ್ನು ಹುಡುಕುವ ಸನ್ನಿವೇಶಗಳೇ ಸಾಕ್ಷಿ. 'ನಿಸರ್ಗ' ತೇಜಸ್ವಿ ಪರಿಭಾವಿಸಿದಂತೆ ನಿತ್ಯ ನೂತನವಾದದ್ದು. ಸಸ್ಯ, ಪ್ರಾಣಿ, ಪಕ್ಷಿಗಳ ರಚನೆ, ಜೀವನ ವಿಧಾನ ಅವರಿಗೆ ಮಾಹಿತಿ ತಿಳಿದುಕೊಳ್ಳುವ ಅಂಶವೇ ಆಗಿದೆ. ಇದಕ್ಕೆ ಅವರ ಕೃತಿಗಳಲ್ಲಿ ಹಲವಾರು ನಿದರ್ಶನಗಳು ಸಿಗುತ್ತವೆ.

"ಆ ಮರಕುಟುಕುವ ಹಕ್ಕಿ ಎಷ್ಟು ವೇಗವಾಗಿ ಮರವನ್ನು ಕುಟ್ಟುತ್ತಿತ್ತೆಂದರೆ ಕುಟ್ಟಲು ಶುರುಮಾಡಿದರೆ ಅದರ ತಲೆ, ಕುತ್ತಿಗೆಗಳು ಕಣ್ಣಿಗೆ ಕಾಣುತ್ತಲೇ ಇರಲಿಲ್ಲ. ತಲೆಯನ್ನೇ ಸುತ್ತಿಗೆ ರೀತಿ ಅದು ಮರಕ್ಕೆ ಬಡಿಯಲು ಉಪಯೋಗಿಸುವುದನ್ನು ನೋಡಿ ನನಗೆ ಗಾಬರಿಯಾಯ್ತು.... ಆ ಹಕ್ಕಿ ತಲೆಯೊಳಗಿರುವ ಮೆದುಳಿನ ಕತೆ ಏನು? ಅದಿರಲಿ ಈ ಹಕ್ಕಿಗೆ ಮರದೊಳಗಿರುವ ಹುಳುಗಳು ಇಂಥ ಕಡೆಯೇ ಇದೆ ಎಂದು ಹೇಗೆ ಪತ್ತೆ ಮಾಡಿ ತೂತು ಹೊಡೆಯುತ್ತದೆ? ಇವನ್ನೆಲ್ಲ ಯೋಚಿಸಿದಷ್ಟು ನನ್ನ ಸುತ್ತ-ಮುತ್ತಲ ಪರಿಸರ ರಹಸ್ಯಮಯವಾಗುತ್ತದೆ. ಫುಕುವೋಕಾ ಹೇಳಿದ ಹಾಗೆ, 'ಇದನ್ನೆಲ್ಲಾ ಸಂಪೂರ್ಣ ತಿಳಿಯುತ್ತೇನೆಂದು ಹೋಗುವುದು ಮೂರ್ಖತನವೇ ಸರಿ. ಸುಮ್ಮನೆ ಅಗತ್ಯ ಇದ್ದಷ್ಟನ್ನು ಮಾತ್ರ ತಿಳಿದುಕೊಂಡು ಮಿಕ್ಕುದ್ದನ್ನು ನೋಡಿ ಅಚ್ಚರಿಪಡುತ್ತಾ ಇದ್ದು ಬಿಡುವುದು ಒಳ್ಳೆಯದು'.

ಮರಕುಟುಗನ ಹಕ್ಕಿ ತಲೆಯೊಳಗೆ ಏನೇನು ಉಪಕರಣಗಳಿವೆಯೋ? ಹೇಗೆ ರಚನೆಯಾಗಿದೆಯೋ ಯಾರಿಗೆ ಗೊತ್ತು". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೯೬)

ಹೀಗೆ ಈ ಅಂಶಗಳನ್ನು ಗಮನಿಸಿದಾಗ ತೇಜಸ್ವಿ ನಿಸರ್ಗವನ್ನು ಪರಿಭಾವಿಸುವ ರೀತಿ ತಳೆಯುವ ನಿಲುವುಗಳು ಸ್ಪಷ್ಟವಾಗುತ್ತವೆ. ಕುವೆಂಪು ಹಾಗೂ ತೇಜಸ್ವಿಗೂ ಇರುವ ವೈದೃಶ್ಯಗಳು ಗೋಚರಿಸುತ್ತವೆ. 'ನಿಸರ್ಗ'ದಿಂದ ಇಬ್ಬರೂ ಪ್ರೇರಿತವಾಗಿ ಅದರ ಪ್ರಭಾವಕ್ಕೆ ಒಳಗಾಗಿದ್ದರೂ ತೇಜಸ್ವಿ ಮತ್ತು ಕುವೆಂಪು ಭಿನ್ನ-ಭಿನ್ನ ನೆಲೆಗಳಲ್ಲೇ ಅದನ್ನು ಪರಿಭಾವಿಸಿದ್ದಾರೆ. ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

ನಿಸರ್ಗದೆಡೆಗಿನ ಒಲವನ್ನು ಮೂಡಿಸುವುದಷ್ಟೇ ಅಲ್ಲದೆ, ಅವರಲ್ಲಿ ವಿಜ್ಞಾನದ ಬಗೆಗಿನ ಆಸಕ್ತಿ, ವೈಜ್ಞಾನಿಕ ಮನೋಭಾವಗಳನ್ನು ಮೂಡಿಸುವಲ್ಲಿಯೂ ಕುವೆಂಪು ಅವರ ಪ್ರೇರಣೆ ಅಪಾರ.

"ಅಣ್ಣ ಅವತ್ತು ನನಗೆ ವಿಶ್ವಸೃಷ್ಟಿಯ ಬಗ್ಗೆ ಇರುವ ವೈಜ್ಞಾನಿಕ ತಿಳುವಳಿಕೆಗಳನ್ನು, ಜೀವ ವಿಕಾಸದ ಅನೇಕ ಮಜಲುಗಳನ್ನು ವಿವರಿಸಿದರು. ಇವತ್ತು ಆ ಕವನ ಓದಿದಾಗ ನನಗೆ ಅವತ್ತು ಹೊಳೆಯದ ಇನ್ನೂ ಹೆಚ್ಚಿನ ಅರ್ಥಗಳು ಹೊಳೆಯುತ್ತವೆ. ಅಣ್ಣ ವಿವರಿಸಿದ್ದಕ್ಕಿಂತ ಹೆಚ್ಚು ಸಂಕೀರ್ಣವಾಗಿ ಕವನ ಕಾಣುತ್ತಿದೆ. ಆದರೆ ಅಣ್ಣ ಅವತ್ತು ಆ ಪದ್ಯ ವಿವರಿಸಿದ ರೀತಿಯಿಂದ ವಿಜ್ಞಾನ ಶುಷ್ಕವಿಚಾರ ಮಾತ್ರವಲ್ಲ ದೇವ ಗಂಧರ್ವ ಕಿನ್ನರ ಕಥೆಗಳಂತೆಯೇ ಹೊಳೆ ಹೊಳೆಯುವ ಅರ್ಥವುಳ್ಳದ್ದು ಎಂದೆನಿಸಿತು. ಅವರು ನನಗೆ ವಿವರಿಸಿದ ರೀತಿಯಲ್ಲಿ ಜೀವ ನೀರಿನಲ್ಲಿ ಮೀನಾಗಿ ಪ್ರಾರಂಭವಾಗಿದ್ದು ಅಲ್ಲಿಂದ ನೆಲದ ಮೇಲೆ ಕಾಲಿಟ್ಟು ಸರೀಸೃಪವಾಗಿ ಅಲ್ಲಿಂದ ಸಸ್ತನಿಯಾಗಿ ಆನಂತರ ಮಂಗನಾಗಿ ಆ ಮೇಲೆ ಬಾಲ ಕಳೆದುಕೊಂಡು ವಾನರನಾಗಿ ಆಮೇಲೆ ಮನುಷ್ಯನಾಗಿದ್ದು, ಕಾಲವನ್ನು ಚರಿತ್ರೆಯಾಗಿ ನಿರಂತರ ಘಟನಾವಳಿಗಳ ಸರಣಿಯನ್ನಾಗಿ ಪರಿಭಾವಿಸುವಾಗ ಕಾಣುವ ಸತ್ಯ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಣ್ಣನ ನೆನಪು, ೨೦೦೯, ಪುಟ ೪೯)

ಕುವೆಂಪುರವರು 'ಕೋಗಿಲೆ ಮತ್ತು ಸೋವಿಯತ್‌ರಷ್ಯಾ'ದಲ್ಲಿನ 'ಕೂಸಿನ ಕನಸು' ಪದ್ಯವನ್ನು ತೇಜಸ್ವಿಯವರಿಗೆ ಅರ್ಥೈಸುವ ಸನ್ನಿವೇಶದಲ್ಲಿ ತೇಜಸ್ವಿಯವರ ಮೇಲೆ ಉಂಟುಮಾಡುವ ಪ್ರಭಾವವನ್ನು ಈ ಮೇಲಿನ ಅಂಶಗಳನ್ನು ಗಮನಿಸಿದಾಗ ತಿಳಿಯಬಹುದು. ವಿಜ್ಞಾನವೆಂಬುದು ಶುಷ್ಕ ವಿಷಯ, ಕತೆ-ಕಾದಂಬರಿಗಳಂತೆ

ವರ್ಣನಾತ್ಮಕ ಅಂಶ, ಕಥನ ಗುಣ, ಹೊಸತನ ಇರುವುದಿಲ್ಲ ಎಂದೇ ಭಾವಿಸುವ ಸನ್ನಿವೇಶದಲ್ಲಿ, ತೇಜಸ್ವಿ ಈ ದೋಷ ನಿವಾರಿಸಲು ಪ್ರಯತ್ನಿಸಿದರು. ನಮ್ಮಲ್ಲಿನ ಅನೇಕ ವೈಜ್ಞಾನಿಕ ಲೇಖನಗಳು ಒಣಮಾಹಿತಿಗಳಂತೆ ಹೊರೆ ಎನಿಸುತ್ತವೆ. ಕೇವಲ ಮಾಹಿತಿಯಷ್ಟನ್ನೇ ತುರುಕುವ ಜೀವಸ್ಪಂದನ ಇಲ್ಲದ ಕೋಶಗಳೆನಿಸುತ್ತವೆ. ಯಾವುದೇ ರೀತಿಯ ಆಸಕ್ತಿಯನ್ನು ಕೆರಳಿಸುವುದಿಲ್ಲ. ವೈಜ್ಞಾನಿಕ ವಿಷಯಗಳನ್ನು ಕಥಾನಕ ತಂತ್ರದ ಮೂಲಕ ರಂಜನೀಯವಾಗಿ ಹೇಳುವಂತಹ ಹಲವಾರು ಕೃತಿಗಳನ್ನು ತೇಜಸ್ವಿ ರಚಿಸಿದರು. ಇದಕ್ಕೆ ಮೂಲ ಪ್ರೇರಣೆ ಕುವೆಂಪು. ಪರಿಸರ ಮತ್ತು ವೈಜ್ಞಾನಿಕತೆಗೆ ಸಂಬಂಧಪಟ್ಟಂತೆ ಮಿಸ್ಸಿಂಗ್ ಲಿಂಕ್, ಪ್ಲೈಯಿಂಗ್ ಸಾಸರ್ಸ್, 'ವಿಸ್ಮಯ' ಶ್ರೇಣಿಯ ಕೃತಿಗಳು ಇವರ ಕಥನಗುಣದ ಜೊತೆಜೊತೆಗೆ ವೈಜ್ಞಾನಿಕ ಅಂಶಗಳ ಸಮ್ಮಿಲನದಿಂದ ಜೀವಸ್ಪಂದನವುಳ್ಳ ಕೃತಿಗಳೆನಿಸಿಕೊಳ್ಳುತ್ತವೆ.

"ನನ್ನ ದೃಷ್ಟಿಯಲ್ಲಿ ಕುವೆಂಪು ಕನ್ನಡದ ಅತ್ಯುತ್ತಮ ಗದ್ಯ ಲೇಖಕ ಎನ್ನಿಸುತ್ತದೆ. ಅವರ ಗದ್ಯದಲ್ಲಿ ಕಲೆಗಾರಿಕೆ, ಹಾಸ್ಯ ಕಥನಕ್ರಮ, ನಾಟಕೀಯ ಸನ್ನಿವೇಶಗಳ ಚಿತ್ರಣ ಮೊದಲಾದವುಗಳಿಂದ ನಾನು ತುಂಬ ಪ್ರಭಾವಿತನಾಗಿದ್ದೇನೆ. ನಾನು ಬರೆಯಲು ಆರಂಭಿಸಿದಾಗ ಇದ್ದ ಸಮಸ್ಯೆ ಕುವೆಂಪು ಹಾಗೂ ಕಾರಂತರ ಪ್ರಭಾವದಿಂದ ಪಾರಾಗುವುದೇ ಹೊರತು ಸಿಕ್ಕಿಕೊಳ್ಳುವುದಲ್ಲ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ೨೦೦೬, ಪುಟ ೫೭) ಎಂಬ ಮಾತುಗಳನ್ನು ಗಮನಿಸಿದಾಗ, ಕುವೆಂಪುರವರ ಸಾಹಿತ್ಯ ಕೃತಿಗಳಿಂದಲೂ ತೇಜಸ್ವಿಯವರು ಪ್ರೇರಣೆ ಪಡೆದರು. ಪ್ರಭಾವಿತರಾಗಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಕುವೆಂಪುರವರ ಕಾದಂಬರಿಗಳಲ್ಲಿನ ಪ್ರಯಾಣದ ಕಲ್ಪನೆಯನ್ನು ತೇಜಸ್ವಿಯವರ 'ಜುಗಾರಿ ಕ್ರಾಸ್'ನಲ್ಲೂ ಕಾಣಬಹುದು. 'ಕರ್ವಾಲೋ'ದಲ್ಲೂ ಕಾಣಬಹುದು. ಜುಗಾರಿ ಕ್ರಾಸ್‌ನ ಆ ತಂತ್ರವನ್ನು ತೇಜಸ್ವಿ ಪಡೆದಿದ್ದು ಮಲೆಗಳಲ್ಲಿ ಮದುಮಗಳಿಂದಲೇ. ತಂತ್ರ ಹಾಗೂ ವಸ್ತುವಿನ ದೃಷ್ಟಿಯಿಂದ ವಿಶಿಷ್ಟತೆ ಪಡೆದುಕೊಳ್ಳುವ ಈ ಅಂಶಗಳು ಇಬ್ಬರಲ್ಲೂ ಕಂಡುಬರುವ ಸಾಮ್ಯ ಅಂಶಗಳಾಗಿವೆ. 'ಮಲೆಗಳಲ್ಲಿ ಮದುಮಗಳು' ಹಾಗೂ 'ಚಿದಂಬರ ರಹಸ್ಯ' ಗಳಲ್ಲಿ ಚಿತ್ರಿತವಾಗಿರುವ ಸಾಮಾಜಿಕ ವಾಸ್ತವ, ಶ್ರೇಣಿಕೃತ ವ್ಯವಸ್ಥೆಗಳನ್ನು ಗಮನಿಸಿದಾಗ ಇಬ್ಬರಲ್ಲೂ ವಿರುದ್ಧಚಲನೆಯನ್ನು ಗಮನಿಸಬಹುದು. ತೇಜಸ್ವಿಯವರು ವೈಚಾರಿಕವಾಗಿ ಸಂರಚನೆಯಾದ ಮಲೆನಾಡಿನ ಹಳ್ಳಿಯ ಬದುಕನ್ನು ತೆರೆದಿಟ್ಟರೆ, ಕುವೆಂಪು ಮೂರ್ತ ವಾಸ್ತವದಲ್ಲಿ ಹುಟ್ಟಿದ ಜಾತಿವ್ಯವಸ್ಥೆ ದಟ್ಟವಾಗಿರುವ ಮಲೆನಾಡಿನ ಹಳ್ಳಿಯ ಬದುಕನ್ನು

ಚಿತ್ರಿಸುತ್ತಾರೆ. ಕುವೆಂಪು ಕೃತಿಗಳಲ್ಲಿನ ಕಲಾದೃಷ್ಟಿಯಿಂದ ಪ್ರಭಾವಿತವಾಗಿರುವ ತೇಜಸ್ವಿ, ತಮ್ಮ ಕೃತಿಗಳಲ್ಲಿ ತೋರುವ ಸನ್ನಿವೇಶ ಸೃಷ್ಟಿ, ಘಟನಾವಳಿಗಳ ಜೋಡಣೆ, ಸಂವಿಧಾನ, ಪಾತ್ರ ನಿರ್ಮಾಣ ಇವುಗಳ ಜೊತೆಗೆ ನಿರೂಪಣೆಯ ತಂತ್ರಗಳಿಂದ ಅವುಗಳನ್ನು ಸಶಕ್ತವಾಗಿ ಬಳಕೆ ಮಾಡಿದ್ದಾರೆ.

ಪ್ರಗತಿಶೀಲರ ಕಾದಂಬರಿಗಳೂ ತೇಜಸ್ವಿಯವರಿಗೆ ಸಾಹಿತ್ಯಾಸಕ್ತಿ ಹುಟ್ಟಲು ಕಾರಣವಾಗಿವೆ ಎಂಬುದನ್ನು ಸ್ವತಃ ಅವರೇ ಹೇಳಿರುವ ಮಾತು ಗಮನಾರ್ಹವಾಗಿದೆ. "ಪ್ರಗತಿಶೀಲರ ಕಾದಂಬರಿಗಳು ನನ್ನ ಸಾಹಿತ್ಯರಚನೆಯ ಮೇಲೆ ಯಾವುದೇ ಪ್ರಭಾವ ಬೀರಿಲ್ಲವಾದರೂ ನನಗೆ ಮತ್ತು ನನ್ನಂತೆ ಅನೇಕರಿಗೆ ಸಾಹಿತ್ಯಾಸಕ್ತಿ ಹುಟ್ಟಲು ಬಹಳ ಪ್ರಭಾವ ಬೀರಿದವು. ಪ್ರಗತಿಶೀಲರಲ್ಲಿ ನಮ್ಮ ಮೇಲೆ ಬಹಳ ಪ್ರಭಾವ ಬೀರಿದವರೆಂದರೆ ಬಸವರಾಜ ಕಟ್ಟೀಮನಿ. ಕಟ್ಟೀಮನಿಯವರ ಗದ್ಯ ತಾರಾಸುರವರದಷ್ಟು ಉಜ್ವಲವಾಗಿಲ್ಲವಾದರೂ ಅವರು ಮತಾಂಧತೆಯ ವಿರುದ್ಧ, ಜಗದ್ಗುರುಗಳ ವಿರುದ್ಧ ಮಠಪೀಠಗಳ ವಿರುದ್ಧ ಸಾರಿದ ಸಮರ ಆಗಿನ ತರುಣ ಪೀಳಿಗೆಯ ಮೆಚ್ಚುಗೆ ಗಳಿಸಿತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ೨೦೦೯, ಪುಟ ೩೮) ಇದೇ ಸಂದರ್ಭದಲ್ಲಿ ತೇಜಸ್ವಿ ಅವರು ಇಂಟರ್‌ಮೀಡಿಯೇಟ್ ಓದಲು 'ಶಿವಮೊಗ್ಗ'ಕ್ಕೆ ಹೋಗಿದ್ದು ಕೂಡ ಅವರ ಸಾಹಿತ್ಯ ರಚನೆಗೆ ಪ್ರಮುಖ ಪ್ರೇರಣೆ ಆಯಿತು.

"ನಾವೆಲ್ಲ ಇಂಟರ್‌ಮೀಡಿಯೇಟ್ ಓದಲು ಕಾಲೇಜು ಹತ್ತುವ ವೇಳೆಗೆ ಪ್ರಗತಿಶೀಲರ ಉಚ್ಛ್ರಾಯಸ್ಥಿತಿ ಮುಗಿಯುತ್ತ ಬಂದಿತ್ತು. ನಾನಂತೂ ಲೇಖಕನಾಗಿ ಸಾಹಿತ್ಯದ ರಂಗಸ್ಥಳಕ್ಕೆ ಧುಮುಕುತ್ತೇನೆಂದು ಆಗ ಯೋಚಿಸಿಯೂ ಇರಲಿಲ್ಲ. ಏನಿದ್ದರೂ ನಾವು ದೂರದ ಪ್ರೇಕ್ಷಕರಷ್ಟೆ. ನಾನು ಇಂಟರ್‌ಮೀಡಿಯೇಟ್ ಓದಲು ಶಿವಮೊಗ್ಗಕ್ಕೆ ಹೋದೆ. ಶಿವಮೊಗ್ಗಕ್ಕೆ ಹೋಗದಿದ್ದರೆ ನಾನು ಸಾಹಿತ್ಯದ ಸಹವಾಸಕ್ಕೇ ಹೋಗುತ್ತಿರಲಿಲ್ಲವೇನೋ. ಶಿವಮೊಗ್ಗದ ನೆಲ, ಗಾಳಿ, ನೀರಿನಲ್ಲಿ ಸಾಹಿತ್ಯ ಹಾಸುಹೊಕ್ಕಾಗಿದೆ ಎಂದೆನಿಸುತ್ತದೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ೨೦೦೯, ಪುಟ ೩೯) ಈ ಅಂಶಗಳು ನಿಜಕ್ಕೂ ಸ್ವಾರಸ್ಯಪೂರ್ಣವಾಗಿವೆ. ಅಲ್ಲದೇ ತೇಜಸ್ವಿ ಅವರ ವಿನೋದ, ಹಾಸ್ಯದ ಶೈಲಿ, ವಿಡಂಬನಾ ಕ್ರಮದ ಬರವಣಿಗೆಗೆ ಕಡಿದಾಳು ಶಾಮಣ್ಣ ಅವರ ಸಹಚರ್ಯವೂ ಒಂದು ರೀತಿಯಲ್ಲಿ ಪ್ರಭಾವ ಬೀರಿದೆ ಎನ್ನಬಹುದು. "ಶಾಮಣ್ಣನವರ ಪ್ರಭಾವದಿಂದ ತಮಾಷೆ, ವಿನೋದ, ಹಾಸ್ಯಗಳು ನನ್ನ ವ್ಯಕ್ತಿತ್ವದ ಅವಿಭಾಜ್ಯ ಅಂಗಗಳಾಗಿ ಹೋದವು. ಒಂದು ಸಂಗತಿಯನ್ನು

ಏಕಕಾಲದಲ್ಲಿ ಅರ್ಥಪೂರ್ಣವಾಗಿಯೂ ಅಸಂಗತವಾಗಿಯೂ ಕಾಣಬಹುದಾದ ಸಾಧ್ಯತೆಗಳು ಗೋಚರಿಸಿದವು. ಆದರೆ ಇದಕ್ಕಿಂತಲೂ ಮುಖ್ಯವಾಗಿ ಗೋಚರಿಸಿದ ಅಂಶವೆಂದರೆ ಸನ್ನಿವೇಶದ ಸಮರ್ಥನೆ ಇಲ್ಲದ ಭಾವಾವೇಶವನ್ನು ಹಾಸ್ಯಪ್ರಜ್ಞೆ ಸಮರ್ಥವಾಗಿ ತಡೆಗಟ್ಟುತ್ತದೆ ಎನ್ನುವುದು ಹಾಗಾಗಿ ಈ ಹಾಸ್ಯಪ್ರಜ್ಞೆಯಿಂದ ನನ್ನ ಬರಹಗಳಲ್ಲಿ ಭಾವುಕತೆ ಕಡಿಮೆಯಾಗುತ್ತ ವೈಚಾರಿಕತೆ ಮುಂದಾಯ್ತು. ಕತೆ ಕಾದಂಬರಿಗಳ ಪಾತ್ರಗಳೆಲ್ಲ ಪರಸ್ಪರ ಹಾಸ್ಯ ಮಾಡುವುದಲ್ಲದೆ ತಮ್ಮನ್ನು ತಾವೇ ವಿಡಂಬನೆ ಮಾಡುವುದರಿಂದ ಓದುಗರ ದೃಷ್ಟಿಯಲ್ಲಿ ಹಾಸ್ಯಾಸ್ಪದವಾಗುವ ಸಂಭವ ಕಡಿಮೆಯಾಯ್ತು".(ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ೨೦೦೯, ಪುಟ ೭೩) ಹೀಗೆ ತೇಜಸ್ವಿ ಸಾಹಿತ್ಯ ಮತ್ತು ಜೀವನದ ಮೇಲೆ ಹಲವಾರು ಅಂಶಗಳು ಪ್ರಭಾವಬೀರಿವೆ.

"ಸಾಹಿತ್ಯ ಪರಂಪರೆಯಿಂದ ಮತ್ತೊಬ್ಬ ಲೇಖಕ ಪ್ರೇರಣೆ ಪಡೆಯುವಂತೆ ಜಾತ್ಯತೀತವಾಗಿ ಬದುಕುವ, ಸಮಾಜದ ಪ್ರತಿಬಂಧಗಳಾಚೆ ಸ್ವತಂತ್ರವಾಗಿ ಚಿಂತಿಸುವ ಗುಣವನ್ನು ಅವರು ಕುವೆಂಪು ಅವರಿಂದ ಪಡೆದರು. ಕುವೆಂಪು ಅವರ ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ ಎಂಬ ಕರೆಯನ್ನು ತೇಜಸ್ವಿಯವರು ತಮ್ಮದೇ ಆದ ರೀತಿಯಲ್ಲಿ ಅನುವಾದ ಮಾಡಿಕೊಂಡು ಬದುಕಿದರು ಮತ್ತು ಬರೆದರು. ಕುವೆಂಪು ತತ್ತ್ವವು ಬೇರೆ ಬೇರೆ ರೂಪಾಂತರಗಳಲ್ಲಿ ಸುಪ್ತವಾಗಿ ತೇಜಸ್ವಿಯಲ್ಲಿ ಮುಂದುವರೆಯಿತು". (ಚಂದ್ರೇಗೌಡ ವಿ. (ಸಂ.), ತೇಜಸ್ವಿ ನೆನಪು, ೨೦೧೦, ಪುಟ ೩೩) ಎಂದು 'ದಾರ್ಶನಿಕ ಹುಡುಕಾಟದ ಲೇಖಕ' ಎಂಬ ತೇಜಸ್ವಿಯವರ ಬಗೆಗಿನ ಲೇಖನದಲ್ಲಿ ರಹಮತ್ ತರೀಕೆರೆಯವರು ವ್ಯಕ್ತಪಡಿಸಿರುವ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದಾಗಿದೆ.

ತೇಜಸ್ವಿಯವರು ತಮ್ಮ ಅಬಚೂರಿನ ಪೋಸ್ಟಾಫೀಸು ಕೃತಿಯಲ್ಲಿ "ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನ ದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ" ಈ ಮೂರೇ ನನ್ನ ಈಚಿನ ಸಾಹಿತ್ಯರಚನೆಯ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿರುವುವು. ಬಹುಶಃಮುಂಬರುವ ಕಲಾವಿದರಿಗೆ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಚೈತನ್ಯಶಕ್ತಿಯಾಗಬಲ್ಲಂಥವು ಈ ಮೂರೇ. ನನ್ನ ಜೀವನ ವಿಧಾನವನ್ನು, ಗ್ರಹಿಸುವ ಕ್ರಮವನ್ನು, ಆಲೋಚನೆಯನ್ನು, ಅಭಿವ್ಯಕ್ತಿ ವಿಧಾನವನ್ನು ಒಟ್ಟಿನಲ್ಲಿ ಇಡೀ ಸಮಗ್ರ

ವ್ಯಕ್ತಿತ್ವವನ್ನು ಸಂಪೂರ್ಣ ಬದಲಿಸಿದ್ದು ಲೋಹಿಯಾ ತತ್ವ ಚಿಂತನೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಪೀಸು, ಪುಟ ೫)

ಈ ಅಂಶಗಳನ್ನು ಗಮನಿಸಿದಾಗ ತೇಜಸ್ವಿಯ 'ಪ್ರಯೋಗಶೀಲತೆ'ಗೆ ಕಾರಂತರ ಪ್ರಭಾವವೇ ಕಾರಣ. ಅವರ 'ಅಳಿದ ಮೇಲೆ', 'ಬೆಟ್ಟದ ಜೀವ' ಕೃತಿಗಳಲ್ಲಿ ಕಂಡು ಬರುವ 'ಜೀವನದೃಷ್ಟಿ'ಯನ್ನು ತೇಜಸ್ವಿಯವರ ಕೃತಿಗಳಲ್ಲೂ ಕಾಣಬಹುದಾಗಿದೆ. ಅಲ್ಲದೆ, ನವ್ಯದ ಸಾಂಕೇತಿಕ ಮಾರ್ಗವನ್ನು ಹೊಸದಿಕ್ಕಿನಡೆಗೆ ಸಂಚರಿಸುವಂತೆ ಪ್ರೇರಣೆ ನೀಡಿದ್ದು ಲೋಹಿಯಾ. ಲೋಹಿಯಾ ತತ್ವ ಚಿಂತನೆಗಳು ಹಾಗೂ ಮಲೆನಾಡಿನ ಹಳ್ಳಿಯ ಜೀವನದ ಹೊಸ ಪರಿಸ್ಥಿತಿಗಳು ತೇಜಸ್ವಿಯ ಚಿಂತನೆಯ ದಿಕ್ಕನ್ನು ಬದಲಿಸಿದವು. 'ಹುಲಿಯೂರಿನ ಸರಹದ್ದು' ಕತೆಯು, ಅಡಿಗರ 'ಹದ್ದು' ಕವಿತೆಯ ಹಾಗೆ ಸಾವಯವ ಬಂಧವನ್ನು ಹೊಂದಿದ್ದು ಇದರಿಂದ ಪ್ರಭಾವಿತವಾಗಿದೆ ಎಂದೇ ಹೇಳಬಹುದು.

ಮಲೆನಾಡಿನ ಜೀವನ ಕೂಡ ತೇಜಸ್ವಿಯವರ ಸಾಹಿತ್ಯವನ್ನು ಅಪಾರವಾಗಿ ಪ್ರಭಾವಿಸಿದೆ. ಮಲೆನಾಡಿನ ಮೇಲಣ ಪ್ರೀತಿಯಿಂದ ಇಲ್ಲಿನ ಸ್ವಚ್ಛಂದ ಬದುಕಿನ ವಾಂಛೆಯಿಂದ ಮೈಸೂರನ್ನು ತೊರೆದು ಮೂಡಿಗೆರೆಗೆ ಬಂದು ನೆಲೆಸಿದ ತೇಜಸ್ವಿ ಇಲ್ಲಿನ ಬದುಕಿನ ಹಲವಾರು ಅಂಶಗಳನ್ನು, ಬವಣೆಗಳನ್ನು ತಮ್ಮ ಕೃತಿಗಳಲ್ಲಿ ನೈಜವಾಗಿ, ಸೃಜನಾತ್ಮಕವಾಗಿ ತಮ್ಮ ಕೃತಿಗಳಲ್ಲಿ ಬಿಂಬಿಸಿದ್ದಾರೆ. ಒಬ್ಬ ಸಾಹಿತಿ ತನ್ನ ಜೀವನಾನುಭವಗಳ ಮುಖಾಂತರ ಸಾಹಿತ್ಯ ರಚನೆ ಮಾಡುತ್ತಾ ಅದರಲ್ಲೇ ಅಂತರ್ಗತವಾಗಿರುವ ಸಮಕಾಲೀನ ಸಾಮಾಜಿಕ, ರಾಜಕೀಯ ಸಂವೇದನೆಗಳಿಗೆ ವಾಹಕವಾಗುತ್ತಾನೆ. ಪ್ರತಿಕ್ರಿಯಿಸುತ್ತಾನೆ. ತೇಜಸ್ವಿ ಕೂಡ ತಮ್ಮ ಸಮಕಾಲೀನ ಚಿಂತನೆ, ಧ್ಯೇಯ, ಧೋರಣೆಗಳಿಗೆ ಕೃತಿಗಳ ಮುಖಾಂತರ ಪ್ರತಿಕ್ರಿಯಿಸಿದ್ದಾರೆ. ಕಾಫಿ ಬೆಳೆಗಾರರ ಬವಣೆ, ಏಲಕ್ಕಿ ಬೆಳೆಗಾರನ ಸಮಸ್ಯೆಗಳನ್ನು ಚಿದಂಬರ ರಹಸ್ಯ ಹಾಗೂ ಕರ್ವಾಲೋ ಕೃತಿಗಳಲ್ಲಿ ಬಿಂಬಿಸಿದ್ದಾರೆ ಮನುಷ್ಯರ ಆತ್ಮ ಮತ್ತು ಪರಿಸರ ಕಲುಷಿತವಾಗಿರುವ ಬಗ್ಗೆ ಸಂಸ್ಕೃತಿ ವಿನಾಶದ ಕಡೆಗೆ ಸಾಗುತ್ತಿರುವುದರ ಬಗ್ಗೆ ಕಾದಂಬರಿಗಳು ಬೆಳಕು ಚೆಲ್ಲುವುದನ್ನು ಗಮನಿಸಿದಾಗ ಸಮಕಾಲೀನ ಸಂವೇದನೆಗಳಿಗೆ ತೇಜಸ್ವಿಯ ಪ್ರತಿಕ್ರಿಯೆಗಳೆಂದೇ ಭಾವಿಸಬಹುದಾಗಿದೆ.

# ಅಧ್ಯಾಯ – ೪

# ಪರಿಸರ ಪ್ರತಿನಿಧೀಕರಣದ ನೆಲೆಗಳು

'ಪರಿಸರ' ಎಂಬುದು ಸೃಷ್ಟಿಯ ಅಗಾಧಶಕ್ತಿ. ಅಪಾರ ಜೀವ ಸಂಕುಲಗಳ ಗಣಿ. ಪ್ರಾಣಿ ಪ್ರಪಂಚ, ಸಸ್ಯ ಪ್ರಪಂಚ, ಕೀಟ ಪ್ರಪಂಚಗಳ ವಿಭಿನ್ನ ಪ್ರಭೇದಗಳನ್ನು ಒಳಗೊಂಡ ನಿಧಿ. 'ಪರಿಸರ' ಎಂಬುದು 'ಪ್ರಕೃತಿ' ಎಂಬುದನ್ನು ಒಳಗೊಂಡಿದ್ದರೂ ಅದಕ್ಕೂ ಮೀರಿದ ಅಯಾಮವನ್ನು ಪಡೆದುಕೊಳ್ಳುತ್ತದೆ. ಸಾಹಿತ್ಯದ ಉಗಮಕ್ಕೆ ಮೂಲ ಪ್ರೇರಣೆಯೇ ಪ್ರಕೃತಿ. ಕವಿಗಳಿಗೆ, ದಾರ್ಶನಿಕರಿಗೆ, ಸಹೃದಯರಿಗೆ ಸಾಹಿತ್ಯ ಸೃಷ್ಟಿ ಹಾಗೂ ನೆಮ್ಮದಿಯ ಜೀವನಕ್ಕೆ ಚೈತನ್ಯ ದೀಪ್ತಿ ನಿಸರ್ಗ. ಪ್ರಕೃತಿ ಸೌಂದರ್ಯಕ್ಕೆ ಮನಸೋಲದ ವ್ಯಕ್ತಿಯನ್ನು ನಾವು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಕನ್ನಡ ಸಾಹಿತ್ಯದ ಬಹುತೇಕ ಕೃತಿಗಳಲ್ಲಿ, ಸಾಮಾನ್ಯವಾಗಿ ಪ್ರಕೃತಿವರ್ಣನೆ ಪರಿಸರಪ್ರಜ್ಞೆ ಹಾಸುಹೊಕ್ಕಂತಿವೆ. ಯಾವ ಭಾಷೆಯ ಸಾಹಿತ್ಯವಾದರೂ ಪ್ರಕೃತಿವರ್ಣನೆಯ ಅಂಶಗಳಿಂದ ಹೊರತಾಗಿಲ್ಲ. ಕಾರಂತ, ಕುವೆಂಪು, ಬೇಂದ್ರೆಯವರಿಂದ ಮೊದಲುಗೊಂಡು ಬಿ.ಜಿ.ಎಲ್. ಸ್ವಾಮಿ, ಚಂದ್ರಶೇಖರ ನಂಗಲಿ, ನಾ.ಡಿಸೋಜ, ತೇಜಸ್ವಿ ಅವರ ಸಾಹಿತ್ಯದಲ್ಲಿ ಕೂಡ ನಿಸರ್ಗ ಪ್ರೇಮ, ಪರಿಸರ ಕಾಳಜಿಯ ಅಂಶಗಳನ್ನು ಕಾಣಬಹುದು.

ಈ ಅಧ್ಯಾಯವು ಪರಿಸರ ಬಗೆಗಿನ ಕುವೆಂಪು ಮತ್ತು ತೇಜಸ್ವಿಯವರ ಗ್ರಹಿಕೆಗಳ ಬಗ್ಗೆ ಸೂಕ್ಷ್ಮ ಮತ್ತು ವಿಶ್ಲೇಷಣಾತ್ಮಕ ನೋಟವೊಂದನ್ನು ನೀಡುತ್ತವೆ. ಕುವೆಂಪು ಮತ್ತು ತೇಜಸ್ವಿಯವರ ಸಾಹಿತ್ಯ ಸೃಷ್ಟಿಯ ಮೂಲಪ್ರೇರಣೆ 'ನಿಸರ್ಗ'. ಇವರು ತಮ್ಮ ಕಥೆ-ಕಾದಂಬರಿಗಳಲ್ಲಿ ಕಟ್ಟಿಕೊಡುವ ಪ್ರಕೃತಿ ಕೇವಲ ಚಿತ್ರಣಗಳಾಗಿ ಮಾತ್ರ ಮೂಡಿಲ್ಲ. 'ಜೀವಂತಿಕೆ'ಯಿಂದ ಪ್ರಾಧಾನ್ಯತೆ ಪಡೆದಿವೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು', 'ಕಾನೂರು ಹೆಗ್ಗಡತಿ' ಕಾದಂಬರಿಗಳು ಮಲೆನಾಡಿನ ಪ್ರಾಕೃತಿಕ ಪರಿಸರದ ವೈಭವವನ್ನು, ರೌದ್ರತೆಯನ್ನು ತಿಳಿಸುತ್ತವೆ. 'ಯಾರು ಅರಿಯದ ವೀರ' 'ಸನ್ಯಾಸಿ' 'ಔದಾರ್ಯ' ಹಾಗೂ 'ಆದರ್ಶ ಸಾಧನೆ' ಎಂಬ ಕಥೆಗಳಲ್ಲಿ ಪ್ರಕೃತಿಸೌಂದರ್ಯದ ಜೊತೆಗೆ ಪ್ರಕೃತಿಯ ಭೀಕರತೆ, ರೌದ್ರತೆಗಳ ಚಿತ್ರಣವನ್ನು ಕಾಣಬಹುದು. ಕುವೆಂಪು ಅವರ ಸಾಹಿತ್ಯದಲ್ಲಿ ದೊರಕುವಷ್ಟು ನಿಸರ್ಗ

ವರ್ಣನೆ, ಪ್ರಕೃತಿಯಾರಾಧನೆ ದೃಷ್ಟಿಯನ್ನು ಬೇರೆ ಯಾರ ಸಾಹಿತ್ಯದಲ್ಲೂ ಕಾಣಲು ಸಾಧ್ಯವಿಲ್ಲ. ತೇಜಸ್ವಿಯವರು ತಾವು ಪಡೆದುಕೊಂಡಿರುವ ಅನುಭವದ ಮೂಲಕ ಪ್ರಾಣಿ, ಪಕ್ಷಿ, ಮನುಷ್ಯ, ಒಟ್ಟಾರೆ ಜೀವಸಂಕುಲದ ವೈವಿಧ್ಯತೆಯನ್ನು, ಸ್ವರೂಪ ಗುಣಲಕ್ಷಗಳನ್ನು ನೀಡುತ್ತಾರೆ. ಇವರ 'ಕರ್ವಾಲೋ' 'ಚಿದಂಬರ ರಹಸ್ಯ' 'ಜುಗಾರಿಕ್ರಾಸ್' ಹಾಗೂ 'ನಿಗೂಢ ಮನುಷ್ಯರು' ಕೃತಿಗಳು ಬದುಕಿನ ವಿಸ್ಮಯಗಳನ್ನು ಚಿತ್ರಿಸುವುದರ ಜೊತೆಗೆ ಮನುಷ್ಯ-ಪ್ರಕೃತಿಯ ಸಂಬಂಧದ ಸಂಕೀರ್ಣತೆಯನ್ನು ಇವುಗಳನ್ನು ಬೌದ್ಧಿಕವಾಗಿ ಅರ್ಥೈಸಿಕೊಳ್ಳಲಾಗದ ಅನಿವಾರ್ಯತೆಯನ್ನು ಪ್ರಸ್ತುತ ಪಡಿಸುತ್ತವೆ.

ಪರಿಸರದ ಬಗೆಗಿನ ತೇಜಸ್ವಿಯವರ ಆಸಕ್ತಿ, ಕುತೂಹಲ, ಶೋಧನೆಯು ಪರಿಸರದಲ್ಲಿ ಅಡಗಿರುವ ರಹಸ್ಯವನ್ನು ಭೇದಿಸಿ ಅವಶ್ಯಕತೆಗೆ ತಕ್ಕಂತೆ ಬಳಸಿಕೊಳ್ಳುವ ಲಾಭದ ದೃಷ್ಟಿಯಿಂದ ಮೂಡಿಲ್ಲ. ಪರಿಸರದ ಕತೆಯಲ್ಲಿ ಸ್ವತಃ ಹೇಳಿರುವಂತೆ, 'ಪರಿಸರದ ರಹಸ್ಯವನ್ನೆಲ್ಲ ಸಂಪೂರ್ಣ ತಿಳಿಯುತ್ತೇನೆಂದು ಹೋಗುವುದು ಮೂರ್ಖತನವೇ ಸರಿ. ಸುಮ್ಮನೇ ಅಗತ್ಯವಿದ್ದಷ್ಟನ್ನು ಮಾತ್ರ ತಿಳಿದುಕೊಂಡು ಮಿಕ್ಕಿದ್ದನ್ನು ನೋಡಿ ಅಚ್ಚರಿ ಪಡುತ್ತಾ ಇದ್ದು ಬಿಡುವುದು ಒಳ್ಳೆಯದು.' ಎಂಬ ಧೋರಣೆಯ ಮೂಲಕ ವಿಶಿಷ್ಟತೆ ಮೆರೆಯುತ್ತಾರೆ. ಪರಿಸರದ ಬಗೆಗೆ ಈ ಇಬ್ಬರೂ ಲೇಖಕರ ಚಿಂತನೆಗಳನ್ನು ವರ್ತಮಾನಕ್ಕೆ ಅನ್ವಯಿಸಿ ನೋಡುವಾಗ ಪಡೆದುಕೊಳ್ಳುವ ಸ್ಥಾನಮಾನಗಳನ್ನು ಗುರುತಿಸುವುದೇ ಪ್ರಬಂಧದ ಉದ್ದೇಶವಾಗಿದೆ.

ಮಲೆನಾಡಿನ ಪರಿಸರದಲ್ಲಿ ಹುಟ್ಟಿಬೆಳೆದ ಕುವೆಂಪು ಅವರನ್ನು ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಕವಿಯನ್ನಾಗಿಸುವಲ್ಲಿ 'ಪರಿಸರ' ಬಹುಮುಖ್ಯ ಪಾತ್ರವಹಿಸುತ್ತದೆ. 'ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ, ಬಳಿಯ ತಿಂಗಳ ಸಿರಿಬನಂಗಳ ಮಲೆಯ ಮಂಗಳ ನಾಡಿಗೆ' ಈ ಪದ್ಯದಲ್ಲಿ ಪ್ರಕೃತಿಯ ಚೆಲುವಿನ ತಾಣವಾದ ಮಲೆನಾಡಿಗೆ ಹೋಗಲು ಕವಿಮನಸ್ಸು ಸದಾ ಹಾತೊರೆಯುತ್ತದೆ. ಹಂಬಲಿಸುತ್ತದೆ. ಇದಕ್ಕೆ ಕಾರಣ ಬಯಲು ಸೀಮೆಯ ನಿಸ್ಸಾರಬದುಕೇ ಆಗಿದೆ. ಮಲೆನಾಡಿನ ಜೀವ ವೈವಿಧ್ಯತೆಯಾಗಲೀ, ಸೃಷ್ಟಿ ವೈಚಿತ್ರ್ಯವಾಗಲೀ, ಜೀವನ ಸೌಂದರ್ಯವಾಗಲೀ ಬಯಲು ಸೀಮೆಯಲ್ಲಿ ಕಾಣಲಾಗದೆ ಕವಿಮನಸ್ಸು ಮಲೆನಾಡಿಗೆ ಹೋಗಲು ಹಂಬಲಿಸುತ್ತದೆ.

ಇವರ ಕೃತಿಗಳಲ್ಲಿ ಮಲೆನಾಡಿನ ಪರಿಸರ ಮಡುಗಟ್ಟಿದೆ. "ಪರಿಸರದ ಪ್ರತಿಸೃಷ್ಟಿಯಲ್ಲಿ ಪುಟ್ಟಪ್ಪನವರು ಕಾನೂರು ಹೆಗ್ಗಡತಿಯಲ್ಲಿ ಸಾಧಿಸಿದ ಯಶಸ್ಸು ಅವರಿಗಿಂತ ಮೊದಲಿನ ಯಾವ ಕಾದಂಬರಿಕಾರನಿಗೂ ಸಾಧ್ಯವಾಗಿರಲಿಲ್ಲ" ಎಂಬ ಜಿ.ಎಸ್ ಆಮೂರ ಅವರ ಮಾತುಗಳು ನಿಜಕ್ಕೂ ಅರ್ಥಪೂರ್ಣವಾಗಿವೆ. ಕುವೆಂಪು ಮಲೆನಾಡಿನ ಪರಿಸರದ ಅವಿಭಾಜ್ಯ ಅಂಗಗಳಾದ ಕೆರೆ, ಕಾಡುಗಳು, ವನ್ಯ ಮತ್ತು ಪಾಲಿತ ಪಶುಗಳು, ಸಸ್ಯಪ್ರಪಂಚಗಳನ್ನು ಮನುಷ್ಯಾತೀತ ಆವರಣದ ಪ್ರತೀಕಗಳೆಂಬಂತೆ ಚಿತ್ರಿಸಿದ್ದಾರೆ.

"ನಿಸರ್ಗದ ನಿತ್ಯಸಂಸರ್ಗ ಮತ್ತು ಪ್ರಭಾವದಿಂದಾಗಿ ಕುವೆಂಪು ಅವರು ದಾರ್ಶನಿಕ ಕವಿಗಳಾಗಿದ್ದಾರೆ. ಅವರಂತೆ ಪ್ರಕೃತಿಯನ್ನು ಪ್ರೀತಿಸಿದ ಅದರ ವಿವಿಧಾವತಾರಗಳನ್ನು ಕಂಡ, ಅದರ ಅಂತಃಸೌಂದರ್ಯವನ್ನನುಭವಿಸಿದ, ಅದರಲ್ಲಿ ತಾದಾತ್ಮ್ಯವನ್ನು ಹೊಂದಿದ ಕವಿಗಳು ವರ್ಡ್ಸ್‌ವರ್ತ್‌ನನ್ನುಳಿದರೆ ಬೇರೆ ಇಲ್ಲವೆಂದೆನಿಸುತ್ತದೆ. ಸೌಂದರ್ಯ ದರ್ಶನವೇ ಅವರ ಕಾವ್ಯದ ಆತ್ಮ. ಅವರಿಗೆ ಪ್ರಕೃತಿಯಾರಾಧನೆಯ ಪರಮನಾರಾಧನೆಯೂ ಅದಕ್ಕಿಂತ ಬೇರೆ ಪುರುಷಾರ್ಥವಿನ್ನಿಲ್ಲ". (ದೇಜಗೌ., ಕುವೆಂಪು ದರ್ಶನ - ೧, ೨೦೦೩, ಪುಟ ೪೪೩)

ಎಂಬ ಮಾತುಗಳು ಕುವೆಂಪುರವರ ಪ್ರಕೃತಿಯಾರಾಧನಾ ದೃಷ್ಟಿಗೆ ಕೈಗನ್ನಡಿ ಹಿಡಿದಂತಿವೆ. ಕುವೆಂಪುರವರು ಹುಟ್ಟಿದಾಗಿನಿಂದ ಪ್ರಕೃತಿಯೇ ಅವರನ್ನು ಪಾಲಿಸಿದೆ, ಪೋಷಿಸಿದೆ. ಅವರಲ್ಲಿನ ಸಾಹಿತ್ಯ ಸೃಷ್ಟಿಗೆ ಪ್ರೇರಣೆಯೇ 'ನಿಸರ್ಗ'. ಈ ಪ್ರಕೃತಿಯನ್ನು ಅವರು ಸೌಂದರ್ಯಾರಾಧನೆಯ ಜೊತೆಗೆ ಆಧ್ಯಾತ್ಮಿಕವಾಗಿ ಪರಿಭಾವಿಸುತ್ತಾರೆ.

"ಪರಿಸರವನ್ನು ನಾವು ನೋಡುವಿಕೆ ಕ್ರಮದಲ್ಲಿ ಬದಲಾವಣೆ ಆಗಬೇಕು. ಆಗ ಮಾತ್ರ ಪರ್ವತವಾಣಿ ಕೇಳಿಸುತ್ತದೆ. ಹಕ್ಕಿಗಳ ಹಾಡು ಅರ್ಥವಾಗುತ್ತದೆ. ದುಂಬಿಯ ಮೊರೆ ಅರಿವಾಗುತ್ತೆ. ಕಗ್ಗತ್ತಲಿನ ಸದ್ದು ಕೇಳಿಸುತ್ತದೆ. ದೇವರು ನಿಸರ್ಗ ಬೇರೆ ಬೇರೆಯಲ್ಲ. ಹುಲ್ಲುಗರಿ ಧೂಳಿನ ಕಣಗಳು ಕಿವಿಯಿರುವ ಮನುಜನಿಗೆ ಆ ಅಜ್ಞಾತ ಶಕ್ತಿಯ ಸಂದೇಶ ನೀಡುತ್ತವೆ. ಪ್ರತಿಯೊಂದು ಹೂವು ಪೂಜೆಯ ಸಂಕೇತವಾಗುತ್ತದೆ. ಪ್ರತಿಯೊಂದು ಕಾಡು ದೇವಾಲಯವಾಗಿ ಪ್ರತಿಯೊಂದು ಬೆಟ್ಟವೂ ಪ್ರತಿಮೆಯಾಗುತ್ತದೆ. ಹೊಳೆಯ ಜುಳು ಜುಳು ಎಲೆಯ ಮರ್ಮರ ಎಲ್ಲವೂ

ದೇವನನ್ನು ಕುರಿತ ಹಾಡಾಗುತ್ತದೆ. ಈ ಆಂತರಿಕ ಸೌಂದರ್ಯವನ್ನರಿಯುವವನೇ ನಿಜವಾದ ಕವಿ" (ದೇಜಗೌ., ಕುವೆಂಪು ದರ್ಶನ - ೧. ೨೦೦೭. ಪುಟ ೪೪೨)

ಈ ಮೇಲ್ಕಂಡ ಅಂಶಗಳನ್ನು ಗಮನಿಸಿದಾಗ ಕುವೆಂಪು ಪ್ರಕೃತಿಯನ್ನು ನೋಡುವ ದೃಷ್ಟಿಕೋನದ ಸಂಪೂರ್ಣ ಅರಿವಾಗುತ್ತದೆ. ಈ ಆರಾಧನಾದೃಷ್ಟಿ ಕುವೆಂಪುರವರ ಕಾವ್ಯಗಳಲ್ಲಷ್ಟೇ ಸೀಮಿತವಾಗದೆ, ಕಾದಂಬರಿಗಳು ಹಾಗೂ ಕತೆಗಳಲ್ಲೂ ವ್ಯಕ್ತವಾಗಿವೆ. 'ಕಾನೂರು ಹೆಗ್ಗಡಿತಿ'ಯು ಕುವೆಂಪು ಅವರ ಪರಿಸರ ಪ್ರಜ್ಞೆ ಹಾಗೂ ದಾರ್ಶನಿಕನೆಲೆಯ ಗ್ರಹಿಕೆಗೆ ಕೈಗನ್ನಡಿಯಂತಿದೆ. ಅನುಭಾವಿ ಚಿಂತನೆಯ ಅಖಂಡದೃಷ್ಟಿ ಹಾಗೂ ಪರಿಸರ ವಿಜ್ಞಾನಿಯ ದೃಷ್ಟಿ 'ಕಾನೂರು ಹೆಗ್ಗಡಿತಿ'ಯಲ್ಲಿ ಅಭಿವ್ಯಕ್ತಿಗೊಂಡಿವೆ.

ಕೆ.ವಿ ಸುಬ್ಬಣ್ಣ ಅವರ ಮಾತುಗಳಲ್ಲಿ ಹೇಳುವುದಾದರೆ, "ಪೂರ್ವ-ಪಶ್ಚಿಮಗಳು, ಪ್ರಾಚೀನ-ಅವಾರ್ಚೀನ ಸಂಶ್ಲೇಷಣೆಯಲ್ಲಿ ತೊಡಗಿರುವ ಕುವೆಂಪು ಅವರಿಗೆ ಆತ್ಮಿಕ ಅಥವಾ ಆಧ್ಯಾತ್ಮಿಕ ಅನುಸಂಧಾನಗಳಿಂದಲೇ ಹೂವಯ್ಯನಿಗೆ ತನ್ನ ಸುತ್ತಲಿರುವ ಜನರು, ಪ್ರಾಣಿಗಳು, ಮರಗಿಡಗಳು ಆಧಾರದ ಮೇಲೆ ಪ್ರಕೃತಿ, ಪ್ರಪಂಚ ಸಮಸ್ತವೂ ಒಂದೇ ಬೃಹತ್ ಪ್ರಾಣಶಕ್ತಿಯ ಚೆದುರು ಕಿಡಿಗಳೆನ್ನುವುದು ಬೋಧವಾಗುತ್ತದೆ". (ಸುಬ್ಬಣ್ಣ ಕೆ.ವಿ., ಕುವೆಂಪುಗೆ ಪುಟ್ಟ ಕನ್ನಡಿ, ೧೯೯೫, ಪುಟ ೩೪)

'ಸಮಗ್ರ ವಿಶ್ವವು ಅಭೇದ್ಯ ಸತ್ಯವಾಗಿದೆ ಮತ್ತು ಏಕಕಾಲದಲ್ಲಿ ನಿರಂತರ ಚಲನಶೀಲವೂ, ಜೀವಂತವೂ, ಜೈವಿಕವೂ, ಆಧ್ಯಾತ್ಮಿಕವೂ ಮತ್ತು ಭೌತವಸ್ತುವೂ ಆಗಿದೆ ಎನ್ನುವ ದೃಷ್ಟಿ ಕುವೆಂಪುರವರಿಗಿತ್ತು ಎಂಬ ಅಂಶ 'ಕಾನೂರುಹೆಗ್ಗಡಿತಿ'ಯಲ್ಲಿ ವ್ಯಕ್ತವಾಗಿದೆ. ಈ ಕೆಳಗಿನ ಪ್ರಸಂಗ ಹೂವಯ್ಯನ ಅನುಭವದ ನೆಲೆಯ ಸಾಕ್ಷಿಯಂತಿದೆ. ಮುತ್ತಳ್ಳಿಯಲ್ಲಿ ಕುಳಿತು ಓದುತ್ತಿದ್ದಾಗಿನ ತಲ್ಲೀನತೆ ಕಲ್ಪನಾ ಜಗತ್ತಿನ ಸೌಂದರ್ಯ ವೈಭವಗಳ ಸ್ವಗತದಲ್ಲಿ ವಿಹರಿಸುವ ಮಲೆನಾಡಿನ ಪ್ರಕೃತಿ ಸಾನಿಧ್ಯದಲ್ಲಿ ಸಜೀವಗೊಳ್ಳುವ ಪ್ರಕ್ರಿಯೆ ಹೂವಯ್ಯನ ಅನುಭಾವಿನೆಲೆಗೆ ಉತ್ತಮ ಉದಾಹರಣೆಯಂತಿದೆ.

"…. ಬೆಟ್ಟದ ನೆತ್ತಿಯ ಮೇಲೆ ನಿಂತು, ಕಣ್ಣು ಹೋಗುವವರೆಗೂ ಹಬ್ಬಿರುವ ದೊಡ್ಡ ಕಾಡುಗಳನ್ನು ನೋಡಿದಾಗ ಕಣ್ಣೀರು ಕರೆದಿದ್ದೇನೆ. ಪೂರ್ವ ದಿಗಂತದಲ್ಲಿ ಸೂರ್ಯಬಿಂಬ ಕೆಂಪು ಕುಂಕುಮದಲ್ಲಿ ಮಿಂದು ಮೂಡುತ್ತಿದ್ದಾಗ ನೋಡಿ ಕಣ್ಣೀರು ಕರೆದಿದ್ದೇನೆ. ಮುಂಗಾರಿನ ಪ್ರಾರಂಭದಲ್ಲಿ ಆಕಾಶವೆಲ್ಲ ಕರಿಮುಗಿಲು ತುಂಬಿ,

ಮಹಾಸರ್ಪದ ಮಹಾಜಿಹ್ವೆಗಳಂತೆ ಬಳ್ಳಿಮಿಂಚು ಕುಣಿಯುವುದನ್ನು ನೋಡಿ ಕಣ್ಣೀರು ಕರೆದಿದ್ದೇನೆ.... ಪೂರ್ಣಿಮಾ ರಾತ್ರಿಯಲ್ಲಿ ಚಂದ್ರನು ಶುಭ್ರಜ್ಯೋತ್ಸ್ನೆ.... ಹಾಲು ಚೆಲ್ಲದಂತೆ ಕಾಡುಗಳ ಮೇಲೆ ಮಲಗಿರುವುದನ್ನು ನೋಡಿ ಕಣ್ಣೀರು ಕರೆದಿದ್ದೇನೆ.... ನಿನಗೂ ಕಣ್ಣೀರು ಕರೆಯುವ ಶಕ್ತಿಯಿದೆ. ಸೀತೆ ನಿನಗೆ ಯಾರೂ ಅದನ್ನು ಹೇಳಿಕೊಟ್ಟಿಲ್ಲ. ಚಿಂತೆಯಿಲ್ಲ ನಾನು ಹೇಳಿಕೊಡುತ್ತೇನೆ. ಆಮೇಲೆ ನಿನ್ನ ದೃಷ್ಟಿ ಬದಲಾಯಿಸುತ್ತದೆ. ನಿನ್ನ ಆತ್ಮವೇ ಬೇರೆಯಾಗುತ್ತದೆ.... ಜಗತ್ತೆಲ್ಲ ಆನಂದಮಯವಾಗುತ್ತದೆ. ದುಃಖವೂ ಕೂಡ ಮಧುರವಾಗುತ್ತದೆ.

ದೇವರು ಈ ಜಗತ್ತನ್ನೆಲ್ಲಾ ಸೃಷ್ಟಿ ಮಾಡಿದ್ದಾನೆ. ಅವನು ಎಲ್ಲೆಲ್ಲೂ ಇದ್ದಾನೆ. ಇಲ್ಲಿಯೂ ಇದ್ದಾನೆ. ನಾನು ನೀನು ಆಡುತ್ತಿರುವ ಈ ಮಾತುಗಳನ್ನೂ ಕೇಳುತ್ತಿದ್ದಾನೆ. ಅವನು ಏನು ಬೇಕಾದರೂ ಮಾಡಲು ಶಕ್ತನು ನಾವು ಅವನನ್ನು ಪ್ರೀತಿಸಬೇಕು. ಅದನ್ನೇ ಭಕ್ತಿ ಎಂದು ಕರೆಯುತ್ತಾರೆ. ಅವನು ಈ ಜಗತ್ತನ್ನು ಮಾಡಿ, ದೂರ ಓಡಿಹೋಗಿ ಕೂತುಕೊಂಡಿಲ್ಲ. ಅದರಲ್ಲಿ ಐಕ್ಯವಾಗಿದ್ದಾನೆ. ಸೇರಿಕೊಂಡಿದ್ದಾನೆ. ಸಕ್ಕರೆಯನ್ನು ನೀರಿಗೆ ಹಾಕಿದರೆ ಕರಗಿ ಸೇರಿಕೊಳ್ಳುವಂತೆ ಬೆಳಗ್ಗೆ ಸೂರ್ಯನಾಗಿ ಮೂಡಿ ಬರುತ್ತಾನೆ. ರಾತ್ರಿ ಕತ್ತಲೆಯ ರೂಪದಿಂದ ಬರುತ್ತಾನೆ. ಅವನೇ ಗಾಳಿಯಾಗಿ ಬೀಸುತ್ತಾನೆ. ಮಳೆಯಾಗಿ ಸುರಿಯುತ್ತಾನೆ. ಮಿಂಚಾಗಿ ಹೊಳೆಯುತ್ತಾನೆ.... ನೋಡು ನೀನು ಮುಡಿದುಕೊಂಡಿರುವ ಹೂವಿನ ಸೌಂದರ್ಯವೂ ಅವನೇ ! ಆ ಸಂಧ್ಯಾ ಸೌಂದರ್ಯವನ್ನು ನೋಡಿದಾಗ ನನಗೆ ಅವನನ್ನೇ ನೋಡಿದಂತೆ ಅನುಭವವಾಗುತ್ತದೆ. ಆಗ ನನಗೆ ಅತ್ಯಾನಂದವಾಗುತ್ತದೆ. ಆದ್ದರಿಂದ ಕಣ್ಣೀರು ಬಂದೇ ಬರುತ್ತದೆ. ದುಃಖದಿಂದಲ್ಲ, ಸುಖದಿಂದ !" (ಕುವೆಂಪು.. ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೭೩)

ಹೂವಯ್ಯನ ಈ ಮೇಲಿನ ಮಾತುಗಳಲ್ಲಿ ಪ್ರಕೃತಿಯ ಬಗೆಗಿನ ತನ್ಮಯತೆ, ಭಾವಪರವಶತೆ, ಆಧ್ಯಾತ್ಮಿಕಭಾವವನ್ನು ಕಾಣಬಹುದಾಗಿದೆ. ಕುವೆಂಪುರವರ ಆಧ್ಯಾತ್ಮಿಕದೃಷ್ಟಿ ಸರ್ವವ್ಯಾಪಿಯಾಗಿ ಅವರ ಕೃತಿಗಳಲ್ಲಿ ದಾಖಲಾಗಿರುವುದನ್ನು ಕಾಣಬಹುದು. ತೀರ್ಥಹಳ್ಳಿ, ಮುತ್ತಳ್ಳಿ, ಕಾನುಬೈಲು, ಆಗುಂಬೆ ಘಾಟ್, ಕುಂದದ ಗುಡ್ಡ, ನವಿಲುಕಲ್ಲು, ಮೇಗುತಿ ಪರ್ವತ, ಸಿಬ್ಬಲುಗುಡ್ಡೆ ಮೊದಲಾದ ನಿಸರ್ಗದ ರಮ್ಯ ತಾಣಗಳು ಕಾದಂಬರಿಯಲ್ಲಿ ದಟ್ಟ ವಿವರಗಳೊಂದಿಗೆ ಚಿತ್ರಿತವಾಗಿವೆ. ಪ್ರತಿಯೊಂದು ವರ್ಣನೆಯಲ್ಲಿನ ಸಂಭ್ರಮ, ತಲ್ಲೀನತೆ ಹಾಗೂ ಅನುಭವವೇ

ಮೈಪಡೆದಂತಹ ವರ್ಣನೆಗಳಲ್ಲಿ ಆಧ್ಯಾತ್ಮಿಕವಾಗಿ ಪ್ರಕೃತಿಯನ್ನು ಗ್ರಹಿಸುವ ನೆಲೆಗಳನ್ನು ಗುರುತಿಸಬಹುದಾಗಿದೆ.

"ಸೂರ್ಯೋದಯವಾಗಿ ಹೊಂಬಿಸಲು ದೀರ್ಘತರುಚ್ಛಾಯಗಳ ಮಧ್ಯೆ ತೂರಿಬಂದು ಕುರುಚಲುಗಿಡಗಳ ಮೇಲೆಯೂ ಪಿಣಿಲಾಗಿ ಹೆಣೆದುಕೊಂಡಿದ್ದ ಬಳ್ಳಿ ಹೊದರುಗಳ ಮೇಲೆಯೂ ಶುಷ್ಕಪರ್ಣಾವೃತವಾಗಿದ್ದ ನೆಲದ ಮೇಲೆಯೂ ಬಿದ್ದಿತು. ಇತರ ವನ್ಯಪಕ್ಷಿಗಳೂ ತಮ್ಮ ತಮ್ಮ ಧ್ವನಿ ಪ್ರದರ್ಶನದಲ್ಲಿ ತೊಡಗಿದವು. ಒಂದು ಕಡೆ ಕಾಜಾಣವು ತನ್ನ ಸ್ವರ್ಗೀಯ ಸುಮಧುರವಾದ ಗಾನಧಾರೆಯಿಂದ ಅರಣ್ಯ ಪರ್ವತಗಳನ್ನು ಸಂಗೀತ ಸ್ತೋತ್ರದಲ್ಲಿ ತೇಲಿಸುತ್ತಿತ್ತು. ಒಂದು ಕಡೆ ಗಿಳಿವಿಂಡುಗಳ ಚಕಿತವಾಣಿ ಮನೋಹರವಾಗಿತ್ತು. ಒಂದು ಕಡೆ ಕಾಮಳ್ಳಿಯ ಲಲನಾಕಂಠವು ಬಿಸಿಲುಬಿದ್ದಿದ್ದ ಮರದ ಬರಲುನೆತ್ತಿಯಿಂದ ದನಿಜೇನು ಸೂಸುತ್ತಿತ್ತು. ಒಂದೆಡೆ ಮಂಗಟ್ಟೆ ಹಕ್ಕಿಗಳ ವಿಕಟನಾದವು ಕಾಡನ್ನು ಭಯಗೊಳಿಸುವಂತಿತ್ತು. ಹೂ ತುಂಬಿದ ಮರಗಳಲ್ಲಿ ಲಕ್ಷಾಂತರ ಜೇನುಹುಳುಗಳು ಓಂಕಾರದ ಮಂತ್ರ ಝೇಂಕರಿಸುತ್ತಿದ್ದವು". (ಕುವೆಂಪು., ಕಾನೂರು ಹೆಗ್ಗಡಿತಿ. ೧೯೮೮. ಪುಟ ೩೯)

"ಸ್ವಲ್ಪ ಹೊತ್ತಿನಲ್ಲಿಯೆ ನಿಶ್ಚಲವಾಗಿದ್ದ ವಾಯುಮಂಡಲ ಚಲಿಸತೊಡಗಿತು. ಗಾಳಿ ಬರಬರುತ್ತಾ ಬಿರುಸಾಗಿ ಬೀಸತೊಡಗಿತು. ಕುಂಕುಮದಂತೆ ನುಣ್ಣಗಿದ್ದು, ಬೇಸಗೆಯ ಸುಡು ಬಿಸಿಲಿಗೆ ಬೆಂದು ಹಗುರವಾಗಿದ್ದ ರಸ್ತೆಯ ಕೆಮ್ಮಣ್ಣು ಧೂಳು ಮುಗಿಲಾಗಿ ಮೇಲೆದ್ದು, ಸುಳಿಸುಳಿಯಾಗಿ ಚಿತ್ರ ವಿಚಿತ್ರ ಭಂಗಿಗಳಿಂದ ಇಕ್ಕೆಲದ ದಟ್ಟ ಕಾಡುಗಳ ಹಸುರಿನಲ್ಲಿ ನುಗ್ಗ ತೊಡಗಿತು. ಗಗನ ಚುಂಬಿಗಳಾದ ವೃಕ್ಷ ಶಿಖರಗಳು ಬಳ್ಳಿಗಳಂತೆ ಬಳುಕಿ ಭಯಂಕರವಾಗಿ ತಲೆದೂಗಿದವು. ನಾಡಿನ ನೀರವತೆ ಭೋರೆಂಬ ಭೀಷಣನಾದಕ್ಕೆ ಸೂರೆಹೋಯಿತು. ಬೂರುಗದರಳೆ, ತರಗಲೆ, ಕಸಕಡ್ಡಿ, ಒಂದೆಡೆಯಿಂದ ಮತ್ತೊಂದೆಡೆಗೆ ಹುಚ್ಚು ಹಿಡಿದಂತೆ ಹಾರಾಡ ತೊಡಗಿದವು. ಬಿದಿರ ಮೆಳೆಗಳು ತಲೆಗೆದರಿ ಆನೆಗಳಂತೆ ಘೀಳಿಟ್ಟವು. ಒಂದನ್ನೊಂದು ಉಜ್ಜಿದ ಬೊಂಬುಗಳಿಂದ ಒಗೆದು ಆ ಘೀಂಕೃತಿ ಅರಣ್ಯ ಪಿಶಾಚಿಗಳ ಆರ್ತನಾದದಂತೆ ಭಯಾನಕವಾಯಿತು. ಗಾಡಿಯಲ್ಲಿದ್ದವರಿಗೂ ಒಂದೊಂದು ಸಾರಿ ಪವನಹತಿಯಿಂದ ಉಸಿರು ಕಟ್ಟಿದಂತಾಗುತ್ತಿತ್ತು.

ನೋಡುತ್ತಿದ್ದ ಹಾಗೆಯೆ ನೀಲ ನಿರ್ಮಲವಾಗಿ, ಎಲ್ಲಿಯೋ ದೂರ ದೂರದಲ್ಲಿ ಒಂದೊಂದೆಡೆ ಮಾತ್ರ ಸಣ್ಣ ಬೆಳ್ಮುಗಿಲುಗಳಿಂದ ತೋಳಗಳ ಹಿಂಡಿನ

ಬರುವಿಕೆಯನ್ನು ಅರಿತು ಭಯಭ್ರಾಂತವಾಗಿ ಮೇವು ಬಿಟ್ಟು ಓಡುವ ಬಿಳಿಯ ಕಂಬಳಿಕುರಿಗಳ ಮಂದೆಯಂತೆ, ದಿಕ್ಕು-ದಿಕ್ಕಿಗೆ ಚೆದರಿ ಬೆದರಿ ಧಾವಿಸಿದವು.

ಅವುಗಳಿಗೆ ಬದಲಾಗಿ ಧೂಮವರ್ಣದ, ಧೂಮರೂಪದ, ಮಹಾ ಶಿಲಾಖಂಡಗಳಂತೆ ಮೃದು ಕಠಿಣವಾಗಿದ್ದ ಮುಂಗಾರ್ಗಾಲದ ಕರಿಮುಗಿಲಸೇನೆ ಧೀರವಾಗಿ, ಗಂಭೀರವಾಗಿ, ಭೀಷಣವಾಗಿ, ವೇಗವಾಗಿ, ನಭಸ್ಥಲವನ್ನೆಲ್ಲ ಆಕ್ರಮಿಸಿತು. ಮೊದಮೊದಲು ದೂರದೂರವಾಗಿದ್ದ ಗುಡುಗು-ಮಿಂಚು ತುಸುಹೊತ್ತಿನಲ್ಲಿಯೆ ಭಯಂಕರವಾಗಿ ಬಳಸಾರಿದವು. ಗಾಡಿಯ ಹಿಂಭಾಗದಲ್ಲಿ ಕೂತಿದ್ದ ಹೂವಯ್ಯ ಆ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದನು. ಅವನಲ್ಲಿ ಭಯವೂ ರೋಮಾಂಚನವೂ ಒಂದರೊಡನೊಂದು ಸ್ಪರ್ಧೆ ಹೂಡಿದಂತಿತ್ತು. ಪ್ರಕೃತಿಯ ಆ ಪ್ರಚಂಡ ಶಕ್ತಿಗಳ ತಾಂಡವ ಲೀಲೆಯಲ್ಲಿ ಮಾನವನ ಮಹದ್ವ್ಯಾಪಾರಗಳೂ ಕೂಡ ಕ್ಷುದ್ರ ಕ್ಷುದ್ರವಾಗಿ ತೋರತೊಡಗಿದವು. ಆ ಝಂಝಾವಾತ ವಿದ್ಯುತ್ ವಜ್ರಗಳಿಗೆ ಮುತ್ತಳ್ಳಿಯ ಗಾಡಿಯೂ ಗಾಡಿಯಲ್ಲಿದ್ದ ಅಸಂಸ್ಕೃತ ಅರ್ಧಸಂಸ್ಕೃತ ಸುಸಂಸ್ಕೃತರೂ ಅಲ್ಲಿ ಚಿಮ್ಮಿ ಜಿಗಿಯುತ್ತಿದ್ದ ತರಗಲೆಗಳಿಗಿಂತಲೂ ಹೆಚ್ಚೇನು ಗಣ್ಯವಾಗಿದ್ದಂತೆ ತೋರುತ್ತಿರಲಿಲ್ಲ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೭೪)

ಮಳೆಯ ಮುನ್ಸೂಚನೆ ಮಲೆನಾಡಿನ ಪ್ರಕೃತಿಯ ಜೊತೆ ಸಮ್ಮಿಳಿತಗೊಂಡು ಚಿತ್ರಿತವಾಗಿರುವ ಈ ಬಗೆಯ ವರ್ಣನಾ ವೈಭವ, ಸಾಮಾನ್ಯರಿಗೆ ನಿಲುಕುವಂತದ್ದಲ್ಲ ಎಂಬುದು ಈ ಮೇಲಿನ ಭಾಗವನ್ನು ಗಮನಿಸಿದಾಗ ತಿಳಿದುಬರುತ್ತದೆ. ನಿಜಕ್ಕೂ ಪ್ರಕೃತಿವರ್ಣಾನಾ ಕೌಶಲದಲ್ಲಿ ಕುವೆಂಪು ಶಕ್ತಿಕವಿ. ಪರಿಸರದ ಭೀಕರತೆ, ಭಯಾನಕತೆ ಅದರೊಂದಿಗೆ ಪ್ರಕೃತಿಗಿರುವ ಈ ಪ್ರಚಂಡ ಶಕ್ತಿಯೆದುರು ಮನುಷ್ಯನೊಬ್ಬ ಕ್ಷುದ್ರ ಜೀವಿ, ತರಗೆಲೆಗೆ ಸಮಾನವೆಂಬ ಜಿಜ್ಞಾಸೆ, ವ್ಯಕ್ತವಾಗಿದೆ. ಕುವೆಂಪು ಕೊಡುವ ಹೋಲಿಕೆಗಳೂ ಪ್ರಕೃತಿ ದತ್ತವಾದವು ಚೆದರಿ ಬೆದರಿ ದಿಕ್ಕುದಿಕ್ಕಿಗೆ ಓಡುವ ಬಿಳಿಯ ಕಂಬಳಿಕುರಿಗಳ ಮಂದೆ ಎಂಬುದು ಅವರ ಪ್ರತಿಭೆಗೆ ದ್ಯೋತಕವಾಗಿದೆ. ಅಲ್ಲದೆ, ಪ್ರಕೃತಿಯ ಈ ಸಾಮಾನ್ಯ ಘಟನೆಯೊಂದನ್ನು ಇಷ್ಟು ಭವ್ಯವಾಗಿ ಕಟ್ಟಿಕೊಡುವುದು ಹಾಗೂ ಅದನ್ನು 'ತಾಂಡವಲೀಲೆ'ಯಾಗಿ ಗುರುತಿಸುವುದು ಅವರ ಆಧ್ಯಾತ್ಮಿಕ ಮನಸ್ಥಿತಿಗೆ ಉತ್ತಮ ಉದಾಹರಣೆಯಾಗಿದೆ.

ಮಲೆನಾಡಿನ ಪ್ರಕೃತಿ ಸೌಂದರ್ಯದ ಕಲ್ಪನೆಯಾಗಲೀ ಆ ಸೌಂದರ್ಯದ ಅನುಭೂತಿಯಿಂದಾಗುವ ಆನಂದವನ್ನು ಸಹೃದಯರಿಗೂ ಉಂಟಾಗುವಂತೆ ಮಾಡುವ ಈ ವರ್ಣನೆ ಕುವೆಂಪುರವರ ಸೃಷ್ಟಿಶಕ್ತಿ. ಸೌಂದರ್ಯದ ವರ್ಣನೆಗಷ್ಟೇ ಇದು ಸೀಮಿತವಾಗಿಲ್ಲ. ಮಲೆನಾಡಿನ ಪಕ್ಷಿಗಳು, ಜೀವ ಜಂತುಗಳ ದಿನಚರ್ಯೆಯನ್ನು ತಿಳಿಸುವುದು ಇದರ ಉದ್ದೇಶವಾಗಿದೆ.

"ಬೇಸಿಗೆಯ ಮಧ್ಯಾಹ್ನದ ಸೂರ್ಯನ ತಪ್ತ ತಾಮ್ರಬಿಂಬ ಕಠೋರ ನಿಷ್ಕಾರುಣ್ಯದಿಂದ ಕರೆಯುತ್ತಿದ್ದ ಪ್ರಖರ ಕಿರಣವರ್ಷದಲ್ಲಿ ದಟ್ಟವಾಗಿ ಕಾಡುಬೆಳೆದು ತೆರೆ ತೆರೆಯಾಗಿ ಹಬ್ಬಿದ್ದ ಮಲೆನಾಡಿನ ಬೆಟ್ಟ ಗುಡ್ಡಗಳು ಆಯಾಸದಿಂದ ಮೂರ್ಛೆಗೊಂಡಂತೆ ಶ್ಯಾಮಲ ನಿದ್ರಾಸಕ್ತವಾಗಿದ್ದವು. ಧೂಳುಗೆಂಪಿನ ರಸ್ತೆ ಸಹ್ಯಾದ್ರಿಯ ಅರಣ್ಯದೇವಿಯ ಮಹಾಮಸ್ತಕದ ಸುದೀರ್ಘವಾದ ಬೈತಲೆಯ ಸರಳವಕ್ರ ನಿಮ್ನೋನ್ನತ ರೇಖಾವಿನ್ಯಾಸದಂತೆ ಮೆರೆದಿತ್ತು. ರಸ್ತೆಯಲ್ಲಿ ಅಲ್ಲಲ್ಲಿ ತಂತಿಕಂಬಗಳಿದ್ದು, ಬಾನಿಗೆದುರಾಗಿ ತಂತಿಯ ಕರಿಯಗೆರೆ ಕಂಬದಿಂದ ಕಂಬಕ್ಕೆ ಪ್ರವಹಿಸಿ ಓಡುವಂತಿತ್ತು. ಹೆದ್ದಾರಿಯ ಇಕ್ಕೆಲಗಳಲ್ಲಿಯೂ ಪ್ರಾರಂಭವಾಗಿ ಸ್ವಚ್ಛಂದ ಕಾನನಶ್ರೇಣಿ ದೃಷ್ಟಿದೂರದವರೆಗೂ ಪ್ರಸರಿಸಿತ್ತು. ಯಾವುದೊಂದು ಪ್ರಾಣಿಯ ಸಂಚಾರವು ಇರಲಿಲ್ಲ. ಆಗಾಗ ನೇರಿಲೆಯ ಪೊದರು ಮರಗಳಲ್ಲಿ ಪಿಕಳಾರ ಹಕ್ಕಿಗಳು ಮಾತ್ರ ಚಿಮ್ಮುತ್ತಿದ್ದುದು ಕಾಣಬರುತ್ತಿತ್ತು.... ಆ ಹಗಲು, ಆ ಬಿಸಿಲು, ಆ ಕಾಡಿನ ಹಸಿರು ಶಾಂತಿ, ಆ ವಿಜನತೆ.... ಆ ಮಹಾ ನಿಶ್ಚಲ ಜಗತ್ತಿನಲ್ಲಿ ಗಾಡಿಯೊಂದೇ ಚಲಿಸುವ ಕ್ಷುದ್ರವಸ್ತುವಾಗಿತ್ತು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೨)

ಬೇಸಗೆಯ ಬಿಸಿಲಿನ ಪ್ರಖರತೆಯ ಮಲೆನಾಡಿನ ಪ್ರಕೃತಿಯ ಜಡತ್ವವನ್ನು, ಪರಿಸರದ ನಿರ್ಭಾವುಕತೆಯನ್ನು ಕೂಡ ಕುವೆಂಪು ಸಶಕ್ತವಾಗಿ ಚಿತ್ರಿಸಬಲ್ಲರು. ಮಳೆಗಾಲದಲ್ಲಿನ ಚೈತನ್ಯದ ಚಿಲುಮೆಯಂತೆ ಸದಾ ನಳನಳಿಸುತ್ತಾ ಪ್ರಾಣಿ-ಪಕ್ಷಿಗಳ ಇಂಚರಗಳಿಂದ, ನದಿ-ತೊರೆಗಳ ಕಲರವಗಳಿಂದ ಚಲನಶೀಲವಾದ ಪರಿಸರವನ್ನಷ್ಟೇ ಬಣ್ಣಿಸದೆ, ಬಿಸಿಲಿನ ಜಳದಲ್ಲಿ ನಿಶ್ಚಲವಾದ ಪರಿಸರವನ್ನು ಬಣ್ಣಿಸುತ್ತಾರೆ. ಅಲ್ಲದೇ, ಇವರ ಪ್ರಕೃತಿ ವರ್ಣನೆ ಕಾವ್ಯ ಭಾಷೆಯಿಂದ ಕೂಡಿರುವುದನ್ನು ಮುಖ್ಯವಾಗಿ ಗಮನಿಸಬಹುದಾಗಿದೆ.

ಪ್ರಕೃತಿ ಎಂಬುದು ಜಡತ್ವದಿಂದ ಕೂಡಿರುವುದಲ್ಲ. ಜಡವಾದ ಮನುಷ್ಯನಲ್ಲೂ ಜೀವಂತಿಕೆಯನ್ನು, ಉತ್ಸಾಹವನ್ನು, ಚೈತನ್ಯವನ್ನು ಸ್ಫೂರ್ತಿಯನ್ನು ತುಂಬಿ ಜಡತ್ವವನ್ನು ಕಳೆಯುತ್ತದೆ ಎಂದು ಕುವೆಂಪು ನಂಬಿದ್ದರು.

"ಪರ್ವತಗಳ ಸಂದಿಯಲ್ಲಿ ಕಾಣಿಸಿಕೊಂಡು ಹರಿದುಬಂದ ಹೊಳೆ ಅಂದಿನಂತೆಯೇ ಇಂದು ಪರ್ವತಗಳ ಇಡುಕಿನಲ್ಲಿ ಕಣ್ಮರೆಯಾಗುತ್ತಿತ್ತು. ತುಂಗೆಯ ಇಕ್ಕೆಲ ದಡಗಳಲ್ಲಿ ಅಂದಿನಂತೆಯೇ ಅರಣ್ಯಗಳು ಮೂಲೆ ಮೂಲೆಯಾಗಿ ನಿಂತಿದ್ದವು. ಆಗಿದ್ದ ಮರಗಳಲ್ಲಿ ಈಗಲೂ ಅನೇಕವಿವೆ ! ನದಿಯ ನಡುವೆ ಮಲಗಿದ್ದ ಆ ಹೆಬ್ಬಂಡೆಯ ರಾಶಿಗಳೂ ಈಗಲೂ ಅಂದಿನಂತೆಯೇ ಇವೆ. ಒಂದು ಮಾತ್ರ ಪ್ರವಾಹದಲ್ಲಿ ಉರುಳಿ ಬಿದ್ದಿದೆ. ಬಂಡೆಯಿಂದ ಬಂಡೆಗೆ ಧುಮುಕುತ್ತಿದ್ದ ಜಲರಾಶಿ ಸಂಮಥಿತವಾಗಿ ನೊರೆನೊರೆಯಾಗಿ ತುಂತುರು ತುಂತುರಾಗಿ ಘೂರ್ಣಾಯ ಮಾನವಾಗಿ, ಕಡೆಗೆ ತೆರೆತೆರೆಯಾಗಿ, ಬಿಸಿಲಿನಲ್ಲಿ ಮಿರುಗಿ ಮಿರುಗಿ ಅಂದಿನಂತೆಯೇ ಇಂದೂ ಲೀಲಾಮಗ್ನವಾಗಿರುವಂತೆ ತೋರುತ್ತಿದೆ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೬೮, ಪುಟ ೩)

ಈ ವಾಕ್ಯಗಳನ್ನು ಗಮನಿಸುವುದಾದರೆ ಪ್ರಕೃತಿ ಎನ್ನುವುದು ಕುವೆಂಪುವಿಗೆ ಪರಮನ ಆರಾಧನೆ. ಉತ್ಕಟ ಆನಂದವೇ ಈ ನಿಸರ್ಗಾನುಭವದ ಮೂಲನೆಲೆ. ನಿಸರ್ಗದ ಸಾನ್ನಿಧ್ಯದಿಂದ ಸಿಗುವ ಆನಂದ ಮತ್ತೆ ಯಾವುದರಿಂದಲೂ ದೊರಕದು ಎಂಬ ಸತ್ಯದ ಅನಾವರಣ ನಮಗಾಗುತ್ತದೆ. ಇವರ ಕತೆ, ಕಾದಂಬರಿಗಳಲ್ಲಿ ನಿಸರ್ಗ ಮನುಷ್ಯನ ಸಂಬಂಧ ಹಾಗೂ ಮಲೆನಾಡಿನ ಬದುಕನ್ನು ಇಲ್ಲಿನ ಪರಿಸರ ಪ್ರಭಾವಿಸುವ ರೀತಿ ಸಶಕ್ತವಾಗಿ ಚಿತ್ರಿತವಾಗಿವೆ.

ಮಳೆಗಾಲದಲ್ಲಿ ಮಲೆನಾಡಿನಲ್ಲಿ ಘೋರವಾದ, ಧಾರಾಕಾರವಾದ ಮಳೆಯಾಗುತ್ತದೆ. ವಾರಗಟ್ಟಲೆ ಸುರಿಯುವ ಈ ಮಳೆಗೆ ಗಾಳಿಗೆ ಹೆದರದೆ ಪ್ರಕೃತಿಯಲ್ಲಿ ತಾವು ಒಂದೆಂಬಂತೆ ಬೆರೆಯುವುದು ಇಲ್ಲಿನ ಜನರ ಗುಣ.

"ಗುತ್ತಿ ಸೀತೂರು ಗುಡ್ಡಕ್ಕೆ ಏರಲು ಮೊದಲು ಮಾಡಿದಾಗಲೆ ಬೈಗುಗಪ್ಪಿನೊಂದಿಗೆ ಮುಗಿಲುಗಟ್ಟಿ ಮುಸುಕಿ ಮಿಣುಕು ಹುಳುಗಳ ಮಿನುಗು ಕಾಣತೊಡಗಿತ್ತು. ಜೀರುಂಡೆಗಳ ಕೂಗು ಕಿವಿಗೆ ಚಿಟ್ಟು ಹಿಡಿಸುತ್ತಿತ್ತು. ಮಳೆಗಾಲದ ಪ್ರಾರಂಭ ಸಮಯವಾಗಿದ್ದರೂ ಮಲೆಗಾಡು ಭಯಂಕರವಾಗಿದ್ದ ಸಿಂಭಾವಿ, ಸೀತೂರು, ಲಕ್ಕುಂದ, ಈ ಕಡೆಗಳಲ್ಲಿ ಇಂಬಳದ ಕಾಟವೂ ಹೆಚ್ಚಾಗಿತ್ತು. ....ಕತ್ತಲೆ

ಬರಬರುತ್ತಾ ದಟ್ಟವಾಯ್ತು ಜೀರ್ದುಂಬಿಗಳ ಜೋರುದನಿ ಘೋರವಾಯ್ತು ತಾನು ನಡೆಯುತ್ತಿದ ಹಾದಿಯಾಗಲಿ ತನ್ನ ಕಾಲುಗಳಾಗಲಿ ನೆತ್ತರು ಹೀರುತ್ತಿದ್ದ ಇಂಬಳಗಳಾಗಲಿ ಬಂದಿನಿತೂ ಕಾಣಿಸುವಂತಿರಲಿಲ್ಲ. ನಾಗರಿಕರಿಗೆ ಭೀಕರವಾಗಿ ಕಾಣುವ ವರ್ಷಾಕಾಲದ ಆ ಭಯಂಕರ ಪರ್ವತಾರಣ್ಯದ ರುದ್ರಪ್ರಕೃತಿ ಅವನಿಗೆ ಬಹುಕಾಲದ ಪರಿಚಯದಿಂದ ಸಾಧಾರಣವಾಗಿತ್ತು. ಅವನೂ ಆ ಪ್ರಕೃತಿಯ ಒಂದಂಶವಾಗಿದ್ದನು; ಬೆಟ್ಟದಲ್ಲಿ ಬಂಡೆಯಂತೆ ಕಾಡಿನಲ್ಲಿ ಮರದಂತೆ ಅದರ ಒಂದಂಗವಾಗಿದ್ದನು". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೬೮, ಪುಟ ೨)

ಮಲೆನಾಡಿನ ಜನರು ಪ್ರಕೃತಿಯೊಂದಿಗೆ ಪ್ರಕೃತಿಯಂತೆ ಕಲೆತು ಬದುಕನ್ನು ನಡೆಸುತ್ತಾರೆ. 'ಗುತ್ತಿ' ಇಡೀ ಮಲೆನಾಡಿನ ಜನರನ್ನೇ ಪ್ರತಿನಿಧಿಸುತ್ತಾನೆ. ಗುತ್ತಿಯ ಪ್ರಕೃತಿಯೊಂದಿಗಿನ ಈ ಬಗೆಯ ಒಡನಾಟ ಮಲೆನಾಡಿನ ಜನರಿಗೂ ಸಹಜವಾಗಿತ್ತು ಹಾಗೂ ಸರ್ವೇ ಸಾಮಾನ್ಯವಾಗಿತ್ತು ಎಂಬುದು ಇದರಿಂದ ತಿಳಿಯುತ್ತದೆ. ಅದೇ ರೀತಿ ಹೂವಯ್ಯ ಕೂಡ ತನ್ನ ಸುತ್ತಲ ಪರಿಸರಕ್ಕೆ ಪ್ರತಿಕ್ರಿಯಿಸುವ ರೀತಿ ಸಂಕೀರ್ಣವಾದದ್ದು. ಹೂವಯ್ಯನ ಸುತ್ತಲ ಪ್ರಾಕೃತಿಕ ಪರಿಸರವು ಅವನ ಸೌಂದರ್ಯಾರಾಧನೆಗೆ, ಆಧ್ಯಾತ್ಮಿಕ ಸಾಧನೆಗೆ ಅತ್ಯವಶ್ಯಕವಾದ ಸಾಧನವಾಗಿ ಕಂಡುಬರುತ್ತದೆ. ಕಾದಂಬರಿಯ ಉದ್ದಗಲಕ್ಕೂ ಘಟನೆಗಳು, ಸನ್ನಿವೇಶಕ್ಕೆ ಪೂರಕವೆಂಬಂತೆ ಪ್ರಕೃತಿಯನ್ನು ಕುವೆಂಪು ಚಿತ್ರಿಸಿದ್ದಾರೆ.

"ನೋಡುತ್ತಿದ್ದ ಹಾಗೆ, ಹೂವಯ್ಯನ ಎದೆಯಗೂಡಿನಲ್ಲಿ ಹೃದಯವನ್ನು ಚಿಮ್ಮಿಸುತ್ತ, ಸೂರ್ಯನ ರಕ್ತಬಿಂಬ ದಿಗಂತರೇಖೆಯ ಮೇಲೆ ಇಣಿಕಿತು. ಇಣಿಕಿ ಮೇಲೆ ಮೇಲೆಕ್ಕೇರಿ ಸಂಪೂರ್ಣಬಿಂಬ ವಿರಾಜಮಾನವಾಯಿತು... ಆನಂದ ಸ್ವರೂಪಿಯಾದ ಭಗವಂತ ಸೌಂದರ್ಯರೂಪಿಯಾಗಿ ಮೈದೋರಿ ಹೂವಯ್ಯನ ಆತ್ಮದಲ್ಲಿ ರಸವಾಗಿ ಪ್ರವಹಿಸಿದನು". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೬೮, ಪುಟ ೪)

ಇಲ್ಲಿ ಹೂವಯ್ಯನ ಪ್ರಜ್ಞೆಯ ವಿಕಾಸಕ್ಕೆ 'ನಿಸರ್ಗ' ಸಾಧನವಾಗಿರುವುದನ್ನು ಗಮನಿಸಬಹುದು. ನಿಸರ್ಗದೊಂದಿಗೆ ಒಂದು ಬಗೆಯ 'ಆಧ್ಯಾತ್ಮಿಕ ಅನುಭವ'ವನ್ನು ಸ್ಥಾಪಿಸುವುದು ಕುವೆಂಪುರವರ ಪರಿಸರದೊಡಗಿನ 'ದೃಷ್ಟಿಕೋನ'ದ ಮುಖ್ಯ ಕಾರಣ. ಕುವೆಂಪು ಸ್ವತಃ ಪರಿಸರದ ಅನನ್ಯತೆಯನ್ನು ಅನುಭವಿಸಿದ್ದಾರೆ. ಪ್ರಕೃತಿಯ ನೆಲೆಬೀಡಾದ ಮಲೆನಾಡಿನ ಅನಂತ ಸೌಂದರ್ಯವನ್ನು ತಲಸ್ಪರ್ಶಿಯಾಗಿ ಸವಿದಿದ್ದಾರೆ. ಅಲ್ಲಿಯ ಸೂರ್ಯೋದಯ, ಸೂರ್ಯಾಸ್ತಗಳನ್ನು

ಅವುಗಳಲ್ಲಿನ ಕಲ್ಪನಾವಿಲಾಸಗಳನ್ನು 'ನವಿಲುಕಲ್ಲ'ನಲ್ಲಿ ಸ್ವತಃ ದರ್ಶಿಸಿದ್ದಾರೆ. ಸೂರ್ಯಾಸ್ತವನ್ನು ನೋಡಲೆಂದೇ ಕವಿಶೈಲದಲ್ಲಿ ಕುಳಿತು ಅದರಿಂದ ಪ್ರೇರಣೆ ಪಡೆದಿದ್ದಾರೆ. ಎಲ್ಲೆಡೆಯಲ್ಲೂ ಅವರ ಋಷಿದೃಷ್ಟಿಗೆ ಆಧ್ಯಾತ್ಮಿಕ ಅನುಭೂತಿ ಗೋಚರವಾಗುತ್ತದೆ. ಅದಕ್ಕೆ ಪೂರಕವಾಗಿ ಮಲೆನಾಡಿನ ಚಿತ್ರಗಳಲ್ಲಿರುವ ಸೂರ್ಯಾಸ್ತದ ಭವ್ಯಮನೋಹರ ಚಿತ್ರವನ್ನು ನೋಡಬಹುದು.

"ಆ ಗೈರಿಕವರ್ಣ ಜ್ಯೋತಿಯಲ್ಲಿ ಒಂದು ವಿಧವಾದ ಧಾರ್ಮಿಕತೆ ಸ್ಫುಟವಾಗಿತ್ತು. ಆ ದೀಪ್ತಿಯ ಜೊತೆಗೆ ಮೌನವೂ ಸೇರಿದ್ದುದರಿಂದ ಜಗತ್ತು ಗೈರಿಕವಸನಧಾರಿಯಾಗಿ ಧ್ಯಾನಸ್ಥನಾದ ಮಹಾ ತಪಸ್ವಿನಿಯಂತೇ ಭವ್ಯವಾಗಿತ್ತು..... ಆ ಸೌಂದರ್ಯಸಮುದ್ರದಲ್ಲಿ ನಾವೆಲ್ಲರೂ ತೆರೆತೆರೆಗಳಾಗಿ ಅಶರೀರಗಳಾಗಿ ವಿಶ್ವವಿಲೀನವಾದೆವು". (ಕುವೆಂಪು., ಮಲೆನಾಡಿನ ಚಿತ್ರಗಳು, ೨೦೦೫, ಪುಟ ೫)

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಚಿತ್ರಿತಗೊಂಡಿರುವ ಪ್ರಾಕೃತಿಕ ಪರಿಸರವು ಎಂತಹವರನ್ನೂ ವಿಸ್ಮಿತರನ್ನಾಗಿಸುತ್ತದೆ. ಮನುಷ್ಯನ ಬದುಕಿನ ಜೊತೆಜೊತೆಯಲ್ಲಿಯೇ ಕಥನದುದ್ದಕ್ಕೂ ಬಿಚ್ಚಿಕೊಳ್ಳುವ ಪರಿಸರದ ಭೀಕರ, ರೌದ್ರ ಹಾಗೂ ನಿಸರ್ಗ ಸೌಂದರ್ಯದ ದೃಶ್ಯಗಳ ಜೊತೆಗೆ ಪ್ರಕೃತಿಯಲ್ಲಿನ ವಿಸ್ಮಯಲೋಕಗಳನ್ನೂ ಕಾದಂಬರಿ ಗರ್ಭೀಕರಿಸಿಕೊಂಡಿದೆ. ನಮ್ಮ ಸುತ್ತಮುತ್ತಲು ಇರುವ ಪರಿಸರ ತನಗೆ ತಾನೇ ಸೃಷ್ಟಿಯಾಗಿರುವಂತದ್ದು. ಮುಖ್ಯ ಅಮುಖ್ಯಗಳ ಪರಿಕಲ್ಪನೆಯನ್ನು ಕುವೆಂಪು ನಿರಾಕರಿಸಿ ಎಲ್ಲವನ್ನು ಪೂರ್ಣದೃಷ್ಟಿಯಲ್ಲಿ ನೋಡುವ ಧೋರಣೆ ಸೃಷ್ಟಿಯ ಜೀವಸಮತೆಯನ್ನು ಜೀವಂತವಾಗಿ ಪ್ರಕಟಪಡಿಸುತ್ತದೆ. ಅದಕ್ಕೆ ಕುವೆಂಪು ಅವರ ಈ ಮಾತುಗಳೇ ಸಾಕ್ಷಿಯಾಗಿವೆ.

"ಸೃಷ್ಟಿಯ ವ್ಯೂಹದಲ್ಲಿ ಮರದ ತುದಿಯ ಹೂವೆಷ್ಟು ಮುಖ್ಯವೇ ಗೊಬ್ಬರವೂ ಅಷ್ಟೇ ಮುಖ್ಯ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮುಕುಂದಯ್ಯ ಮಾತ್ರ ಮುಖ್ಯ, ಹುಲಿಯ ಮುಖ್ಯವಲ್ಲ ಎನ್ನುವಂತಿಲ್ಲ. ಅದಕ್ಕೋಸ್ಕರವೇ ಇಲ್ಲಿ ಯಾರು ಮುಖ್ಯರಲ್ಲ. ಯಾರು ಅಮುಖ್ಯರಲ್ಲ. ಯಾವುದೂ ಯಃಕಶ್ಚಿತವಲ್ಲ! ಎಂದು ಪ್ರಾರಂಭದಲ್ಲಿಯೇ ಹೇಳಿದ್ದೇನೆ. ಬ್ರಾಹ್ಮಿ ದೃಷ್ಟಿ ಸಮಾಜಿಕಾರ್ಥಿಕ ವಿಚಾರಗಳೂ ಕೀಳಲ್ಲ. ಅವುಗಳಿಗೂ ಸೃಷ್ಟಿಯಲ್ಲಿ ಸ್ಥಾನವಿದ್ದೇ ಇದೆ." (ಶಿವಾರೆಡ್ಡಿ ಕೆ.ಸಿ., ಸಮಗ್ರಗದ್ಯ ಸಂಪುಟ ೨, ಪುಟ ೮೫೧)

ಹೀಗೆ ಕುವೆಂಪು 'ದರ್ಶನ ದೃಷ್ಟಿ'ಗೆ ಗೋಚರವಾಗುವ ಮಲೆನಾಡಿನ ಪರಿಸರ ನಿತ್ಯ ನೂತನ. ಮಲೆನಾಡಿನ ಪರಿಸರ ಅವರನ್ನು ರಂಜಿಸುತ್ತವೆ. ಅನಂತ ನಿಬಿಡಾರಣ್ಯ ಶ್ರೇಣಿಗಳು, ಗಿರಿಗಳಾಚೆಯಲ್ಲಿ ನೀಲಾಕಾಶವು ಪಾತಳದಲ್ಲಿ ನಿಂತು ಸ್ವರ್ಗವನ್ನು ಇಣಿಕಿ ನೋಡುವಂತೆ ಕವಿಗೆ ಭಾಸವಾಗುತ್ತದೆ. "ಆ ಗಿರಿಶಿಖರ ರೇಖೆಯಲ್ಲಿ ಇತರ ವೃಕ್ಷಗಳಿಗಿಂತ ಹಿರಿದಾಗಿ ಎತ್ತರವಾಗಿ ಬೆಳೆದ ಹೆಮ್ಮರಗಳು ಆಕಾಶಪಟ್ಟಣದಲ್ಲಿ ಬರೆದು, ಕೆತ್ತಿ, ಮೆತ್ತಿದ ಸಜೀವ ಚಿತ್ರಗಳಂತೆ ತೋರಿ, ವಿಶ್ವವರ್ಣಶಿಲ್ಪಿಯ ವರ್ಣನಾ ವೈಖರಿಯ ಕಲಾಕೌಶಲ್ಯವನ್ನು ಸಾರುವ ಗೆಲ್ಗಂಬಗಳ ಮೇಲೆ ಹಾರಾಡುವ ಶ್ಯಾಮಲ ಕೇತನಗಳಂತೆ ಕಂಗೊಳಿಸುವುವು.

ಆ ದೃಶ್ಯ ದಿನದಿನಕ್ಕೂ ಹೊತ್ತು ಹೊತ್ತಿಗೂ ಬೇರೆ ಬೇರೆ ಸೌಂದರ್ಯ ನಲಿಯುವುದು. ಅದು ಅನಂತ ಕವಿ ಅನಂತಾನಂತ ಕವನಗಳನ್ನು ವಿರಚಿಸುವ ಕಾವ್ಯರಂಗದಂತೆ ಮೆರೆಯುವುದು. ಮಳೆಗಾಲದಲ್ಲಿ ಒಂದು ದೃಶ್ಯ : ಚಳಿಗಾಲದಲ್ಲಿ ಮತ್ತೊಂದು ದೃಶ್ಯ : ಬೇಸಿಗೆಯಲ್ಲಿ ಇನ್ನೊಂದು ದೃಶ್ಯ, ಬೆಳಗಿನಲ್ಲಿ ಒಂದು ದೃಶ್ಯ: ಬೈಗಿನಲ್ಲಿ ಇನ್ನೊಂದು ದೃಶ್ಯ. ಹಗಲಿನಲ್ಲಿ ಮತ್ತೊಂದು ದೃಶ್ಯ, ಬೆಳ್ದಂಗಳಿನಲ್ಲಿ ಬೇರೊಂದು ಚೆಲುವು : ಕದ್ದಿಂಗಳಲ್ಲಿ ಮಗದೊಂದು ನೋಟ" (ಕುವೆಂಪು., ಮಲೆನಾಡಿನ ಚಿತ್ರಗಳು, ೨೦೦೫, ಪುಟ ೧೧)

ಕುವೆಂಪು ದೃಷ್ಟಿಗೆ ಕಾಣುವ ಪರಿಸರ ಸೌಂದರ್ಯೋಪಾಸನೆ. ನಿಸರ್ಗದಲ್ಲೇ ದೇವರನ್ನು ಕಾಣುವ ಆರಾಧನಾ ದೃಷ್ಟಿ, ಪ್ರಕೃತಿ ಭಗವಂತನ ಸೃಷ್ಟಿಯಲ್ಲ. ಬದಲಾಗಿ ದೇವರೇ ಪ್ರಕೃತಿಯ ರೂಪದಲ್ಲಿ ಅವತರಿಸಿದ್ದಾನೆ ಎಂಬ ಭಾವ. ಆಧ್ಯಾತ್ಮಿಕ ದೃಷ್ಟಿಕೋನ ಸ್ಪಷ್ಟವಾಗಿ ಗೋಚರ ವಾಗುತ್ತದೆ. ಕುವೆಂಪು ಅವರದು ಪರಿಸರದ ಬಗೆಗೆ ಭಾವುಕ ದೃಷ್ಟಿ. ಪ್ರಕೃತಿ ಎಂಬುದು 'ನಿತ್ಯ'. 'ನಿತ್ಯ ಶಕ್ತಿ'ಯಾದ ಪ್ರಕೃತಿಯನ್ನು ಮನುಷ್ಯ ಪ್ರಯತ್ನದಿಂದ ಸೃಷ್ಟಿಸಲೂ ಸಾಧ್ಯವಿಲ್ಲ ಹಾಗೆಯೇ ನಾಶಪಡಿಸಲೂ ಸಾಧ್ಯವಿಲ್ಲ ಎಂಬ ಧೋರಣೆ ಇವರದು. ಈ ಧೋರಣೆಯಿಂದಾಗಿ ಪರಿಸರ ಕಾಳಜಿಯ ಬಗೆಗೆ ವಿಷಯ ಕೇಂದ್ರೀಕರಿಸಲು ಸಾಧ್ಯವಾಗಿಲ್ಲ ಎನ್ನಿಸುತ್ತದೆ. ತೇಜಸ್ವಿ ಮುಖ್ಯವಾಗುವುದು ಈ ಕಾರಣದಿಂದಲೇ. ಕುವೆಂಪುರವರ ಸಾಹಿತ್ಯದಲ್ಲಿ ಕಾಣದ ವಿಭಿನ್ನ ಆಯಾಮ ಪಡೆದು ಕೊಳ್ಳುವುದು ತೇಜಸ್ವಿ ಅವರ ಕೃತಿಗಳಲ್ಲಿ. ತೇಜಸ್ವಿಯವರ ಪರಿಸರ ಪ್ರಜ್ಞೆ, ಪರಿಸರದೆಡೆಗೆ ಅವರ ದೃಷ್ಟಿ, ಪರಿಸರವನ್ನು ಪರಿಭಾವಿಸುವ ರೀತಿ ಕನ್ನಡ ಸಾಹಿತ್ಯದಲ್ಲೇ ವಿಭಿನ್ನ ಚಿಂತನೆಗಳ ಫಲಿತಗಳನ್ನು ಹೊರಹೊಮ್ಮಿಸುತ್ತವೆ. ಕುವೆಂಪು ಅವರಿಗೆ ಪ್ರಕೃತಿಯೇ ಪರಮನ

ಆವಾಸಸ್ಥಾನವಾದರೆ, ತೇಜಸ್ವಿ ಅವರಿಗೆ ಅದು 'ಬದುಕಿನ ಜೀವಂತಸೆಲೆ'. ಅಲ್ಲದೆ, ವಿನಾಶದ ಅಂಚಿನಲ್ಲಿರುವ ಪರಿಸರದ ಬಗೆಗಿನ ಆತಂಕ, ಕಳವಳ ಇವರ ಸಾಹಿತ್ಯದುದ್ದಕ್ಕೂ ಪ್ರಧಾನವಾಗಿ ಕಂಡು ಬರುತ್ತದೆ.

ತೇಜಸ್ವಿಯವರು ತಂದೆಯವರಿಂದಲೇ ಪರಿಸರದ ಬಗೆಗೆ ಆಸಕ್ತಿ ಹಾಗೂ ಪ್ರೇರಣೆ ಪಡೆದರು ಎಂಬುದನ್ನು ಈ ಹಿಂದೆಯೇ ಚರ್ಚಿಸಲಾಗಿದೆ. ಸಮಾಜವನ್ನು ಒಳಗೊಂಡಂತೆ ಒಟ್ಟಾರೆ ಜೈವಿಕವಾದ ಪರಿಸರವನ್ನು ಸೂಕ್ಷ್ಮವಾಗಿ ಗಮನಿಸುವ, ಪ್ರಶ್ನಿಸುವ ಮತ್ತು ಅಚ್ಚರಿ ಪಡುವ ಮನೋಭಾವವನ್ನು ಹುಟ್ಟು ಹಾಕಿದರು. ಪ್ರಕೃತಿಯ ಸಂಕೀರ್ಣತೆಯನ್ನು ತೇಜಸ್ವಿಯವರಷ್ಟು ಅರ್ಥಪೂರ್ಣವಾಗಿ ಅನಾವರಣಗೊಳಿಸಿದವರನ್ನು ಕನ್ನಡ ಸಾಹಿತ್ಯದಲ್ಲಿ ಕಾಣಲು ಸಾಧ್ಯವಿಲ್ಲ. ತಾವು ಜೀವಿಸುವ ಪರಿಸರದೊಂದಿಗೆ ಜೀವಂತವಾಗಿ ಮಿಡಿಯುವ 'ಪರಿಸರ ಚಿಂತನೆ' ಇವರ ಸಾಹಿತ್ಯದಲ್ಲಿ ವ್ಯಕ್ತವಾಗುತ್ತದೆ. ಕುವೆಂಪುರವರ ಪರಿಸರದ ದೃಷ್ಟಿಕೋನ ಹಾಗೂ ಅವರ ಸಾಹಿತ್ಯ ಕೃತಿಗಳಲ್ಲಿ ಮೂಡಿಬಂದಿರುವುದಕ್ಕೆ ಭಿನ್ನವಾದ ಆಯಾಮದಿಂದ ತೇಜಸ್ವಿಯವರ 'ಪರಿಸರ ಪ್ರಜ್ಞೆ' ಅರಳುತ್ತದೆ. ಪರಿಸರ ಪ್ರಜ್ಞೆಯುಳ್ಳ ಸಾಹಿತಿಯೊಬ್ಬ ಕೇವಲ ಮನರಂಜನೆಗೋಸ್ಕರ, ಕತೆ-ಕಾದಂಬರಿಗಳಲ್ಲಿ 'ಪರಿಸರ ಚಿತ್ರಣ' ತರುವುದಿಲ್ಲ.



ಓದಿದ್ದು ಬುದ್ಧಿಗತವಾಗಿ ಸಾರ್ವಜನಿಕ ಅಭಿಪ್ರಾಯ ರೂಪಿಸುವುದಕ್ಕೆ, ಸಮಾಜದ ಬಗೆಗೆ, ಪರಿಸರದ ಬಗೆಗೆ ಒಳಿತು-ಕೆಡಕುಗಳನ್ನು ಚಿಂತನ-ಮಂಥನ ನಡೆಸುವಂತಾಗಬೇಕು. ಆಗ ಮಾತ್ರ 'ಪ್ರಜ್ಞೆ' ಎಂಬುದು ಹೆಚ್ಚು ಅರ್ಥಪೂರ್ಣವೆನಿಸುತ್ತದೆ. ಪರಿಸರ ಉಳಿವಿಗಾಗಿ, ಸಸ್ಯ ಸಂಕುಲ, ಪ್ರಾಣಿ ಸಂಕುಲಗಳ ಉಳಿವಿಗಾಗಿ ತಾನು ಕೆಲಸ ಮಾಡಬೇಕು. ತನ್ನಲ್ಲಿರುವ ವಿಶೇಷ ಶಕ್ತಿಯನ್ನು ನಿಸರ್ಗದ ಒಳಿತಿಗಾಗಿ ಆ ಮೂಲಕ ಮನುಕುಲದ ಉಳಿವಿಗಾಗಿ ಎಂದು ತಿಳಿಯುವುದೇ ಪರಿಸರ ಪ್ರಜ್ಞೆ. ತೇಜಸ್ವಿಯವರ ಕತೆಗಳು ಕಾದಂಬರಿಗಳಲ್ಲಿ ಈ ಧೋರಣೆ, ತತ್ವ, ಜಿಜ್ಞಾಸೆಗಳನ್ನು ಗುರುತಿಸಬಹುದು.

"ನಾನು ಮಲೆನಾಡಿನ ಮೂಡಿಗೆರೆಯಲ್ಲಿ ಕಾಡು ತೆಗೆದುಕೊಂಡು ಕಾಫಿತೋಟ ಮಾಡಲು ನಿರ್ಧರಿಸಿದ್ದು ವಾಸ್ತವವಾಗಿ ಕಾಫಿ ತೋಟದ ಲಾಭಕ್ಕಾಗಲೀ ಹಳ್ಳಿಗೆ ಹಿಂದಿರುಗುವ ಆದರ್ಶಕ್ಕಾಗಲೀ, ವ್ಯವಸಾಯದ ಮೇಲಿನ ಪ್ರೀತಿಯಿಂದಾಗಲೀ ಖಂಡಿತ ಅಲ್ಲ. ಯಾರ ಹಂಗು, ಭಯ, ಬಯ್ಯುಳಗಳ ಕಾರಣ,

ಸುಮ್ಮನೆ ಕೋವಿ ಹೆಗಲಿಗೇರಿಸಿಕೊಂಡು ಕಿವಿ ಜೊತೆ ಕಾಡೊಳಗೆ ಅಲೆಯುತ್ತಾ ಸಾಯಂಕಾಲಕ್ಕೆ ಮೈ ಕೈ ತರಚಿಕೊಂಡು ಮುಳ್ಳು ಚುಚ್ಚಿಸಿಕೊಂಡು ಸುಸ್ತಾಗಿ ಹಿಂದಿರುಗುವುದು. ಯಾವ ತರದ ಸಂತೋಷವೋ ಇಂದಿಗೂ ನನಗೂ ಅರ್ಥವಾಗುತ್ತಿಲ್ಲ! ಬಹುಶಃ ಇತರರಿಗೂ ಅರ್ಥಮಾಡಿಸಲಾರೆ" (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ ೨೦೦೭, ಪುಟ ೪೮) ಎಂಬ ತೇಜಸ್ವಿಯವರ ಮಾತುಗಳಲ್ಲಿ ಕಾಡಿನ ಬಗ್ಗೆ, ಪರಿಸರದ ಮಧ್ಯೆ ಸುಮ್ಮನೆ ಅಂಡಲೆಯುವುದರಲ್ಲಿನ ಅವ್ಯಕ್ತ ಆನಂದ ವ್ಯಕ್ತವಾಗುತ್ತದೆ. ಇದು ಕುವೆಂಪುರವರ ನಿಸರ್ಗದೊಡಗಿನ ಒಡನಾಟಕ್ಕಿಂತಲೂ ಭಿನ್ನವಾದ ಅಂಶವಾಗಿದೆ.

ಈ ವೈದೃಶ್ಯಕ್ಕೆ ಪ್ರಮುಖ ಕಾರಣ, ತೇಜಸ್ವಿಗೆ ಪರಿಸರ ಎಂದರೆ ನಿಗೂಢ. ಬೆದಕಿದಷ್ಟು ಕಗ್ಗಂಟಾಗಿರುವ ರಹಸ್ಯ, ವಿಸ್ಮಯ. ಆದ್ದರಿಂದಲೇ ಇವರ ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿಕ್ರಾಸ್, ನಿಗೂಢ ಮನುಷ್ಯರು ಕೃತಿಗಳಲ್ಲಿ ಪರಿಸರ ಬಗೆಗೆ ಒಂದು ರೀತಿಯ ದಿಙ್ಮೂಢತೆಯನ್ನು ಅನುಭವಿಸುತ್ತಾರೆ. ಜೈವಿಕ ಅಚ್ಚರಿಗಳನ್ನು ವಿಸ್ಮಯದಿಂದ ನೋಡುತ್ತಾ ತಾತ್ವಿಕ ಜಿಜ್ಞಾಸೆಗೆ ಒಳಗಾಗುತ್ತಾರೆ. ಈ ಕೃತಿಗಳಲ್ಲಿ ಪರಿಸರ–ಮನುಷ್ಯ ಹಾಗೂ ಮನುಷ್ಯ–ಮನುಷ್ಯರ ನಡುವಣ ಸಂಬಂಧದ ನಿಗೂಢತೆಯನ್ನು ಶೋಧಿಸಹೊರಡುತ್ತಾರೆ. ಸಾಮಾನ್ಯವಾದ ಮಂದಣ್ಣನೂ ಅವರ ದೃಷ್ಟಿಯಲ್ಲಿ ಅದ್ಭುತ ಪ್ರಕೃತಿಶಾಸ್ತ್ರಜ್ಞ, 'ಹುಟ್ಟುನ್ಯಾಚುರಲಿಸ್ಟ್' ಎಂದೇ ಗುರುತಿಸಲ್ಪಡುತ್ತಾನೆ.

"ಮಂದಣ್ಣ ಒಂದು ಸಾರಿ ಜೇನುಪೆಟ್ಟಿಗೆ ಕ್ಲೀನ್ ಮಾಡುತ್ತಿರಬೇಕಾದರೆ ಈ ಗ್ಲೋವರ್ಮ್ ನೋಡಿದನಂತೆ ಇದು ಬೆಳಕು ಬಿಟ್ಟುಕೊಂಡು ಪೆಟ್ಟಿಗೆಯೊಳಗೆ ಓಡಾಡ್ತಿತ್ತಂತೆ. ಕೊನೆಗೆ ಅದರ ಚಲನ ವಲನಗಳನ್ನು ಅಭ್ಯಾಸ ಮಾಡಿ ಅದು ಶಂಖದ ಹುಳು ತಿನ್ನುತ್ತದೆಂದು ಪತ್ತೆ ಮಾಡಿದನಂತೆ. ಹೋದ ವರ್ಷ ಮಳೆಗಾಲ ಮುಗಿದಿದ್ದರಿಂದ ಅದು ಸಿಕ್ಕಲಿಲ್ಲ. ಈ ವರ್ಷ ಹಿಡಿದೆವು.... ಮಂದಣ್ಣನೊಬ್ಬನನ್ನು ಬಿಟ್ಟರೆ ಇಲ್ಲಿ ಬಹುಶಃ ಯಾರಿಗೂ ಇವೆಲ್ಲಾ ಗೊತ್ತೇ ಇಲ್ಲ". (ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೯, ಪುಟ ೩೧)

ಕರ್ವಾಲೋ ಕಾದಂಬರಿಯಲ್ಲಿ ಜೇನುಹುಳುಗಳಿಗೆ ತೊಂದರೆ ಕೊಡುವ 'ಶಂಕುಹುಳುವಿನ ಅನ್ವೇಷಣೆ' ಸಂದರ್ಭದಲ್ಲಿ ನಿರೂಪಕರಿಗೆ ಕರ್ವಾಲೋ ಹೇಳುವ

ಈ ಮಾತುಗಳು. ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸುವವರಿಗೆ ಅದು ನಿಗೂಢಗಳ ಅಚ್ಚರಿಗಳ ಅಕ್ಷಯ ನಿಧಿ ಎಂಬುದನ್ನು ಧ್ವನಿಸುತ್ತದೆ.

"ಗೊತ್ತಾಗುತ್ತೆ ಗೊತ್ತಾಗುತ್ತೆ. ಸ್ವಲ್ಪ ನಿಧಾನ ಅಷ್ಟೆ. ಕಣ್ಣು ಬಿಟ್ಟುನೋಡೋದನ್ನ ಕಲಿಬೇಕು ನಾವು ಎಂದರು. ನಾನು ಇದು ಸತ್ಯವೋ ಏನೋ ಎಂದು ಯೋಚಿಸಿದೆ. ಕಡ್ಡಿಯಲ್ಲಿ ಮುಟ್ಟಿದ ಕೂಡಲೇ ಹುಳು ಝುಣ್ ಎಂದು ದೀಪ ಹತ್ತಿಸಿಕೊಂಡುದನ್ನು ನೋಡಿದ ಮೇಲೆ ನನಗೂ ಕೊಂಚ ಕುತೂಹಲ ಮೂಡಿತ್ತು. ನನಗೆ ಗೊತ್ತಿಲ್ಲದ ಅಗೋಚರ ಆಶ್ಚರ್ಯಗಳು ಇನ್ನೆಷ್ಟಿವೆಯೋ ಎಂದು ಯೋಚಿಸುತ್ತಿದ್ದೆ." (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೯, ಪುಟ ೩೩)

ತೇಜಸ್ವಿ ಕತೆ ಕಾದಂಬರಿಗಳಲ್ಲಿನ ಪಾತ್ರಗಳು ಪರಿಸರದ ಅಚ್ಚರಿ, ವಿಸ್ಮಯಗಳಿಗೆ ಬೆರಗಾಗಿ ಸುಮ್ಮನಾಗುವುದಿಲ್ಲ ಆ ರಹಸ್ಯವನ್ನು ಬೆದಕಿ, ಕೆದಕಿ ನೋಡುತ್ತವೆ. ಅಲ್ಲದೆ ಈ ಪಾತ್ರಗಳಲ್ಲಿ ವ್ಯಕ್ತವಾಗುವ ಪರಿಸರ ಪ್ರಜ್ಞೆ ಮುಖ್ಯವಾದುದು.

"ಒಂದು ಸಸ್ಯ ಅವನತಿ ಹಾದಿ ಹಿಡೀತನ್ನಿ ಅದರಿಂದ ಬದುಕುತ್ತಿರುವ ಕೀಟಸ್ತೋಮ, ಅವುಗಳನ್ನೇ ಆಹಾರ ಮಾಡಿಕೊಂಡಿದ್ದ ಪಕ್ಷಿಗಳು, ಅವುಗಳಿಂದಲೇ ಬೀಜ ಪ್ರಸರಣವಾಗುತ್ತಿದ್ದ ವೃಕ್ಷ ಸಂಕುಲ, ಅದರ ಆಧಾರದ ಮೇಲೆ ಹೆಪ್ಪುಗಟ್ಟಿ ಮಳೆ ಸುರಿಸುವ ಮೋಡ ಮತ್ತು ಇವುಗಳೆಲ್ಲದರ ಆಧಾರದ ಮೇಲೆ ಬದುಕೋ ಮನುಷ್ಯ. ಇಡೀ ವಿಶ್ವ ಈ ತರ ಒಂದಕ್ಕೊಂದಕ್ಕೆ ಬಿಗಿದುಕೊಂಡಿರೋ ಸಮತೋಲನದಲ್ಲಿ ನಿಂತಿರೋ ಬಲೆ. ಈ ರುದ್ರನಾಟಕದ ತೀರ್ಮಾನ ಆಗಿದ್ದು, ಎಲ್ಲೋ ಯಾರಿಗೆ ಗೊತ್ತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೯, ಪುಟ ೫೪)

ಈ ವಾಕ್ಯಗಳನ್ನು ವಿಶ್ಲೇಷಿಸಿದರೆ, ನಮಗೆ ಪರಿಸರ ವಿಜ್ಞಾನದ ಬಗ್ಗೆ ಅಗತ್ಯ ಮಾಹಿತಿಯನ್ನು ಬಹಳ ಕುತೂಹಲವಾಗಿ ತಿಳಿಯುವಂತೆ ಮಾಡುತ್ತದೆ. ಪರಿಸರದ ಅಸಮತೋಲನದಿಂದ ಜಗತ್ತಿಗೇ ಉಂಟಾಗುತ್ತಿರುವ ಕೆಡಕನ್ನು ಬಹಳ ಸೂಚ್ಯವಾಗಿ ಹೇಳಲಾಗಿದೆ ಅಲ್ಲದೇ ವಿಶ್ವಸೃಷ್ಟಿಯ ರಹಸ್ಯ, ಅದರ ಒಟ್ಟಾರೆ ಪ್ರಕ್ರಿಯೆಯ ಬಗೆಗಿನ ತಾತ್ವಿಕ ನೋಟ ಕಾಣಸಿಗುತ್ತದೆ. ಚಿಂತನ-ಮಂಥನ ಕಾಣುತ್ತದೆ.

ತೇಜಸ್ವಿಯವರ 'ಮಾಯಾಲೋಕ'ದಲ್ಲಿರುವ ಒಂದು ಸನ್ನಿವೇಶವನ್ನು ಗಮನಿಸುವುದು ಅವಶ್ಯ. ನಿರೂಪಕ ತಮ್ಮ ಮನೆಯ ದಾರಿಯಲ್ಲಿ ಹಾಕಿದ್ದ ದಾಸವಾಳದ ಹೂಗಳನ್ನು ಯಾರೋ ದಿನವೂ ಕಿತ್ತು ಕೆಳಗೆ ಹಾಕುತ್ತಿದ್ದಾರೆ. ಅದನ್ನು ಕಂಡು ಹಿಡಿದು ರಹಸ್ಯ ಭೇದಿಸಬೇಕೆಂದು ನಿರ್ಧರಿಸುತ್ತಾರೆ.

"ಇದು ಯಾವುದೋ ಹುಳದ ಕೆಲಸವೇ ಸರಿ ಎಂದು ತೀರ್ಮಾನಿಸಿ ದಾಸವಾಳದ ಗಿಡಗಳನ್ನು ಅಡಿಯಿಂದ ಮುಡಿಯವರೆಗೆ ಪರೀಕ್ಷಿಸಿದೆ. ಯಾವ ಹುಳುವೂ ಕಾಣಲಿಲ್ಲ. ಕೊಂಚ ಹೊತ್ತು ಕಾಫಿಗಿಡಗಳ ಮರೆಯಲ್ಲಿ ಅಲ್ಲಾಡದೆ ಅಡಗಿ ನೋಡೋಣವೆಂದು ಗಿಡದ ಅಡಿಯಲ್ಲಿ ಸ್ತಬ್ಧವಾಗಿ ಕುಳಿತು ನೋಡುತ್ತಾ ಇದ್ದೆ....

ದೂರದ ದಾಸವಾಳದ ಗಿಡದಿಂದ ಒಂದು ಹೂ ಕೆಳಕ್ಕೆ ಬೀಳುತ್ತಾ ಇರುವುದು ಕಾಣಿಸಿತು. ಯಾವುದೇ ಹುಳವೂ ಕಾಣಲಿಲ್ಲ. ದಾಸವಾಳಕ್ಕೆ ಅರಳಿದ ದಳಗಳಿದ್ದುದರಿಂದ ಗಾಳಿಯಲ್ಲಿ ಬೀಳುವಾಗ ಗಿರಗಿಟ್ಲೆಯಂತೆ ಗಿರಿಗಿರಿ ತಿರುಗುತ್ತಾ ನೆಲಕ್ಕೆ ಇಳಿಯಿತು. ನಾನು ಉಸಿರು ಬಿಗಿ ಹಿಡಿದು ಆ ಗಿಡವನ್ನು ದೃಷ್ಟಿಸಿದೆ. ಏನೋ ಕೆಂಪು ಬಣ್ಣ ಎಲೆಗಳ ನಡುವೆ ಅಲ್ಲಾಡಿದಂತಾಯತ್ತು. ಅನಂತರ ಒಂದು ಪುಟ್ಟ ಸೌಮ್ಯ ಮುಖ ಎಲೆಗಳ ನಡುವಿಂದ ಈಚೆಗೆ ಹಣಕಿತು.

ಅದೊಂದು ಗಿಳಿಗಳಲ್ಲೇ ಅತ್ಯಂತ ಚಿಕ್ಕದಾದ ಚಿಟ್ಟುಗಿಳಿ. ಎಲೆಗಳ ನಡುವೆ ಅದರ ಜಾಲದಲ್ಲಿದ್ದ ಕೆಂಪು ಮಚ್ಚೆ ಕಾಣದಿದ್ದರೆ ಅದನ್ನು ಗುರುತಿಸುವುದು ಸಾಧ್ಯವೇ ಇರಲಿಲ್ಲ. ದಾಸವಾಳದ ಹೂಗಳನ್ನು ಮೊಗ್ಗುಗಳನ್ನು ಕಿತ್ತು ಅವುಗಳ ತೊಟ್ಟಿನ ಬಳಿ ಇರುವ ಮಕರಂದವನ್ನು ನೆಕ್ಕಿ ಹೂವನ್ನು ಕೆಳಗೆ ಹಾಕುವುದೇ ಅದು ಮಾಡುತ್ತಿದ್ದ ಕೆಲಸ. ಈ ಗಿಡದಲ್ಲಿ ಇನ್ನೂ ಮೂರು ಗಿಳಿಗಳು ಕುಳಿತುಕೊಂಡು ಹೂವುಗಳನ್ನು, ಬೆಳೆದ ಮೊಗ್ಗುಗಳನ್ನು ಕಿತ್ತು ಕಿತ್ತು ಕೆಳಗೆ ಹಾಕುತ್ತಿದ್ದವು. ಈ ವರ್ಷ ಬಿರುಬೇಸಗೆಯ ದೆಸೆಯಿಂದ ಅದಕ್ಕೆ ಎಲ್ಲೂ ಆಹಾರ ಸಿಕ್ಕದೆ. ದಾಸವಾಳ ಹೂವಿಗೆ ಬರುತ್ತಿರಬಹುದು ಎಂದು ಊಹಿಸಿದೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ.. ಮಾಯಾಲೋಕ – ೧. ೨೦೦೮. ಪುಟ ೮೫)

ತೇಜಸ್ವಿಯವರು ಪರಿಸರದ ವೈಚಿತ್ರಗಳಿಗೆ ಅಚ್ಚರಿ ವ್ಯಕ್ತಪಡಿಸುವುದಷ್ಟೇ ಅಲ್ಲ. ಈ ಅಚ್ಚರಿಯನ್ನೂ ಅದರ ಹಿಂದಿನ ನಿಗೂಢತೆಯನ್ನೂ ಭೇದಿಸುವವರೆಗೂ ಅವರು ಸುಮ್ಮನಾಗುವುದಿಲ್ಲ. ಎಂಬುದು ಈ ಮೇಲಿನ ಸನ್ನಿವೇಶವನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ. ಚಿಟ್ಟುಗಿಳಿಗಳೇ ದಾಸವಾಳದ ಹೂ

ಚೀಳಿಸುತ್ತಿವೆ ಎಂಬ ಸತ್ಯ ಅವರಿಗೆ ತಿಳಿದ ಮೇಲೂ ಅದಕ್ಕೆ ಕಾರಣಗಳನ್ನು ಚಿಂತಿಸುವುದು ವ್ಯಕ್ತವಾಗಿದೆ. ಅಲ್ಲದೆ ಚಿಟ್ಟು ಗಿಳಿಯ ಗಾತ್ರ, ವಿನ್ಯಾಸವನ್ನು ಓದುಗರಿಗೆ ತಿಳಿಸುತ್ತಾರೆ. ಇವರ ಬಹುತೇಕ ಕಥನ ಸಾಹಿತ್ಯದಲ್ಲಿರುವ ಮಾಹಿತಿ ಆಧಾರಿತ ಅಂಶಕ್ಕೆ ಇದು ನಿದರ್ಶನವಾಗಿದೆ. ಅಲ್ಲದೇ ಬಿರುಬೇಸಗೆಯ ಸಂದರ್ಭದಲ್ಲಿ ಆಹಾರ ಸಿಗದ ಪ್ರಾಣಿ-ಪಕ್ಷಿಗಳ ಬಗೆಗಿನ ಕಾಳಜಿ, ಅವು ಪರ್ಯಾಯ ಆಹಾರ ಹುಡುಕಿಕೊಳ್ಳುವ ಬಗೆಗಿನ ಅಚ್ಚರಿ ವ್ಯಕ್ತವಾಗಿದೆ. ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ನಮಗೆ ಇಂತಹ ಎಷ್ಟೋ ವಿಚಾರಗಳು ದೊರೆಯುತ್ತವೆ ಎಂಬ ಪ್ರಜ್ಞೆಯನ್ನು ಇಲ್ಲಿ ಗಮನಿಸಬಹುದು.

ಪ್ರಕೃತಿ ನಮ್ಮ ಊಹೆಗೂ ನಿಲುಕದ ಎಂಥ ಜಟಿಲವಾದ ಜಾಲ ಎಂದು ತೇಜಸ್ವಿ ಅಚ್ಚರಿ ಪಡುತ್ತಾರೆ. ಪರಿಸರದ ಕತೆಯಲ್ಲಿ 'ಸುಸ್ಮಿತ ಮತ್ತು ಹಕ್ಕಿಮರಿ' ಕತೆಯಲ್ಲಿ ಪಿಕರಾಳ ಹಕ್ಕಿಯೊಂದು ಮೊಟ್ಟೆಗೆ ಕಾವುಕೊಡುತ್ತಿದ್ದು, ಈ ತಾಯಿಹಕ್ಕಿ ಇತರ ಪ್ರಬಲ ಪ್ರಾಣಿಯೊಂದರ ದಾಳಿಗೆ ಸಿಕ್ಕಿ, ಸತ್ತು ಹೋಗಿರುತ್ತದೆ. ಆ ಮೊಟ್ಟೆಗಳನ್ನು ಮನೆಗೆ ತಂದು ಬಲ್ಬಿನ ಶಾಖದಲ್ಲಿ ಮರಿಮಾಡಿಸಿ, ಅವುಗಳ ಪಾಲನೆ - ಪೋಷಣೆಗೆ ಪರಿಪಾಟಲು ಮಾಡುವ ಸನ್ನಿವೇಶ ನಿಜಕ್ಕೂ ಅಚ್ಚರಿ ಮೂಡಿಸುತ್ತದೆ.

"ಹಕ್ಕಿಗಳಲ್ಲಿ ಅನೇಕವು ಅನೇಕ ತರದ ಆಹಾರಗಳಿಗೆ ಒಗ್ಗಿರುತ್ತವೆ. ಕೆಲವು ಹಣ್ಣುಗಳನ್ನೇ ತಿನ್ನುತ್ತವೆ. ಕೆಲವು ಕೀಟಗಳನ್ನೇ ತಿನ್ನುತ್ತವೆ. ಕೆಲವು ಭತ್ತ, ಗೋಧಿ, ಇತ್ಯಾದಿ ಗಟ್ಟಿಕಾಳುಗಳನ್ನೇ ತಿನ್ನುತ್ತವೆ. ಕೆಲವು ಹೂವಿನ ಜೇನನ್ನೇ ಕುಡಿದು ಬದುಕುತ್ತವೆ. ಈ ಹಕ್ಕಿಗಳೆಲ್ಲ ಎಷ್ಟೊಂದು ಮಿಲಿಯಾಂತರ ವರ್ಷದಿಂದ ಆಯಾ ರೀತಿಯ ವಿಶಿಷ್ಟ ಆಹಾರಕ್ಕೆ ಒಗ್ಗಿರುತ್ತವೆಂದರೆ ನಾಲಿಗೆಯಿಂದ ಹಿಡಿದು ಕರುಳಿನವರೆಗೆ ಅವುಗಳ ಅಂಗಾಗಗಳೆಲ್ಲ ಅದಕ್ಕಾಗಿ ರೂಪಾಂತರ ಗೊಂಡಿರುತ್ತವೆ. ಒಂದರ ಆಹಾರವನ್ನು ಇನ್ನೊಂದು ತಿನ್ನುವುದೇ ಇಲ್ಲ, ತಿಂದರೇ ಸತ್ತೆ ಹೋಗುತ್ತವೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೪೪) ಎಂಬ ಅಂಶ ಗೊತ್ತಿದ್ದರೂ ಕೂಡ ಮಗಳ ಒತ್ತಾಸೆಗೆ ಮಣಿದು ಎರಡು ಹಕ್ಕಿಮರಿಗಳ ಜೀವ ಉಳಿಸಿ ಸಂಪೂರ್ಣ ಇನ್ನೊಬ್ಬರನೇ ಅವಲಂಬಿಸಿ ಬದುಕಬೇಕಾದ ಎರಡು ಪರತಂತ್ರ ಜೀವಿಗಳ ನಿರ್ಮಾಣಕ್ಕೆ ಕಾರಣರಾದ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾರೆ.

"ತಾಯಿ ಹಕ್ಕಿ ಮರಿ ಹುಟ್ಟಿದಾಗಿನಿಂದ ದೊಡ್ಡದಾಗುವವರೆಗೆ ದಿನದಿಂದ ದಿನಕ್ಕೆ ಆಹಾರ ಬದಲಿಸುತ್ತಾ ಬರುತ್ತದೆ. ರೆಕ್ಕೆ ಬಲಿತ ಮೇಲೆ ಗೂಡುಬಿಟ್ಟು

ಹೊರಬರುವಂತೆ ಪ್ರೇರೇಪಿಸುತ್ತವೆ. ಅವುಗಳೆದುರು ಕುಳಿತು ರೆಕ್ಕೆ ಬಡಿದು ಹೇಗೆ ಹಾರಬೇಕೆಂದು ತೋರಿಸಿಕೊಡುತ್ತದೆ. ಹೇಗೆ ಹುಳುಗಳನ್ನು ಹಿಡಿಯಬೇಕು, ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಬಾರದು. ಪ್ರತಿಯೊಂದನ್ನು ತೋರಿಸಿಕೊಡುತ್ತದೆ. ಈ ವಿದ್ಯೆಗಳಲ್ಲಿ ಯಾವುದನ್ನು ತಿಳಿದಿಲ್ಲದಿದ್ದರೂ, ಆ ಹಕ್ಕಿಮರಿ ಜೀವನ ಸಂಗ್ರಾಮದಲ್ಲಿ ಬದುಕಿ ಉಳಿಯುವುದು ಅಸಂಭವ. ನಮಗೆ ಮೇಲು ನೋಟಕ್ಕೆ ಎಲ್ಲ ಸಲೀಸಾಗಿ ತಂತಾನೇ ನಡೆದುಕೊಂಡು ಹೋಗುವಂತೆ ತೋರಿದರೂ ಮಾನವ ಸಮಾಜವನ್ನು ಮೀರಿದ ಜಟಿಲ ಕ್ರಿಯಾವಳಿಗಳು ಅಲ್ಲಿ ನಡೆಯುತ್ತಿರುತ್ತದೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೪೫)

ಪಕ್ಷಿಗಳ ಬಗೆಗಿನ ಈ ಸೂಕ್ಷ್ಮ ಅವಲೋಕನ, ಕಾಳಜಿಯನ್ನು ನೋಡಿದಾಗ ತೇಜಸ್ವಿ ಒಬ್ಬರು ಪಕ್ಷಿತಜ್ಞರೇನೋ ಎನಿಸುತ್ತದೆ. ಸಾಕಲು ಪ್ರಯತ್ನಿಸಿದ ಪಿಕರಾಳದ ಮರಿಗಳು ಸತ್ತುಹೋದಾಗ, ಕಾಡಿನ ಜೀವಿಗಳ ತಂಟೆಗೇ ಹೋಗಬಾರದೆಂದು ನಿರ್ಧರಿಸುತ್ತಾರೆ. ಕಾಡಿನ ಜೀವ ಸಂಕುಲದೊಳಗೆ ನಾವು ಕೈ ಹಾಕಿದರೆ ಸಾಕು, ಅದು ಸಹಾಯ ಹಸ್ತವಾದರೂ ಅವುಗಳ ನಾಶ ತಪ್ಪಿದಲ್ಲವೆಂದು ಮನದಟ್ಟು ಮಾಡಿಕೊಳ್ಳುತ್ತಾರೆ. ತಬ್ಬಲಿಗಳಾದರೂ ಅವುಗಳನ್ನು ರಕ್ಷಿಸುವುದು, ನಮ್ಮ ನೈತಿಕ ಜವಾಬ್ದಾರಿ ಎಂದು ಭಾವಿಸುವುದು ಖಂಡಿತಾ ಮೂರ್ಖತನ. ಏಕೆಂದರೆ ಪ್ರಕೃತಿ ಜೀವನ ಜಾಲದಲ್ಲಿ ಅದರ ಆಹಾರ-ವಿಹಾರ, ಜೀವನ ವೈಖರಿ ಅಡಗಿರುತ್ತದೆ. ಈ ಪ್ರಕೃತಿಗೆ ವಿರುದ್ಧವಾಗಿ ಹೋರಾಟ ಮಾಡುವುದು ಮನುಷ್ಯನ ಅಸಹಾಯಕತೆ ಎಂಬುದು ಈ ಮೇಲಿನ ಅಂಶದಲ್ಲಿ ಧ್ವನಿತವಾಗುತ್ತದೆ. ಅಲ್ಲದೆ, ಮನುಷ್ಯ ಎಷ್ಟೇ ಆಧುನಿಕತೆ, ತಂತ್ರಜ್ಞಾನಗಳನ್ನು ಬಲ್ಲವನಾಗಿದ್ದರೂ, ಜೀರ್ಣಿಸಿಕೊಳ್ಳ ಬಲ್ಲವನಾಗಿದ್ದರೂ ಪ್ರಕೃತಿಯ ವೈಚಿತ್ರವನ್ನು ಅರ್ಥ ಮಾಡಿಕೊಳ್ಳುವುದು ಅಸಾಧ್ಯ. ಪ್ರಕೃತಿಯ ಎದುರು 'ಮನುಷ್ಯ' ಮತ್ತು 'ಮನುಷ್ಯಪ್ರಯತ್ನ' ಎರಡೂ ವ್ಯರ್ಥ ಎಂಬುದನ್ನು ತೇಜಸ್ವಿಯವರ ಬರಹಗಳಲ್ಲಿ ಕಾಣಬಹುದು.

ಪ್ರಕೃತಿಯು ಪ್ರಾಣಿ ಪಕ್ಷಿಗಳಿಗೆ ಕರುಣಿಸಿರುವ ವಿಶೇಷ ಶಕ್ತಿ-ಸಾಮರ್ಥ್ಯಗಳ ಬಗೆಗೂ ತೇಜಸ್ವಿ ಅಚ್ಚರಿ ವ್ಯಕ್ತ ಪಡಿಸುತ್ತಾರೆ. ನಿಸರ್ಗ ಪ್ರಾಣಿ-ಪಕ್ಷಿಗಳಿಗೆ ನಮಗೆ ತಿಳಿಯದ ಎಷ್ಟೋ ವಿಶೇಷಗುಣಗಳನ್ನು ನೀಡಿರುತ್ತದೆ. ಅವುಗಳನ್ನು ತಿಳಿಯಬೇಕೆಂದರೆ ಸೂಕ್ಷ್ಮಬುದ್ಧಿ ಹಾಗೂ ತೀಕ್ಷ್ಣಚಕ್ಷುವಿನ ಅಗತ್ಯವಿದೆ ಹಾಗೂ ಕಾರ್ಯಕಾರಣವನ್ನು ವಿವೇಚಿಸುವ ಬುದ್ಧಿಮತ್ತೆ ಅವಶ್ಯಕ. ಈ ಅಂಶವನ್ನು ತಿಳಿಸುವ ಒಂದೆರಡು ಸನ್ನಿವೇಶಗಳನ್ನು ಇಲ್ಲಿ ಅವಲೋಕಿಸಲಾಗಿದೆ.

ಮಾರನು ಕೋಳಿಬೇಟೆಗೆ ಹೋದಾಗ ಅದು ವಿಚಿತ್ರವಾಗಿ ವರ್ತಿಸಿರುವ ಬಗೆ ಲೇಖಕರಲ್ಲಿ ಹೇಳಿದಾಗ, ಅದಕ್ಕೆ ಕಾರಣಗಳನ್ನು ಹುಡುಕುವ ಪರಿ ನಿಜಕ್ಕೂ ಸೊಗಸಾಗಿದೆ. ಲೇಖಕರು ಈ ಕಾಡುಕೋಳಿ ಹುಚ್ಚುಬಂದಂತೆ ವರ್ತಿಸುವುದನ್ನು ಕಣ್ಣಾರೆ ಕಂಡು ಅಚ್ಚರಿ ವ್ಯಕ್ತಪಡಿಸುತ್ತಾರೆ.

"ಕಾಡು ಪ್ರಾಣಿಗಳಲ್ಲಿ ಮನೋವಿಕಲತೆ, ಹುಚ್ಚು ಅಪರೂಪ. ಏಕೆಂದರೆ ಈ ರೀತಿಯ ಚಿತ್ತ ವಿಕಾರಗಳಿರುವ ಯಾವುದೇ ಜೀವಿಯೂ ಕಾಡಿನಲ್ಲಿ ಬದುಕಿ ಉಳಿಯುವುದು ಅಸಾಧ್ಯ. ಕೋಳಿಯ ಈ ರೀತಿಯ ವರ್ತನೆಗೆ ಬೇರೆ ಕಾರಣವಿರಬೇಕೆಂದು ಆಳವಾಗಿ ಯೋಚಿಸಿದೆ. ಆದರೂ ಈ ವರ್ತನೆಗೆ ಅದರ ಮೊಟ್ಟೆ-ಮರಿಗಳಿಗೆ ಯಾವುದೇ ರೀತಿಯಿಂದ ಸಂಬಂಧಿಸಿರಬಹುದೆಂದು ಅಸ್ಪಷ್ಟವಾಗಿ ಅನ್ನಿಸಿತು.

ಕಾಜಾಣ ಮೊದಲಾದ ಹಕ್ಕಿಗಳು ಅದರ ಗೂಡುಗಳ ಹತ್ತಿರ ಹೋದರೆ ರೋಷಾವೇಷದಿಂದ ಬಂದು ಕೊಕ್ಕಿನಿಂದ ಕುಕ್ಕಿ ಉಗುರಿನಿಂದ ಪರಚುತ್ತದೆ. ಆ ಹಕ್ಕಿಗಳು ಎಷ್ಟೊಂದು ಆಕ್ರಮಣಶೀಲವೆಂದರೆ ಬೇರೆ ಹಕ್ಕಿಗಳು ಇದರ ಉಪಯೋಗ ಅರಿತು ಅವುಗಳ ಗೂಡುಗಳ ಪಕ್ಕದಲ್ಲಿಯೇ ತಮ್ಮ ಗೂಡುಗಳನ್ನು ಕಟ್ಟುತ್ತವೆ. ಅಲ್ಲಿ ಸುತ್ತ-ಮುತ್ತ ಯಾವುದೇ ಅಪಾಯಕಾರಿ ಪ್ರಾಣಿ ಸುಳಿದರೂ ಕಾಜಾಣ ಅವುಗಳನ್ನು ಬೆನ್ನಟ್ಟಿ ಓಡಿಸುತ್ತವೆ. ಕಾಜಾಣಗಳು ತಮ್ಮ ಗೂಡುಗಳ ಹತ್ತಿರ ಸುಳಿದ ಕಾಗೆ ಹದ್ದುಗಳನ್ನು ಮೈಲುಗಟ್ಟಲೆ ದೂರದವರೆಗೆ ಓಡಿಸಿಕೊಂಡು ಹೋಗಿದ್ದನ್ನು ನೋಡಿದ್ದೇನೆ. ಮೊಟ್ಟೆಗಳಾಗಲೀ, ಮರಿಗಳಾಗಲೀ ಇದ್ದಾಗ ಅನೇಕ ಹಕ್ಕಿಗಳು ಜೀವನ ಹಂಗು ತೊರೆದು ಹೋರಾಡುತ್ತವೆ.... ನನ್ನೆದುರಿಗೆ ಕಾಡುಕೋಳಿಯೊಂದು ನುಗ್ಗಿ ಬಂದು ಬಿದ್ದು ಉರುಳಾಡಿ ಇನ್ನೇನು ಪ್ರಾಣ ಹೋಗಲಿದೆ ಎನ್ನುವಂತೆ ಅಭಿನಯಿಸುತ್ತಾ ನನ್ನ ಗಮನ ಸೆಳೆಯಲು ಯತ್ನಿಸಿತು. ಆದರೆ ನಾನು ನಿಂತಲ್ಲೆ ನಿಂತಿದ್ದೆ, ಅದನ್ನು ಹಿಡಿಯಲು ನಾನು ಬೆನ್ನಟ್ಟಬಹುದೆಂದು ನಿರೀಕ್ಷೆಯಲ್ಲಿದ್ದ ಕೋಳಿಗೆ ಏನು ಮಾಡಬೇಕೆಂದು ತೋಚದೆ ಎದ್ದು ನಿಂತು ಅತ್ತಿತ್ತ ನೋಡಿತು. ಅನಂತರ ತೂರಾಡುವಂತೆ ನಟಿಸುತ್ತಾ ಪೊದೆಗಳೆಡೆ ಓಡಿತು. ಆಗಲೂ ನಾನು ನಿಂತಲ್ಲೇ ನಿಂತಿರುವುದನ್ನು ಕಂಡು ಮತ್ತೆ ಹಿಂದುರುಗಿ ಬಂದು ನನ್ನೆದುರು ಒಂದೆರೆಡು ಕ್ಷಣ ಬಿದ್ದು ಒದ್ದಾಡಿತು. ಈ ಸಾರಿಯಂತೂ ಈ ಕೋಳಿಯದು ಉದ್ದೇಶಪೂರ್ವಕ ನಟನೆ ಎನ್ನುವುದು ಸರ್ವಸ್ಪಷ್ಟವಾಗಿ ಗೊತ್ತಾಗುತ್ತಿತ್ತು.... ಅದು ಅಲ್ಲಿಗೆ ಬಂದ ದಿಕ್ಕಿನಲ್ಲಿ ಇದ್ದ ಪೊದೆಗಳನ್ನೆಲ್ಲಾ ಹುಡುಕಿದೆ. ಒಣಗಿದ ಈಚಲು

ಗರಿಗಳೆನ್ನೆಲ್ಲಾ ತಂದು ಒಟ್ಟು ಗೂಡು ಮಾಡಿ ಹದಿಮೂರು ಮೊಟ್ಟೆಯನ್ನಿಟ್ಟಿತ್ತು. ಆ ಕಾಡು ಕೋಳಿ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೮೪)

ನಿಜಕ್ಕೂ ಪ್ರಾಣಿ, ಪಕ್ಷಿಗಳ ತಂತ್ರ ಅಚ್ಚರಿ ಮೂಡಿಸುವಂತದ್ದು, ಅಪಾಯದ ಸನ್ನಿವೇಶದಲ್ಲಿ ಮನುಷ್ಯ ರಕ್ಷಣಾ ತಂತ್ರಗಳನ್ನು ಬಳಕೆ ಮಾಡುವುದು ಸಹಜ. ಆದರೆ ಪ್ರಾಣಿ-ಪಕ್ಷಿಗಳಿಗೂ ಇರುವ ಈ ಬಗೆಯ ಬುದ್ಧಿ-ಚಾಕಚಕ್ಯತೆ ಪ್ರಕೃತಿಯ ವಿಸ್ಮಯಕ್ಕೆ ಒಂದು ನಿದರ್ಶನ. ವಿದ್ಯಾರಣ್ಯರು ಮೊಲ ತಿರುಗಿ ಬಿದ್ದುದನ್ನು ನೋಡಿ ಗಂಡುಮೆಟ್ಟಿನ ನೆಲವೆಂದು ತೀರ್ಮಾನಿಸಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಾಡಿದ ಬಗ್ಗೆ ನೆನಪಿಸಿಕೊಳ್ಳುತ್ತಾ ಕೊಂಚ ತಾಳ್ಮೆಯಿಂದ ಹುಡುಕಿ ನೋಡಿದ್ದರೆ ಮೊಲ ತಿರುಗಿಬಿದ್ದಿದ್ದಕ್ಕೆ ಬೇರಾನಾದರೂ ಕಾರಣವಿರುವುದು ಕಂಡು ಬರುತ್ತಿದೆಂದು ತೇಜಸ್ವಿ ಅಭಿಪ್ರಾಯಪಡುತ್ತಾರೆ. ಓದುಗರಲ್ಲಿ ನಿಜಕ್ಕೂ ಇದು ಚಿಂತನೆಗೆ ಒಳಗುಮಾಡುತ್ತದೆ.

ಒಂದೊಂದು ಜೀವಿಗೆ ಒಂದೊಂದು ರೀತಿಯ ವಿಚಿತ್ರ ರಕ್ಷಣಾ ತಂತ್ರ ಇದ್ದೇ ಇರುತ್ತದೆ. ಆಮೆಗೆ ಗಟ್ಟಿಯಾಗಿ ಇರುವ ಚಿಪ್ಪು, ಕಪ್ಪೆಗಳನ್ನು ಹಿಡಿದ ತಕ್ಷಣ ಮೂತ್ರ ಹಾರಿಸುವುದು, ಇತರ ಕೆಲವು ಪ್ರಾಣಿಗಳು ಹಿಡಿದ ತಕ್ಷಣ ದುರ್ವಾಸನೆ ಬೀರುವ ದ್ರವ ಸ್ರವಿಸುವುದು ಹೀಗೆ ಇವೆಲ್ಲವೂ ಆ ಪ್ರಾಣಿಗಳಿಗೆ ಪ್ರಕೃತಿ ಕರುಣಿಸಿರುವ ರಕ್ಷಣಾ ತಂತ್ರಗಳಾಗಿವೆ. ಇವೆಲ್ಲವೂ ಪರಿಸರದಲ್ಲಿ ಸಹಜವಾಗಿರುವ ಘಟನೆಗಳಾದರೂ ಇವುಗಳನ್ನು ವೈಜ್ಞಾನಿಕವಾಗಿ ವಿಷದಪಡಿಸುವ ತೇಜಸ್ವಿಯವರ ಕಥನಗಳು ನಿಜಕ್ಕೂ ವಿಶ್ವಕೋಶದಂತೆ. ಯಾವುದೇ ವಿಚಾರಗಳನ್ನು ಕಥನ ಶೈಲಿಯಲ್ಲಿ ಹೇಳುವುದು ತೇಜಸ್ವಿಯವರ ಹೆಚ್ಚುಗಾರಿಕೆಯಾಗಿದೆ.

"ಮರಕುಟುಗನ ಹಕ್ಕಿ, ನಗಾರಿ ಹೊಡೆದಂತೆ ಒಣಗಿದ ಮರದ ಕೊಂಬೆಗೆ ಡಮ ಡಮ ಡಮ ಬಡಿದಿದ್ದು ಕೇಳಿಸಿತು. ಆ ಮರಕುಟಕನ ಹಕ್ಕಿ ಎಷ್ಟು ವೇಗವಾಗಿ ಮರವನ್ನು ಕುಟ್ಟುತ್ತಿತೆಂದರೆ, ಕುಟ್ಟಲು ಶುರುಮಾಡಿದರೆ ಅದರ ತಲೆ, ಕುತ್ತಿಗೆಗಳು ಕಣ್ಣಿಗೆ ಕಾಣುತ್ತಲೇ ಇರಲಿಲ್ಲ. ತಲೆಯನ್ನೇ ಸುತ್ತಿಗೆ ರೀತಿ ಅದು ಮರಕ್ಕೆ ಬಡಿಯಲು ಉಪಯೋಗಿಸುವದನ್ನು ನೋಡಿ ನನಗೆ ಗಾಭರಿಯಾಯ್ತು. ಮೊನ್ನೆ ಬಾಗಿಲು ದಾಟುವಾಗ ಹೊಸಲು ನನ್ನ ಹಣೆಗೆ ಮೆಲ್ಲಗೆ ತಾಗಿದ್ದಕ್ಕೆ ತಲೆಸುತ್ತಿ ಬಂದು ಕಾಲು ಗಂಟೆ ಕುಳಿತು ಸುಧಾರಿಸಿಕೊಂಡಿದ್ದೆ. ಮರಕುಟಿಗ ಹಕ್ಕಿ ಬಡ ಬಡ ಮರಕ್ಕೆ ತಲೆ ಚಚ್ಚುವುದನ್ನು ನೋಡಿ ನನಗೆ ತಲೆ ಸುತ್ತಿಬಂದಂತಾಯ್ತು. ಆ ಹಕ್ಕಿ

ತಲೆಯೊಳಗಿರುವ ಮೆದುಳಿನ ಕತೆ ಏನು? ಅಲ್ಲಿ ರಕ್ತಸ್ರಾವ ಆಗಿ ಅದು ಸಾಯದೆ ಉಳಿದಿರುವುದು ಹೇಗೆ? ಅದಿರಲಿ, ಈ ಹಕ್ಕಿ ಮರದೊಳಗಿರುವ ಹುಳುಗಳು ಇಂಥ ಕಡೆಯೇ ಇದೆ ಎಂದು ಹೇಗೆ ಪತ್ತೆ ಮಾಡಿ ತೂತು ಹೊಡೆಯುತ್ತವೆ? ಇವನ್ನೆಲ್ಲಾ ಯೋಚಿಸಿದ್ದಷ್ಟು ನನ್ನ ಸುತ್ತ-ಮುತ್ತಲ ಪರಿಸರ ರಹಸ್ಯಮಯವಾಗುತ್ತದೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೯೩)

"ಕೊಕ್ಕರೆಗಳು ನೀರಿನಲ್ಲಿ ಮೀನುಗಳನ್ನು ಹೇಗೆ ಹಿಡಿಯುತ್ತವೆ. ಎಂದು ಆಶ್ಚರ್ಯ ಆಗುತ್ತೆ. ಏಕೆಂದರೆ ಎರಡು ಕೈ ಹತ್ತು ಬೆರಳುಗಳಿರುವ ನಮಗೆ ಮೀನುಗಳನ್ನು ನೀರಿನಲ್ಲಿ ಹಿಡಿಯಲು ಸಾಧ್ಯವೇ ಇಲ್ಲ. ಅಷ್ಟೊಂದು ನುಣುಪಾದ ಮುಟ್ಟಿದರೆ ಜಾರಿ ನುಸುಳುವ ಈ ಮೀನುಗಳನ್ನು ಹಿಡಿಯಲು ಕೊಕ್ಕರೆಗೆ ಇರುವ ಆಯುಧ ಸಾಧನಗಳಾದರೂ ಏನು? ಯೋಚಿಸಿ ಕೇವಲ ಚಿಮ್ಮುಟದಂತಿರುವ ಒಂದು ಕೊಕ್ಕು ಅಷ್ಟೇ. ನಾನು ಒಂದಲ್ಲ ಹತ್ತು ಚಿಮ್ಮುಟಗಳನ್ನು ತಗೊಂಡು ನಮ್ಮ ಜೀವಮಾನವೆಲ್ಲ ಪ್ರಯತ್ನಿಸಿದರೂ ಒಂದು ಮೀನನ್ನು ಹಿಡಿಯಲಾಗುವುದಿಲ್ಲ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೯೭)

ಹೀಗೆ ಪ್ರಕೃತಿಯ ಅಚ್ಚರಿಗಳನ್ನು ರಹಸ್ಯವನ್ನು ತೇಜಸ್ವಿ ಭಿನ್ನ ಆಯಾಮಗಳಿಂದ ನೋಡುತ್ತಾರೆ. ಕಾರ್ಯ-ಕಾರಣ ಸಂಬಂಧ ಹುಡುಕುತ್ತಾರೆ. ಕೆದಕುತ್ತಾರೆ. ಕೊನೆಗೆ ಇವನ್ನೆಲ್ಲಾ ಸಂಪೂರ್ಣ ತಿಳಿಯುತ್ತೇನೆಂದು ಹೋಗುವುದು ಮೂರ್ಖತನವೇ ಸರಿ. ಸುಮ್ಮನೆ ನಮಗೆ ಅಗತ್ಯ ಇದ್ದಷ್ಟನ್ನು ಮಾತ್ರ ತಿಳಿದುಕೊಂಡು ಮಿಕ್ಕುದ್ದನ್ನು ನೋಡಿ ಅಚ್ಚರಿ ಪಡುತ್ತಾ ಇದ್ದು ಬಿಡುವುದು ಒಳ್ಳೆಯದು ಎಂಬ ತೀರ್ಮಾನಕ್ಕೆ ಬರುತ್ತಾರೆ. ಅಲ್ಲದೇ, ಓದುಗರನ್ನು ಒಂದು ರೀತಿಯ ತಾತ್ವಿಕ ಜಿಜ್ಞಾಸೆಗೆ ಒಳಗುಮಾಡುತ್ತಾರೆ.

ತೇಜಸ್ವಿ ಅವರಿಗೆ ಪರಿಸರ ಬದುಕಿನ ಜೀವಸೆಲೆ. ರಹಸ್ಯ ನಿಗೂಢಗಳು ಅಚ್ಚರಿತಾಣ. ಅವರ ಬಹುತೇಕ ಎಲ್ಲಾ ಕೃತಿಗಳು ಪರಿಸರವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತವೆ. ಅವರ 'ಹೆಜ್ಜೆಮೂಡದ ಹಾದಿ'ಯಲ್ಲಿ ಹೇಮಾವತಿ ನದಿ ನೀರಿಗೆ ಕಟ್ಟಿದ ಆ ಅಣೆಕಟ್ಟಿನ ದೆಸೆಯಿಂದ ಹೇಮಾವತಿ ನೀರಿನ ಮಡುಗಳು ಮರಳಿನಿಂದ ಹುದುಗಿ ಹೋಗಿರುವ ಸತ್ಯ ತಿಳಿದು ಸ್ವತಃ ಅಚ್ಚರಿ, ಆತಂಕ ವ್ಯಕ್ತಪಡಿಸುತ್ತಾರೆ. 'ಪ್ರಕೃತಿಗೆ ತನ್ನದೇ ಆದ ಹಾದಿಯಿರುತ್ತದೆ. ಮನುಷ್ಯ ಇದಕ್ಕೆಲ್ಲ ತಡೆ ಒಡ್ಡಿದಂತೆಲ್ಲ ಅದರ ದಿಕ್ಕು ಬದಲಾಗುತ್ತದೆ' ಎಂಬ ಸತ್ಯದ ಅರಿವು ಉಂಟಾಗುತ್ತದೆ. ಅವರೇ ಮತ್ತೊಂದು ಕಡೆ ಹೇಳುತ್ತಾರೆ. 'ಅವರ ತೋಟದ

ಪರಿಸರದಲ್ಲಿದ್ದ ಧೂಪದ ಮರಗಳನ್ನು ಯಾರೋ ಕಡಿದು ಹಾಕಿದ್ದಕ್ಕೆ ಅಲ್ಲಿಯೇ ವಸತಿ ಹೂಡಬೇಕಾಗಿದ್ದ ಒಂದು ಜಾತಿಯ ಪಕ್ಷಿಸಂತತಿ ಪತ್ತೆಯೇ ಇಲ್ಲದಂತೆ ಹೋದವೆಂದು'.

ಹೀಗೆ ತೇಜಸ್ವಿ ಸ್ವಾನುಭವದ ಮೂಲಕವೇ ಪರಿಸರದ ಅಚ್ಚರಿಗಳನ್ನು ತಿಳಿಯುತ್ತಾ ಹೋಗುತ್ತಾರೆ. ಟುವ್ವಿ ಹಕ್ಕಿಯೊಂದು ಗೂಡು ಕಟ್ಟುವ ಬಗೆಯನ್ನು ಅವರ ಕನ್ನಡ ನಾಡಿನ ಹಕ್ಕಿಗಳು ಭಾಗ-೨ ಕೃತಿಯಲ್ಲಿ ಹೇಳುತ್ತಾರೆ. "ಕೊನೆಗೆ ಅದು ಮರಿಮಾಡಿಕೊಂಡು ಗೂಡು ತ್ಯಜಿಸಿದ ಮೇಲೆ ಆ ಗೂಡನ್ನು ತಂದು ಮನೆಯಲ್ಲಿ ವಿವರವಾಗಿ ಪರಿಶೀಲಿಸಿದೆ.

ಅದು ವಾಸ್ತವವಾಗಿ ನಾನು ಸೂಜಿದಾರರಲ್ಲಿ ಬಟ್ಟೆ ಹೊಲೆಯುವಂತೇನೂ ಹೊಲಿದಿರಲಿಲ್ಲ. ತಗಡಿನ ಹಾಳೆಗಳನ್ನು ಸೇರಿಸಿ ರೀವಿಟ್ ಮಾಡುವಂತೆ ಅದು ಜೇಡರ ಬಲೆ ಹೊಸೆದು ಮಾಡಿದ ದಾರದಲ್ಲಿ ರಿವಿಟ್ ಮಾಡಿತ್ತು. ಎಂದರೆ ತೂತು ಮಾಡಿ ದಾರ ಪೋಣಿಸಿ ಅದು ನುಸುಳಿ ಹೊರಬರದಂತೆ ಎರಡು ಕಡೆಗಳಲ್ಲೂ ಎರಡು ದಪ್ಪ ದಪ್ಪ ಗಂಟು ಹಾಕಿತ್ತು. ಕೈ ಬೆರೆಳುಗಳಿಲ್ಲದೆ ಈ ಹಕ್ಕಿಗೆ ದಾರ ಗಂಟು ಹಾಕಲು ಹೇಗೆ ಸಾಧ್ಯವಾಯ್ತು ? ಅಲ್ಲದೆ ಗೂಡು ಸಡಿಲವಾಗದಂತೆ ಅಷ್ಟು ದಾರದ ರಿವಿಟ್‌ಗಳನ್ನು ಸರಿಯಾದ ಉದ್ದಕ್ಕೆ ಗಂಟು ಮಾಡಿ ರಿವಿಟ್ ಹೇಗೆ ಮಾಡಿತು ? ಈ ಪ್ರಶ್ನೆಗಳಿಗೆಲ್ಲಾ ನನ್ನ ಬಳಿಯಂತೂ ಸರಿಯಾದ ಉತ್ತರವಿಲ್ಲ. ಹಕ್ಕಿಗಳಿಗೆ ಗೂಡುಕಟ್ಟುವುದಾಗಲೀ ಅದರ ವಾಸ್ತುಶಿಲ್ಪವಾಗಲಿ ನಮ್ಮಂತೆ ಪ್ರಜ್ಞಾಪೂರ್ವಕ ಕೆಲಸವಲ್ಲ ಎನಿಸುತ್ತದೆ. ಮೊಟ್ಟೆ ಇಡುವ ಹಾಗೆ ಮರಿಮಾಡುವ ಹಾಗೆ ಉಸಿರಾಡುವ ಹಾಗೆ ಅದು ಆನುವಂಶಿಕ ಪ್ರವೃತ್ತಿಯೇ ಇರಬಹುದು. ಇವುಗಳ ಸುಪ್ತ ಪ್ರಜ್ಞೆಯಲ್ಲಿ ದಾಖಲಾಗಿರುವ ಸಮೀಕರಣದ ಪ್ರಕಾರ ಆಯಾ ಜಾತಿಗೆ ತಕ್ಕಂತೆ ಗೂಡುಕಟ್ಟುತ್ತಾ ಮರಿಮಾಡುತ್ತಾ ಬದುಕುತ್ತಾ ಹೋಗುತ್ತವೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ.. ಕನ್ನಡ ನಾಡಿನ ಹಕ್ಕಿಗಳು ಭಾಗ – ೨. ೨೦೦೯. ಪುಟ ೫೩) ಎಂಬ ತೀರ್ಮಾನಕ್ಕೆ ಬರುತ್ತಾರೆ.

ಹೀಗೆ ಪರಿಸರದ ನಿಗೂಢತೆಯನ್ನು ಕೆದಕುತ್ತಾ, ಬೆದಕುತ್ತಾ ಅಚ್ಚರಿ ಪಡುತ್ತಾ ವಿಧೇಯ ವಿದ್ಯಾರ್ಥಿಯಂತೆ ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೇ ತೇಜಸ್ವಿ ಅವರ ವಿಶಿಷ್ಟತೆ. ಹೀಗೆ ತೇಜಸ್ವಿಯವರಿಗೆ ಪರಿಸರವನ್ನು ಹೆಚ್ಚು ಹೆಚ್ಚು ಅರ್ಥ ಮಾಡಿಕೊಳ್ಳುವ ದಾಹ ಇರುವುದು ಅವರ ಕೃತಿಗಳಲ್ಲಿ ಕಂಡುಬರುತ್ತದೆ. ಪರಿಸರದ ಯಾವುದೇ ಸೂಕ್ಷ್ಮ ವಿಷಯವನ್ನು ವಿಧೇಯ

ವಿದ್ಯಾರ್ಥಿಯಂತೆ ತಿಳಿಯಲು ಪ್ರಯತ್ನಿಸುತ್ತಾರೆ. ತಮಗೆ ಗೊತ್ತಿಲ್ಲದ ಬಹುತೇಕ ವಿಚಾರಗಳನ್ನು ಇತರರಿಂದ ತಿಳಿಯಲು ಅವರು ಹಿಂಜರಿಯುವುದಿಲ್ಲ. 'ಹಾವುಗೊಲ್ಲರ ಎಂಗ್ಟ' ಒಮ್ಮೆ ಕೊಳಕುಮಂಡಲ ಹಾವನ್ನು ಹಿಡಿದು ತಂದಾಗ ಅದರ ಬಗೆಗೆ ಲೇಖಕರು ಮಾಹಿತಿ ತಿಳಿಯುವ ಸನ್ನಿವೇಶ ಸ್ವಾರಸ್ಯಪೂರ್ಣವಾಗಿದೆ.

"ಕೊಳಕು ಮಂಡಲ ಹಾವುಗಳು ಬಹಳ ನಿಧಾನ ಪ್ರಾಣಿಗಳು. ಮಿಕ್ಕ ಪ್ರಾಣಿಗಳಂತೆ ಹೆಜ್ಜೆ ಸದ್ದಿಗೆ ಓಡಿ ಹೋಗುವುದು ಇಲ್ಲ. ಅದನ್ನು ತುಳಿಯುವವರೆಗೂ ಮಲಗೇ ಇರುತ್ತವೆ. ಅವು ಕಚ್ಚಿದರೆ ಕಾಲು ಶೀಘ್ರವಾಗಿ ಕೊಳೆಯುತ್ತದೆ. ಎಂಗ್ಟ ಕೊಳಕುಮಂಡಲವನ್ನು ಹಿಡಿದು ಹಲ್ಲುಗಳನ್ನು ಕೀಳುತ್ತಿರಬೇಕಾದರೆ ಅದು ಪಟ ಪಟ ಬಾಲ ಬಡಿಯುತ್ತಾ ಒದ್ದಾಡಿತು. ಆಗ ಅದರ ಹೊಟ್ಟೆಯೊಳಗಿಂದ ಪುಟ್ಟ ಪುಟ್ಟ ಮಂಡಲದ ಹಾವಿನಮರಿಗಳು ಉದುರಿದವು. ಹಾವುಗಳೆಲ್ಲಾ ಮೊಟ್ಟೆ ಇಡುತ್ತವೆಂದು ತಿಳಿದಿದ್ದ ನನಗೆ ಆಶ್ಚರ್ಯ ಆಯ್ತು. ಎಂಗ್ಟ ಮಂಡಲದ ಹಾವು ಮರಿಹಾಕುತ್ತವೆಂದೂ ಅದು ಮರಿ ಹಾಕಿದಾಗ ಮರಿಗಳು ಒಂದು ಬಗೆಯ ಸದ್ದು ಮಾಡುತ್ತಾವೆಂದೂ ಆಗ ಕೆಂಬೂತ ಬಂದು ಎರಡು ಮರಿಗಳನ್ನು ಉಳಿಸಿ ಮಿಕ್ಕವೆಲ್ಲವನ್ನೂ ತಿನ್ನುತ್ತದೆಂದು ಹೇಳಿದ. ಕೆಂಬೂತ ಹಾವಿನ ಮರಿಗಳನ್ನು ಹಿಡಿದು ತಿನ್ನುವುದನ್ನು ನೋಡಿದ್ದೆ. ಆದರೆ ತಿನ್ನುತ್ತಾ ಎರಡು ಮರಿಗಳನ್ನು ಉಳಿಸುವುದು ಇತ್ಯಾದಿಗಳು ಎಂಗ್ಟನ ಕಲ್ಪನೆ ಇರಬಹುದು" (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ. ೨೦೦೭. ಪುಟ ೩೩)

ಕರ್ವಾಲೋ ಕಾದಂಬರಿಯ ಮಂದಣ್ಣನಲ್ಲಿ ಅಪಾರ ಪರಿಸರ ಜ್ಞಾನ ಇರುವಂತೆ ವೆಂಕ್ಟನಲ್ಲಿರುವ ಪರಿಸರ ಜ್ಞಾನವನ್ನು ಲೇಖಕರು ಒಪ್ಪಿಕೊಂಡರೂ ಅದರಲ್ಲಿನ ಸತ್ಯಾಸತ್ಯತೆಯನ್ನು 'ವಿವೇಚಿಸಿ' ಒಪ್ಪಿಕೊಳ್ಳುತ್ತಾರೆ. ಹೀಗೆ ತೇಜಸ್ವಿಯವರ ಕಥನ ಸಾಹಿತ್ಯದಲ್ಲಿ ಪಕ್ಷಿಗಳು, ಪ್ರಾಣಿಗಳು, ಹಾವು, ಜೇನುಹುಳು, ಬಸವನಹುಳು ಹೀಗೆ ಹಲವು ಜೀವ-ಸಂಕುಲಗಳ ಬಗೆಗಿನ ಜ್ಞಾನ, ಪರಿಸರ ವಿಜ್ಞಾನದ ಮಾಹಿತಿ ವಿವರವಾಗಿದ್ದು ಬಹಳ ವೈಜ್ಞಾನಿಕ ರೀತಿಯಲ್ಲಿ ನಿರೂಪಿಸುವ ಕಲೆಯಿಂದ ಹೆಚ್ಚಿನ ಮಹತ್ವ ಪಡೆದಿವೆ.

ನಾಗರಿಕ ಪ್ರಪಂಚದಲ್ಲಿ ತಿರುಗಾಡಿ ಜೋಮು ಹಿಡಿದಿದ್ದ ಇಂದ್ರಿಯಗಳಿಗೆ ಕರ್ವಾಲೋ ಅವರ ಅನುಭವ ಪೂರ್ಣ ವಿವರಣೆ ವಿಶ್ಲೇಷಣೆಗಳು ಎಲ್ಲರಲ್ಲೂ ಒಂದು ಬಗೆಯ ಹೊಸ ಜಾಗೃತಿ ಉಂಟುಮಾಡುತ್ತವೆ.

"ಕೋಲು ಕೋಲಾದ ಮುಳ್ಳುಗಿಡ ಒಂದನ್ನು ತೋರಿಸಿ ನೋಡಿ ಎಂದರು ಏನೂ ಕಾಣಲಿಲ್ಲ. ಸುಮ್ಮನೆ ಪಿಳಿ ಪಿಳಿ ಕಣ್ಣು ಬಿಟ್ಟೆವು ಕರ್ವಾಲೋ ಕಡ್ಡಿಯೊಂದನ್ನು ತೆಗೆದುಕೊಂಡು ಮಂತ್ರದಂಡವೆಂಬಂತೆ ಒಂದು ಕೊಂಬೆಯ ಕಡ್ಡಿಯನ್ನು ಮುಟ್ಟಿದರು. ಕೂಡಲೇ ಆ ಸಣ್ಣರೆಂಬೆ ಎಚ್ಚೆತ್ತುಕೊಂಡು ಕೈ ಕಾಲು ಮೀಸೆ ಆಡಿಸುತ್ತಾ ಇನ್ನೊಂದು ಕೊಂಬೆಗೆ ನಡೆದುಹೋಗುವ ಕಡ್ಡಿ ಹುಳುವಾಯ್ತು.

ಇದೇ ರೀತಿ ಮರವೇರಿ ಹೋಗುತ್ತಿದ್ದ ಎರೆ ಹುಳುಗಳನ್ನು ತೋರಿಸಿದರು. ನಾವು ತಿಳಿದಂತೆ ಎರೆಹುಳು ರೈತನ ಮಿತ್ರನಾಗಿ ಮಣ್ಣಿನಲ್ಲಿರಬೇಕಾದ್ದು, ಆದರೆ ಮರವೇರಿ ಎಲ್ಲಿಗೆ ಹೋಗುತ್ತಿದೆಯೋ ಅರ್ಥವಾಗಲಿಲ್ಲ. ಕರ್ವಾಲೋ ಹೇಳಿದರು. ಮರದ ಮೇಲಿನ ಫರ್ನ್‌ಗಳು ಗಾಳಿಯ ಧೂಳನ್ನೆಲ್ಲಾ ಹಿಡಿದಿಟ್ಟುಕೊಂಡು ತಮ್ಮದೇ ಆದ ಭೂಮಿಯಲ್ಲಿ ಬೇರು ಬಿಟ್ಟಿರುತ್ತವೆ. ಈ ಹುಳುಗಳು ಅಲ್ಲಿ ವಾಸಿಸಲು ಹೋಗುತ್ತವೆ ಎಂದು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೯, ಪುಟ ೧೦)

ಪರಿಸರದ ಬಗೆಗಿನ ನಿಗೂಢತೆಗಳನ್ನು ಬೇಧಿಸುತ್ತಲ್ಲೇ ಅವುಗಳ ಕಾರ್ಯ-ಕಾರಣವನ್ನು ವಿವರವನ್ನು ನೀಡುವ ತೇಜಸ್ವಿ ಶೈಲಿಗೆ ಈ ಮೇಲಿನ ಸಂವಾದವೇ ಉತ್ತಮ ಉದಾಹರಣೆಯಾಗಿದೆ.

ಪರಿಸರ ಜಾಗೃತಿ ಆಂದೋಲನಗಳು ದಿನನಿತ್ಯ ನಡೆಯುತ್ತಿದ್ದರೂ ಪರಿಸರ ನಾಶ ಹವ್ಯಾಹತವಾಗಿ ನಡೆಯುತ್ತಲೇ ಇದೆ. ನಾಗಾಲೋಟದ ಬದುಕಿನ ಜಂಜಾಟದಲ್ಲಿ ಎಲ್ಲವನ್ನೂ ಮರೆತು, ಸ್ವಾರ್ಥಪರ ಜೀವನ ನಡೆಸುತ್ತಿರುವುದನ್ನು ಕಾಣುತ್ತಿದ್ದೇವೆ. ಇದರಿಂದ ಭಾರತದಲ್ಲಿ ಪರಿಸರದ ಸಮಸ್ಯೆಗಳು ತ್ವರಿತವಾಗಿ ಬೆಳೆಯುತ್ತಿವೆ. 'ಪರಿಸರ ವ್ಯವಸ್ಥೆಯ ಅವನತಿ' ಪ್ರಾಕೃತಿಕ ವಿಪತ್ತುಗಳು ಉಲ್ಬಣಗೊಳ್ಳಲು ಚಾಲಕಶಕ್ತಿಯಾಗಿದೆ. ಈ ದೃಷ್ಟಿಯಿಂದ 'ಜೈವಿಕ ವೈವಿಧ್ಯದ ಸುಸ್ಥಿರತೆ' ಕಾಪಾಡುವುದು ವರ್ತಮಾನದ ಅತ್ಯಂತ ತೀವ್ರ ಅಗತ್ಯಗಳಲ್ಲಿ ಒಂದಾಗಿದೆ. ಈ ದಿಸೆಯಲ್ಲಿ ತೇಜಸ್ವಿಯವರ ಪರಿಸರ ಪ್ರಜ್ಞೆಯನ್ನು ಒಳಗೊಂಡ ಸಾಹಿತ್ಯ ಎಲ್ಲರನ್ನೂ ಚಿಂತನೆಗೆ ಒಳಗುಮಾಡುತ್ತವೆ. ಇವರ ಸಾಹಿತ್ಯದಲ್ಲಿನ ಚಿಂತನೆಗಳು ಪ್ರಸ್ತುತ ಸಂದರ್ಭದಲ್ಲಿ ಹೆಚ್ಚು ಮಹತ್ವ ಪೂರ್ಣವಾಗಿದ್ದು, ಸರ್ವಕಾಲಿಕವಾದವು. ಪರಿಸರ ನಾಶದಿಂದಾಗುವ ಅನಾಹುತಗಳ ಜಿಜ್ಞಾಸೆಯನ್ನು ಪರಿಸರದ ಕಥೆಯಲ್ಲಿನ ಈ ಮುಂದಿನ ಭಾಗದಿಂದ ತಿಳಿಯಬಹುದು.

"ಈಗ ಕಾಡುಗಳಿಲ್ಲದ, ಕಾಡು ಪ್ರಾಣಿಗಳಿಲ್ಲದ ಪರಿಸರವು ಸ್ಮಶಾನಕ್ಕಿಂತ ಭೀಕರವಾಗಿ ಕಾಣುತ್ತದೆ. ಕಾಡುಗಳನ್ನು, ಕಾಡುಪ್ರಾಣಿಗಳನ್ನು ಸಂರಕ್ಷಿಸಬೇಕೆಂದು ನಾನು ಹೇಳಿದರೆ ಅದು ನನ್ನ ತಿಳುವಳಿಕೆಯ ಕಾರಣಗಳಿಗಿಂತಲೂ ಹೆಚ್ಚಾಗಿ ಅವುಗಳೊಂದಿಗೆ ನಾನು ಹೊಂದಿರುವ ವ್ಯಕ್ತಿನಿಷ್ಠ ಸಂಬಂಧವೇ ಆಗಿದೆ. ಕಾಡುಗಳನ್ನು ನಾಶ ಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನೂ, ಅವುಗಳ ಪರಿಸರವನ್ನೂ ಧ್ವಂಸ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ ಸಂಖ್ಯೆಗಳ ಆಧಾರದ ಮೇಲೆ, ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ, ನಾನು ಕಂಡಂತೆ ಕಾಡನ್ನು ಕಂಡಿಲ್ಲದ ಅನುಭವಿಸಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿ ಸಂಖ್ಯೆಗಳ ವಿಶ್ಲೇಷಣೆ ಮುಖಾಂತರ ಹೇಳಿ ಪ್ರತಿಸ್ಪಂದನ ಉಂಟುಮಾಡುವುದು ಕಷ್ಟ ಸಾಧ್ಯ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೦೨)

ಪರಿಸರದ ಬಗೆಗಿನ ಕಾಳಜಿ, ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನಲ್ಲಿ ಸ್ವತಃ ಹುಟ್ಟಬೇಕು. ಆಗ ಮಾತ್ರ ಪರಿಸರ ನಾಶ ತಡೆಯಲು ಸಾಧ್ಯ. 'ಪರಿಸರ ಪ್ರಜ್ಞೆ' ಪ್ರತಿಯೊಬ್ಬನಿಗೂ ಇರುವುದು ಅಗತ್ಯ ಎಂಬುದನ್ನು ಇದರಿಂದ ತಿಳಿಯಬಹುದಾಗಿದೆ. ತೇಜಸ್ವಿ ಇಲ್ಲಿ ತಜ್ಞರಂತೆ ಅಭಿಪ್ರಾಯ ವ್ಯಕ್ತಪಡಿಸಿಲ್ಲ. ಸಾಮಾನ್ಯ ಜ್ಞಾನವುಳ್ಳ ಅನುಭವಸ್ಥರಾಗಿ ತಮ್ಮ ನೈಜ ಅನುಭವಗಳನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ತೇಜಸ್ವಿಯವರ ದೃಷ್ಟಿಯಲ್ಲಿ ಪರಿಸರ ಎಂದರೆ ಕೇವಲ ಮರ, ಗಿಡ, ಪಶು ಪಕ್ಷಿ, ಜೀವ-ಜಂತುಗಳಲ್ಲ. ಅವುಗಳೊಡನೆ 'ನಮ್ಮ ಸಂಬಂಧ'. ಇದು ಕೇವಲ ನಮ್ಮ ವೈಯಕ್ತಿಕ ಸಂಸ್ಕಾರದಿಂದಲ್ಲದೆ ನಮ್ಮ ಪುರಾಣ, ಇತಿಹಾಸ, ಸಮಾಜ, ಸಂಸ್ಕೃತಿ, ಹೀಗೆ ಬದುಕಿನ ಹತ್ತು ಹಲವು ಸ್ಥರಗಳಿಂದ ನಿರ್ದೇಶಿತವಾಗುತ್ತಿರುತ್ತದೆ.

"ಕಾರಂತರ ನಿಸರ್ಗ ಕಲ್ಪನೆಯಲ್ಲಿನ ಮನುಷ್ಯ ಮತ್ತು ಪ್ರಕೃತಿ ಸಂಬಂಧದ ಕಲ್ಪನೆ ಒಂದು ಮಹತ್ವದ ಸ್ತರದ್ದಾದರೆ, ಕುವೆಂಪು- ಬೇಂದ್ರೆಯವರ ಪ್ರಕೃತಿಚಿಂತನೆ ತಾಯ್ತನದ, ಮನುಷ್ಯನನ್ನು ಪೊರೆಯುವ ಉನ್ನತೀಕರಣದತ್ತ ಒಯ್ಯುವ ನೆಲೆಯದಾಯಿತು. ಇವುಗಳ ಮಧ್ಯೆ ತೇಜಸ್ವಿ ಇಂಥ ಅಗಾಧ ಪರಿಸರವನ್ನು ಕಾಡಿನ ಚೈತನ್ಯವನ್ನು ರಕ್ಷಿಸಲೇಬೇಕಾದ ತುರ್ತು ಅಗತ್ಯವನ್ನು ಮನಗಂಡವರಾದರು.

ಲಕ್ಷಾಂತರ ಹೆಕ್ಟೇರುಗಳ ಅರಣ್ಯ ಸಂಪತ್ತು ದಿನೇ ದಿನೇ ನಾಶವಾಗಿ ಹಣ ಪಿಶಾಚಿತ್ವಕ್ಕೆ ಗುರಿಯಾಗುತ್ತಿರುವುದರತ್ತ ಅವರ ಆಲೋಚನೆ ಚಲಿಸಿದೆ. ಹೀಗೆ ಕಾಡು ಕಪ್ಪು ಹಣಕ್ಕೆ, ಗುರಿರಹಿತ ಕುರುಡು ಪ್ರಗತಿಗೆ ಆಹುತಿಯಾಗುವುದನ್ನು ಕುರಿತ ತೀವ್ರ ನೋವು ಹಾಗೂ ಆಕ್ರೋಶ ತೇಜಸ್ವಿಯವರ ಬರಹಗಳಲ್ಲಿ ವಿಶಿಷ್ಟ ತಾತ್ವಿಕ ಕೇಂದ್ರವೊಂದನ್ನು ರೂಪಿಸಿದೆ. ಎಲ್ಲ ತತ್ವಗಳಿಗಿಂತ ಪರಿಸರ ಪ್ರಜ್ಞೆ ಅತ್ಯಂತ ಗಂಭೀರವಾದದ್ದು ಮತ್ತು ಪರಿಸರ ಬದುಕಿ ಉಳಿಯಬೇಕೆಂಬುದು ಅವರು ಪ್ರತಿಪಾದಿಸಿದ ಅಂತಿಮ ತತ್ವವಾಗಿತ್ತು". (ಚಂದ್ರೇಗೌಡ ಬಿ. (ಸಂ.). ತೇಜಸ್ವಿ ನೆನಪು. ೨೦೦೭. ಪುಟ ೧೪) ಎಂಬ ಕೀ.ರಂ. ನಾಗರಾಜು ಅವರ ಮಾತುಗಳು ತೇಜಸ್ವಿಯವರ ಪರಿಸರ ಪ್ರಜ್ಞೆಯ ಅಂತಃಸತ್ತ್ವಕ್ಕೆ ಕೈಗನ್ನಡಿ ಹಿಡಿದಂತಿದೆ. ಈ ದೃಷ್ಟಿಯಲ್ಲಿ ತೇಜಸ್ವಿಯವರ ಪರಿಸರ ಕಾಳಜಿ ಹಾಗೂ ಚಿಂತನೆಗಳು 'ಜುಗಾರಿಕ್ರಾಸ್' ಹಾಗೂ 'ನಿಗೂಢ ಮನುಷ್ಯರು' ಕೃತಿಗಳಲ್ಲಿ ಹೇರಳವಾಗಿವೆ. ಮನುಷ್ಯ-ಅವನ ಜಾಣ್ಮೆ, ಯಂತ್ರನಾಗರಿಕತೆಯ ಇತಿಮಿತಿಗಳು ಅದರ ಎದುರಿಗೆ ನಿಸರ್ಗದ ಅಗಾಧ ಚೈತನ್ಯ ಇವುಗಳ ನಡುವೆ ಹುಟ್ಟಿಕೊಳ್ಳುವ ಎಲ್ಲಾ ಚಿಕ್ಕಟ್ಟುಗಳು - ಅಂತಿಮವಾಗಿ ನಿಸರ್ಗ ಚೈತನ್ಯದ ದಿಗ್ವಿಜಯದ ಕಥನವೇ ಇವರ ಬಹುತೇಕ ಎಲ್ಲಾ ಕಾದಂಬರಿಗಳ ಪ್ರಧಾನ ಭಿತ್ತಿ ಆಗಿದೆ.

ತೇಜಸ್ವಿ ಪರಿಸರದ ಸೌಮ್ಯ ಮುಖವನ್ನಷ್ಟೇ ಅಲ್ಲದೆ, ಅದರ ರೌದ್ರ ಮುಖವನ್ನೂ ಚೆನ್ನಾಗಿ ಬಲ್ಲವರಾಗಿದ್ದರು. ಪರಿಸರದ ಒಂದು ಭಾಗವೇ ಮಲೆನಾಡು. ಮಲೆನಾಡು ಎಂದೊಡನೆ ಅಲ್ಲಿನ ದಟ್ಟಕಾಡು, ಎಲೆಲ್ಲೂ ಹಬ್ಬಿರುವ ಹಸಿರು ಸಾಮ್ರಾಜ್ಯ, ಪರ್ವತ ಶ್ರೇಣಿ, ಕಣ್ಣು ಹಾಯಿಸಿದಷ್ಟು ಸೂರೆಗೊಳ್ಳುವ ಪ್ರಕೃತಿಸೌಂದರ್ಯ ನೆನಪಾಗುತ್ತದೆ. ಕುವೆಂಪು ಅವರ ಕಾದಂಬರಿಗಳು ಹಾಗೂ ಕಥೆಗಳಲ್ಲಿ ಈ ಕಲ್ಪನೆಗೆ ಗರಿಮೂಡಿದಂತೆ ಮಲೆನಾಡಿನ ಪ್ರಕೃತಿ ಸೌಂದರ್ಯ ಚಿತ್ರಿತವಾಗಿದೆ. ಮಲೆನಾಡಿನ ಕಾಡಿನ ಸೌಂದರ್ಯಗಳನ್ನು ತೇಜಸ್ವಿ ಅವರ 'ಕರ್ವಾಲೋ' ಕಾದಂಬರಿಯ ಈ ಭಾಗದಲ್ಲಿ ನೋಡಬಹುದು.

"ಆ ಕಾಡನ್ನು ಕಾಣುತ್ತಿದ್ದಂತೆಯೇ ಕರ್ವಾಲೋರ ಚೈತನ್ಯ ಇಮ್ಮಡಿಸಿತು. ಎಲ್ಲೆಂದರಲ್ಲಿ ಬೆಳೆದಿದ್ದ ಆರ್ಕಿಡ್‌ಗಳು, ನೂರಾರು ತರದ ಹಾಸುಂಬೆ, ಪಾಚಿಗಳು, ಅನೇಕ ರೀತಿಯ ಫರ್ನ್‌ಗಳು ನಮ್ಮನ್ನು ಮೂಕರನ್ನಾಗಿ ಮಾಡಿದವು. ಕಾಡನ್ನು ಸಮೀಪಿಸುತ್ತಿದಂತೆಯೇ ಮೇಯುತ್ತಿದ್ದ ಕಾಡುಕೋಳಿಗಳ ಗುಂಪಿಗೆ ಒಂದು ಈಡು ಹೊಡೆದು ಒಂದೇ ಏಟಿಗೆ ಎರಡು ಕೋಳಿಗಳನ್ನು ಕರಿಯಪ್ಪ ಬಕ್ಕಣಕ್ಕೆ ಇಳಿಸಿದ.

ಈಡಿನ ಢಂಕಾರವನ್ನು ಕೇಳುತ್ತಿದಂತೆಯೇ ಕಾಡಿನಿಂದ ಅನೇಕ ಗಮ್ಮಾಡಲು ಹಕ್ಕಿಗಳು ಹಾರಿದವು. ಮಂಗಗಳು ಮುಸಿಯಗಳೂ ಕೂಗ ತೊಡಗಿದವು. ಈವರೆಗೂ ಬಿಸಿಲಿನಲ್ಲೇ ಬಂದಿದ್ದ ನಾವು ಕಾಡಿನ ತಣ್ಣೆಳಸುವನ್ನು ಕಂಡು ತಲೆಯ ಮೇಲೆ ಭಾವಣಿ ಸಿಕ್ಕಷ್ಟು ಸಂತೋಷಪಟ್ಟಿತು....

ಮರಗಳು ಅದ್ಭುತವಾಗಿ ವಾಕಿಂಗ್ ಸ್ಟಿಕ್‌ಗಳಂತೆ ಆಕಾಶದ ಕಡೆಗೆ ಬೆಳೆದು ನಿಂತಿದ್ದುವು. ಬಹಳ ಮಳೆಯಾಗುವ ಪ್ರದೇಶವಾದುದರಿಂದ ಅವುಗಳ ಕಾಂಡಗಳಲ್ಲಿ ಎಣ್ಣೆಯಂತಹ ಹಸಿರು ಹಾಸುಂಬೆ ಹೊಡೆದುಕೊಂಡಿತ್ತು. ಅಲ್ಲಲ್ಲಿ ವಿಚಿತ್ರವರ್ಗದ ಹಾವಸೆಗಳು ಜೇನುಗೂಡುಗಳಂತೆ ಜೋತುಕೊಂಡಿದ್ದವು. ನೆಲದಲ್ಲಿ ತೆಳ್ಳಗೆ ಗುರುಗಿಹಳು ಚಾಪೆಯಂತೆ ಹಾಸಿಕೊಂಡಿತ್ತು. ಹಲವು ಕಡೆ ಮರದ ಕಾಂಡಗಳಿಗೆ ಮೊರದಷ್ಟು ಅಗಲವಾದ ಮರದ ಅಣಬೆಗಳು ಬೆಳೆದುಕೊಂಡಿದ್ದನ್ನು ನೋಡಿದ ಕರ್ವಾಲೋರಂತೂ ಮೂಕ ವಿಸ್ಮಿತರಾಗಿ ತನ್ಮಯರಾಗಿ ಹೋಗಿದ್ದರು.... ಕಣ್ಣಿಗೆ ಕಂಡದ್ದೆಲ್ಲ ತಮ್ಮ ರೂಪ ವರ್ಣ ವೈವಿಧ್ಯಗಳಿಂದ ತಮ್ಮಲ್ಲೇ ನಮ್ಮನ್ನು ತಲ್ಲೀನಗೊಳಿಸಿಕೊಂಡು ಬಿಡುತ್ತಿದ್ದವು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ. ೨೦೦೯, ಪುಟ ೧೦೭)

ಹೀಗೆ ಮಲೆನಾಡಿನ ಪ್ರಕೃತಿ ಸೌಂದರ್ಯದ ಮುಖವನ್ನು ಕೂಡ ತೇಜಸ್ವಿ ಸಶಕ್ತವಾಗಿ ಚಿತ್ರಿಸಿದ್ದಾರೆ. ಅಲ್ಲದೇ ಇದಕ್ಕೆ ವ್ಯತಿರಿಕ್ತವಾದ ಪರಿಸರದ ರೌದ್ರ ಮುಖವನ್ನು ತೇಜಸ್ವಿ ತಮ್ಮ 'ಮಾಯಾಲೋಕ'ದಲ್ಲಿ ಚಿತ್ರಿಸಿದ್ದಾರೆ. ಮಲೆನಾಡಿನ ಪರಿಸರದ ಭೀಕರತೆಯನ್ನು ತೇಜಸ್ವಿ ತಮ್ಮ ಈ ಕೃತಿಯಲ್ಲಿ ಸೆರೆ ಹಿಡಿದಿದ್ದಾರೆ.

"ಈ ಮಲೆನಾಡಿನಲ್ಲಿ ಎಲ್ಲವೂ ಅತಿರೇಖವೇ! ಮಳೆಗಾಲದಲ್ಲಿ ಧೋ ಧೋ ಎಂದು ಹಗಲು ರಾತ್ರಿಗಳೆನ್ನದೆ ಉರವಣಿಸಿ ಸುರಿಯುವ ಮಳೆ. ಕಾಲಿಟ್ಟಲ್ಲಿ ಕೆಸರು, ಕಾಲು ಸಂದಿಗಳಲ್ಲೆಲ್ಲಾ ಕೆಸರು ಹುಣ್ಣು, ಕಿವಿಯ ಮೇಲೆ ಗರಗಸ ಆಡಿಸಿದಂತೆ ಬಂದು ಅಪ್ಪಳಿಸುವ ಜೀರುಂಡೆಗಳ ನಿರಂತರ ಜೀರ್‍ದನಿ. ಒಂದು ಸಾರಿ ಈ ಮಳೆ ನಿಂತರೆ ಸಾಕಪ್ಪ ಎನ್ನಿಸದೆ ಮಳೆಗಾಲ ವಿದಾಯ ಹೇಳುವುದಿಲ್ಲ.

ಅದು ನಿಲ್ಲುತ್ತಿದ್ದಂತೆಯೇ ತಂಗಾಳಿ ಮೆಲ್ಲಗೆ ಮೋಹಿನಿಯಂತೆ ಬಂದಿದ್ದು ಒಂದೆರಡು ದಿನಗಳೊಳಗೆ ಕೊರೆಯುವ ಚಳಿಯಾಗುತ್ತಾ ಬಚ್ಚಲು ಹಂಡೆಯ ಪಕ್ಕ ಬೆಂಕಿ ಕಾಯಿಸುತ್ತಾ ಕುಳಿತವರಿಗೆ ಮೇಲೆ ಏಳಲು ಮನಸ್ಸೇ ಬರುವುದಿಲ್ಲ. ನೀರು ಮುಟ್ಟಿದರೆ ಮಂಜುಗಡ್ಡೆ ಮುಟ್ಟಿದಂತೆ ಎಲ್ಲರೂ ಕಾಟಾಚಾರಕ್ಕೆ ಎದ್ದು ಮುಖ

ತೊಳೆಯುತ್ತಾರೆ. ಹಾಲಿಗೆ ಎಷ್ಟು ಮಜ್ಜಿಗೆ ಸುರಿದು ಹೆಪ್ಪು ಹಾಕಿದರೂ ಮೊಸರೇ ಆಗುವುದಿಲ್ಲ. ರಾತ್ರಿ ಮಲಗಿದರೆ ಹಾಸಿಗೆ ಸಹ ತಣ್ಣಗೆ ಕೊರೆಯುತ್ತದೆ. ಮೈಶಾಖಕ್ಕೆ ಹಾಸಿಗೆ ಕೊಂಚವಾದರೂ ಬೆಚ್ಚಗಾಗುವುದಕ್ಕೆ ಗಂಟೆಗಟ್ಟಲೆ ಅಲ್ಲಾಡದೆ ಸತ್ತ ಹೆಣದ ಹಾಗೆ ಬಿದ್ದುಕೊಂಡರಬೇಕು.

ಮೈಯೆಲ್ಲಾ ಹುರುಪೆ ಎದ್ದು, ಕಾಲು ತುಟಿ ಎಲ್ಲಾ ಬಿರುಕುಬಿಟ್ಟು ರಕ್ತ ಒಸರುತ್ತದೆ. ಚಳಿಗಾಲ ಒಂದು ಸಾರಿ ತೊಲಗಿದರೆ ಸಾಕಪ್ಪಾ ಎನಿಸುವರೆಗೂ ಚಳಿ ಗಡ ಗಡ ನಡಗಿಸುತ್ತದೆ. ಜನ ಶಿವರಾತ್ರಿ ಕಳೆಯುವುದನ್ನೇ ಚಳಿ ನಿರ್ಗಮಿಸುವುದನ್ನೇ ಕಾತರದಿಂದ ಕಾಯುತ್ತಾರೆ. ಮಾರ್ಚ್ ತಿಂಗಳು ಮುಗಿಯುತ್ತಾ ಬಂದರೂ ಮಳೆಯ ಸುಳಿವೇ ಇಲ್ಲ. ಬೆಳಗಿನ ಹೊತ್ತು ಸೂರ್ಯೋದಯಕ್ಕೆ ಮುನ್ನ ಮಾತ್ರ ವಾತಾವರಣ ತಂಪಾಗಿರುತ್ತದೆ. ತೋಟಗಳಲ್ಲಿ ಎಲೆಗಳ ಮೇಲೆ ಕುಳಿತ ಮಂಜಿನ ಹನಿಗಳು ಜಾರಿ ತರಗೆಲೆಗಳ ಮೇಲೆ ಬೀಳುವ ಸದ್ದು ತಟತಟ ಎಂದು ಶಬ್ಧ ಮಾಡುತ್ತಾ ಮಳೆಯ ಭ್ರಮೆಹುಟ್ಟಿಸುತ್ತಿತ್ತು.

ಸೂರ್ಯ ಮೇಲೆದ್ದು ಬಿಸಿಲಿನ ಪ್ರಖರ ಕಿರಣಗಳು ತಾಗಿದ ಕೂಡಲೇ ಮಂಜು ಮಾಯವಾಗಿ ತರಗೆಲೆಗಳ ಮೇಲೆ ಬಿದ್ದಿದ್ದ ನೀರಪಸೆಯಲ್ಲಾ ಕೆಲವೇ ಕ್ಷಣದೊಳಗೆ ಅಂತರ್ಧಾನವಾಗಿ ಉರಿ ಬಿಸಿಲು, ಬೆಂಕಿ ಬಿದ್ದ ಹಾಗೆ ಮಲೆನಾಡಿನ ದಟ್ಟ ಕಾಡುಗಳ ಮೇಲೆ ಪ್ರಸರಿಸುತ್ತಿತ್ತು. ಸಂಜೆಯಾಗುತ್ತಿದಂತೆಯೇ ಮಧ್ಯಾಹ್ನದ ಬಿಸಿಲಲ್ಲಿ ಬಿಸಿ ಬಾಣಲೆಯಲ್ಲಿ ಕಾಯ್ದು ಕಾಡುಗಳಿಗೆ ಹೊಗೆಯ ಮುಸುಗು ಕವಿಯುತ್ತದೆ. ಒಣಗಿ ನಿಂತ ಹುಲ್ಲು ಹಲು ಮೊದಲಾದವೆಕ್ಕೆಲ್ಲಾ ಬೆಂಕಿಕೊಟ್ಟು ಸುಟ್ಟರೆ ಬೇಗ ಹೊಸ ಚಿಗುರು ಬಂದು ದನಗಳಿಗೆ ಮೇವು ದೊರೆಯುತ್ತದೆ ಎಂದು. ಜನಗಳೇ ಬೆಂಕಿ ಕೊಟ್ಟು ಕಾಳ್ಗಿಚ್ಚು ಏಳಿಸುತ್ತಿದ್ದರು. ರಾತ್ರಿಯಾದರೆ ದೂರದ ಗುಡ್ಡಗಳಲ್ಲಿ ಕಾಳ್ಗಿಚ್ಚು ಕೆಂಪು ಸೀಮೆಸುಣ್ಣದಲ್ಲಿ ಎಳೆದ ಗೀರಿನಂತೆ ಸಾಲಾಗಿ ಉರಿಯುವುದು ಕಾಣುತ್ತಿತ್ತು.

ಇದು ಜನಗಳು ಹಿಂದಿನಿಂದ ಅನುಸರಿಸಿಕೊಂಡು ಬಂದ ಪದ್ಧತಿಯಾದರೂ ಸಹ್ಯಾದ್ರಿ ಕಾಡುಗಳಿಗೆ ಯುಪಟೋರಿಯಂ ಕಳೆ ಕಾಲಿಟ್ಟ ಮೇಲೆ ಕಾಳ್ಗಿಚ್ಚಿನಿಂದಾಗುವ ಅನಾಹುತದ ಪ್ರಮಾಣ ಹೆಚ್ಚುತ್ತಾ ಬಂದಿದ್ದು ಯಾರ ಗಮನಕ್ಕೂ ಬಂದಿರಲಿಲ್ಲ. ಯುಪಟೋರಿಯಂ ಕಳೆ ಮರಕ್ಕೆ ಸುತ್ತಿಕೊಂಡು ಬಳ್ಳಿಯಂತೆ ಎತ್ತರಕ್ಕೆ ಬೆಳೆಯುತ್ತದೆ. ಹಿಂದೆಲ್ಲಾ ಕಾಡಿಗೆ ಬೆಂಕಿ ಬಿದ್ದಾಗ ಕೇವಲ ನೆಲಮಟ್ಟದಲ್ಲಿದ್ದ ಹುಲ್ಲು

ಸುಡುತ್ತಿದ್ದುದರಿಂದ ದೊಡ್ಡ-ದೊಡ್ಡ ಎತ್ತರದ ಮರಗಳಿಗೆ ಹೆಚ್ಚು ಘಾಸಿಯಾಗುತ್ತಿರಲಿಲ್ಲ. ಆದರೆ ಈಗ ಮರ ತಬ್ಬಿ ಹಿಡಿದಿರುವ ಯುಪಟೋರಿಯಂ ಯಮಪಾಶವೇ ಸರಿ. ಯುಪಟೋರಿಯಂ ಬೆಳೆದಿದ್ದ ಕಾಡಿಗೆ ಬೆಂಕಿ ಬಿದ್ದರೆ ಕಾಳ್ಗಿಚ್ಚು ಅಕ್ಷರಶಃ ನಾಗರ ಹಾವಿನಂತೆ ಬುಸುಗುಡುತ್ತಾ ವೇಗವಾಗಿ ವ್ಯಾಪಿಸುವುದನ್ನು ನೋಡಿದ್ದೇನೆ. 'ಯುಪಟೋರಿಯಂ' ಜಿಗ್ಗಿನಲ್ಲಿ ತೊಡಗಿಕೊಂಡ ಜಿಂಕೆ, ಕಾಡುಕೋಣ, ಇತ್ಯಾದಿ ಮಿಂಚಿನ ಓಟಗಾರರೂ ಸಹ ಬೆಂಕಿಗಿಂತ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರದೆ ಸುಟ್ಟು ಸತ್ತಿರುವ ಬೇಕಾದಷ್ಟು ಘಟನೆಗಳಿವೆ". (ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಮಾಯಾಲೋಕ ೧, ೨೦೦೮, ಪುಟ ೩೧)

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ನಮಗೆ ಹಲವು ನೆಲೆಗಳಲ್ಲಿ 'ಮಲೆನಾಡಿನ ಚಿತ್ರಣ' ಮುಖ್ಯವಾಗುತ್ತದೆ. "ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು ತಮ್ಮ ಕಾವ್ಯ ಕಾದಂಬರಿಗಳಲ್ಲಿ ಆಧ್ಯಾತ್ಮಿಕ ಅನುಭವದ ನೆಲೆಯಲ್ಲಿ ಚಿತ್ರಿಸಿರುವ ಕುವೆಂಪು ಅವರಿಗಿಂತ ವಾಸ್ತವದ ಹಿನ್ನೆಲೆಯಲ್ಲಿ ಭಿನ್ನ ಗ್ರಹಿಕೆಯಲ್ಲಿ ಸೂಕ್ಷ್ಮವಾಗಿ ಪರಿಸರದ ಅನಾವರಣಮಾಡಿರುವ ತೇಜಸ್ವಿ ಹೆಚ್ಚು ಪ್ರಸ್ತುತ" ಎನ್ನಿಸುತ್ತಾರೆ. ಕುವೆಂಪು ಆರಾಧನೆಯ ದೃಷ್ಟಿಯಿಂದ ಪರಿಸರವನ್ನು ನೋಡಿ ಅದರ ಸೌಂದರ್ಯಕ್ಕೆ ತಲೆದೂಗಿ ಆಧ್ಯಾತ್ಮಿಕ ಅನುಭೂತಿ ಪಡೆದರು. ತೇಜಸ್ವಿ ಅವರು ತಮ್ಮ 'ಸಾಹಸ ಪ್ರಜ್ಞೆ', 'ವಿಸ್ಮಯ ಗುಣ', 'ಹುಡುಕಾಟದ ಮನೋಭಾವ'ಗಳಿಂದ ಕುವೆಂಪುರವರಿಗಿಂತ ಮಲೆನಾಡಿನ ಪ್ರಕೃತಿಯನ್ನು ಭಿನ್ನ ಆಯಾಮಗಳಲ್ಲಿ ಚಿತ್ರಿಸಲು ಸಾಧ್ಯವಾಯಿತು ಎನ್ನಬಹುದು. ಕುವೆಂಪು ಅವರಲ್ಲಿ ಮಲೆನಾಡಿನ ಪರಿಸರದ ಭೀಕರತೆ ಚಿತ್ರಿತವಾಗಿದೆ ಆದರೆ ತೇಜಸ್ವಿ ಅವರ ಕೃತಿಗಳಂತೆ ಪರಿಸರದ ಕಾಳಜಿ ಹೆಚ್ಚಿನ ಪ್ರಮಾಣದಲ್ಲಿ ವ್ಯಕ್ತವಾಗುವುದಿಲ್ಲ. ಮಲೆನಾಡಿನ ಪರಿಸರದ ಗ್ರಹಿಕೆಯ ನೆಲೆಯಲ್ಲಿ ತೇಜಸ್ವಿ ಚಿಂತನೆ ಅಚ್ಚರಿ ಉಂಟುಮಾಡುತ್ತದೆ. ಋತುಮಾನಗಳಲ್ಲಿ ಬದಲಾಗುವ ಹವಾಮಾನ ಹಾಗೂ ಪರಿಸರದಲ್ಲಿ ಉಂಟಾಗುವ ಬದಲಾವಣೆಗಳನ್ನು ತೇಜಸ್ವಿ ಸಮರ್ಥವಾಗಿ ಗ್ರಹಿಸಿದ್ದಾರೆ. ತೇಜಸ್ವಿಯವರ ಬಹುತೇಕ ಕೃತಿಗಳಲ್ಲಿ ವ್ಯಕ್ತವಾಗಿರುವ 'ಪರಿಸರ ಪ್ರಜ್ಞೆ' ವರ್ತಮಾನದ ಸಂದರ್ಭಕ್ಕೆ ಪರಿಸರದ ಉಳಿವಿಗೆ ಸೂತ್ರದ ಮಾದರಿಯಲ್ಲಿವೆ. ಆಧುನಿಕತೆಯ ದೆಸೆಯಿಂದ ಬಂದ ಕಳೆ, ಯುಪಟೋರಿಯಂನಿಂದಾಗಿ ಉಂಟಾಗುತ್ತಿರುವ ಅರಣ್ಯ ನಾಶ, ಪ್ರಾಣಿ ಪಕ್ಷಿಗಳ ನಾಶ, ಪರಿಸರ ಕಾಳಜಿ ಮರೆತ ಜನಸಾಮಾನ್ಯರ ನಿರ್ಲಕ್ಷ್ಯ

ಮನೋಧೋರಣೆ ಹಾಗೂ ವರ್ತಮಾನದಲ್ಲಿನ ಪರಿಸರ ಜಾಗೃತಿಯ ಅನಿವಾರ್ಯತೆಯನ್ನು ಕೃತಿಗಳು ಬಿಂಬಿಸುತ್ತವೆ.

'ಮಾಯಾಲೋಕ'ದಲ್ಲಿ ತೇಜಸ್ವಿಯವರ ಪರಿಸರಪ್ರಜ್ಞೆ ಸಾಂದ್ರವಾಗಿದೆ. "ಹಕ್ಕಿ ಪಿಕ್ಕಿಯವರ ಒಂದು ಗುಂಪು ಒಂದು ಸಾಮಿಲ್ಲಿನ ಎದುರು ಮೈದಾನದಲ್ಲಿ ಬೀಡು ಬಿಟ್ಟಿದ್ದರು. ಇವರು ನನ್ನ ತೋಟದ ಬೇಲಿಯುದ್ದಕ್ಕೂ ಪ್ರಾಣಿಗಳು ಓಡಾಡುವ ಗಂಡಿಗಳೆಲ್ಲಾ ಉರುಳು ಕಟ್ಟಿ ಅಲ್ಲಿ ಓಡಾಡುತ್ತಿದ್ದ ಕಾಡುಕೋಳಿ, ಚಿಟ್ಟುಕೋಳಿ, ಉಡು ಇತ್ಯಾದಿಗಳನ್ನು ಹಿಡಿಯುತ್ತಿದ್ದರು. ನನ್ನ ತೋಟದೊಳಗೆ ಯಾರಿಗೂ ಶಿಕಾರಿ ಮಾಡಲು ಬಿಡದೆ ಅವುಗಳನ್ನು ಉಳಿಸಿದೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೩) ಲೇಖಕರು, ಈ ಬಗೆಯ ಕ್ಷುದ್ರ ಜೀವಿಗಳ ಬಗೆಗೆ, ನಿರ್ಲಕ್ಷ್ಯವಾಗಿರುವ ಜೀವಿಗಳ ಬಗೆಗೆ ಗಮನಹರಿಸುವುದು ಹಾಗೂ ಅವುಗಳನ್ನು ಉಳಿಸಲು ಪ್ರಯತ್ನಿಸುವುದು ಅವರ ನಿಜವಾದ ಪರಿಸರ ಪ್ರಜ್ಞೆ ಕಾಳಜಿಯನ್ನು ತಿಳಿಸುತ್ತದೆ. ಅಲ್ಲದೆ, ತೀರ ನಿರ್ಲಕ್ಷ್ಯವೆನಿಸಿದ ಅಂಶಗಳಲ್ಲೂ ಅವರ ಪರಿಸರ ಪ್ರಜ್ಞೆ ಜಾಗೃತವಾಗಿರುತ್ತದೆ. ಪರಿಸರದ ಪ್ರತೀ ಅಂಶವನ್ನು ಅತೀ ಸೂಕ್ಷ್ಮವಾಗಿ ಅವಲೋಕಿಸುವ ಅವರ ಗುಣ ಪರಿಸರ ರಕ್ಷಣೆಯ ಸಂದರ್ಭದಲ್ಲಿ ಪ್ರಸ್ತುತವಾಗುತ್ತದೆ. ಹುಂಡುಕೋಳಿಗಳ ಬಗೆಗೆ ಅವರು ನೀಡುವ ವಿವರಣೆ ಗಮನಿಸಿದಾಗ ನಮಗೆ ಇದು ಮನದಟ್ಟಾಗುತ್ತದೆ.

"ಸಾಯಂಕಾಲವಾಗುತ್ತಿಂದತೆಯೇ ಒಂದಾದ ಮೇಲೆ ಒಂದರಂತೆ ಕೊಟ್ ಕೊಟ್ ಕೊರ್ರೋ ಎಂದು ಒಂದೇ ಸಮ ಕೂಗುತ್ತಿದ್ದವು. ಚೋರೆಹಕ್ಕಿಗಳ ಕಾಟ ತಪ್ಪಿಸಿಕೊಳ್ಳಲು ಸಸಿ ಅಗೇಡಿಗೆ ಭತ್ತ ಎರಚಿ ನೀರು ನಿಲ್ಲಿಸುತ್ತಿದ್ದರು. ಚೋರೆ ಹಕ್ಕಿಗಳಿಗೆ ನೀರಿನಲ್ಲಿ ಮುಳುಗಿರುವ ಭತ್ತ ತಿನ್ನಲು ಬರುವುದಿಲ್ಲ. ಆದರೆ ಹುಂಡುಕೋಳಿಗಳು ಜೌಗಿನ ಹಕ್ಕಿಗಳಾದ್ದರಿಂದ ಇವುಗಳ ಕಾಟ ಶುರುವಾಗುತ್ತಿತ್ತು. ಇವುಗಳ ಶರೀರ ರಚನೆ ನೀರಿಗಾಗಿ ಸರಿಯಾಗಿ ಹೊಂದಿಕೊಂಡಿದೆ. ಕಾಲಿನ ಅರ್ಧದಷ್ಟು ವಿಸ್ತಾರವಾಗಿರುವ ಉದ್ದ ಬೆರಳುಗಳು ಕೆಸರಿನಲ್ಲಿ ಹೂತುಕೊಳ್ಳದೆ ನಡೆಯಲು ತಕ್ಕಂತಿವೆ. ಕೊಕ್ಕರೆಯ ಕೊಕ್ಕನ್ನು ಹೋಲುವ ಕೊಕ್ಕುಗಳು ನೀರಿನಲ್ಲಿ ಮುಳುಗಿರುವ ಆಹಾರವನ್ನಾಗಲೀ ಜಲಚರಗಳನ್ನಾಗಲೀ ಹಿಡಿಯಲು ತಕ್ಕಂತಿವೆ. ಇವು ಜೌಗಿನ ಹಕ್ಕಿಗಳೇ ಹೊರತು, ಬಾತುಗಳಂತೆ ನೀರಿನಲ್ಲೇ ಈಜಾಡಿಕೊಂಡಿರುವ ಹಕ್ಕಿಗಳಲ್ಲ. ಯಾವಾಗಲೂ ಜೌಗಿನ ಸಮೀಪದಲ್ಲಿ ಆಹಾರಾನ್ವೇಷಣೆ ಮಾಡುತ್ತಾ ತಿರುಗುತ್ತವೆ". (ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಮಾಯಾಲೋಕ ೧, ೨೦೦೮, ಪುಟ ೪)

ಸಾಮಾನ್ಯವಾಗಿ ಕರ್ನಾಟಕದ ಎಲ್ಲೆಡೆ ನೀರಿನ ಸಮೃದ್ಧಿ ಮತ್ತು ಜೌಗು ಇರುವಲ್ಲೆಲ್ಲಾ ಕಾಣಸಿಗುವ ಹುಂಡುಕೋಳಿಗಳು, ಸುಂದರವಾಗಿಲ್ಲದ ಕಾರಣ ಸಾರ್ವತ್ರಿಕ ಔದಸೀನಕ್ಕೆ ಗುರಿಯಾಗಿವೆ. ಅಲ್ಲದೆ ಅಪರೂಪವಲ್ಲದಿದ್ದರೂ ಯಾರಿಗೂ ಯಾವತ್ತೂ ವಿವರವಾಗಿ ನೋಡಲು ಈ ಹಕ್ಕಿ ಕಾಣಸಿಗುವುದೇ ಇಲ್ಲ. ಏಕೆಂದರೆ ಇವು ಮನುಷ್ಯರು ಕಾಣುತ್ತಿದ್ದಂತೆಯೇ ಪೊದೆಗಳೆಡೆಯಲ್ಲಿ ಅಡಗಿಕೊಳ್ಳುತ್ತವೆ. ಇಂತಹ ಔದಾಸೀನ ಪಕ್ಷಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ, ಅವುಗಳ ಚಹರೆ, ದಿನಚರಿ ತಿಳಿಸುವ ತೇಜಸ್ವಿಯವರಲ್ಲಿ ಜೀವವೈವಿಧ್ಯಗಳ ಬಗೆಗಿನ ಆಸಕ್ತಿ ಅವುಗಳನ್ನು ಉಳಿಸಿ-ಬೆಳೆಸುವ ಶ್ರದ್ಧೆ ಕಾಣುತ್ತದೆ. ಇದೇ ಹುಂಡುಕೋಳಿಗಳನ್ನು ಹಕ್ಕಿ-ಪಿಕ್ಕಿಯವರು ಶಿಕಾರಿ ಮಾಡುತ್ತಿರುವುದನ್ನು ಕಂಡು, ಅದನ್ನು ತಪ್ಪಿಸಲು ಹೆಣಗಾಡುವುದು ಅವರು ಪರಿಸರ ರಕ್ಷಣೆಗೆ ಮಾಡುವ ಏಕಾಂಗಿ ಹೋರಾಟವೆನ್ನುವಂತೆ ಭಾಸವಾಗುತ್ತದೆ.

ಬೇಟೆ ಮುಗಿಸಿ ಹಕ್ಕಿ ಪಿಕ್ಕಿಯವರು ತಮ್ಮ ಚೌಕಟ್ಟುಗಳ ರಾಶಿ ಹೊತ್ತುಕೊಂಡು ಬರುವುದಂತೂ ಹೃದಯ ವಿದ್ರಾವಕ ಎನಿಸುತ್ತದೆ. "ಪ್ರತಿಯೊಬ್ಬರ ಬಗಲಿನಲ್ಲೂ ಹತ್ತಾರು ಸತ್ತ ಹುಂಡುಕೋಳಿಗಳ ಗೊಂಚಲುಗಳು ನೇತಾಡುತ್ತಿದ್ದವು. ಒಳ್ಳೆಯ ಶಿಕಾರಿ ಆಯ್ತೆಂಬ ವಿಜಂಗೋನ್ಮಾದದಲ್ಲಿದ್ದರು. ನನ್ನ ತೋಟದ ಬೇಲಿಗೆ ಉರುಳು ಕಟ್ಟಿದವರು. ಈ ಬಡ್ಡಿ ಮಕ್ಕಳೇ ಇರಬೇಕೆಂದು ಮೊದಲೇ ಗುಮಾನಿ ಇದ್ದ ನನಗೆ ಇವರು ನಡೆಸಿರುವ ಕಗ್ಗೊಲೆ ನೋಡಿ ವಿಪರೀತ ಸಿಟ್ಟು ಬಂತು. ಈ ಅಯೋಗ್ಯರಿಗೆ ಬಯ್ದು ಜಗಳವಾಡಿ ಏನೂ ಪ್ರಯೋಜನವಿಲ್ಲ. ಇವರ ಹುಟ್ಟುಗುಣ ಸುಟ್ಟರೂ ಹೋಗುದಿಲ್ಲ" (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೫) ಎಂದು ತೀರ್ಮಾನಿಸಿ ಅರಣ್ಯ ಇಲಾಖೆಯ ರೇಂಜರ್ ನಾಗರಾಜನಿಗೆ ಇದನ್ನು ಮನವರಿಕೆ ಮಾಡಲು ಪ್ರಯತ್ನಿಸುತ್ತಾರೆ. ನಾಗರಾಜನಿಗೆ ಹಕ್ಕಿ ಪಿಕ್ಕಿಯವರು ಮಾಡುತ್ತಿರುವುದು ಅಕ್ಷಮ್ಯ ಅಪರಾಧ ಅನ್ನಿಸುವುದಿಲ್ಲ.

"ಹುಟ್ಟಿದ ಸಕಲ ಜೀವಜಂತುಗಳೂ ಒಂದಲ್ಲ ಒಂದು ದಿನ ಯಾವುದೇ ಕಾರಣದಿಂದ ಸತ್ತೇ ಸಾಯುತ್ತವೆ. ಅಂಥದರಲ್ಲಿ ಹಕ್ಕಿ-ಪಿಕ್ಕಿಯವರು ನಾಲ್ಕು ಹುಂಡುಕೋಳಿಗಳನ್ನು ಹಿಡಿದು ತಿಂದರೆ ತಪ್ಪೇನು? ತಲೆ ತಲೆ ಮಾರುಗಳಿಂದ ಅವರು ಅದೇ ಕುಲಕಸುಬು ಮಾಡಿಕೊಂಡು ಬಂದಿದ್ದಾರೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೫) ಎಂಬುದು ನಾಗರಾಜನ ಯೋಚನೆ. ಈತ ವಾಸ್ತವವಾಗಿ ಪರಿಸರ ಕಾಳಜಿ ಹಾಗೂ ಪರಿಸರ ರಕ್ಷಣೆಗಾಗಿಯೇ ಸರ್ಕಾರದಿಂದ

ನಿಯೋಜಿಸಲ್ಪಟ್ಟ ವ್ಯಕ್ತಿ. ಆದರೆ, ಆತನಿಗೆ ಹುಂಡು ಕೋಳಿಗಳ ಬೇಟೆ ಸಾಮಾನ್ಯ ಸಂಗತಿ ಎನಿಸುವುದು. ವರ್ತಮಾನದ ವ್ಯವಸ್ಥೆಯ ವಿಡಂಬನೆಯಾಗಿದೆ. ಸಾಮಾನ್ಯ ವ್ಯಕ್ತಿಯೊಬ್ಬ ಪರಿಸರ ಕಾಳಜಿ ತೋರುವುದು, ಅದಕ್ಕೆ ಅರಣ್ಯ ಇಲಾಖೆಯ ತಾತ್ಸಾರ ನೋಟ, ವರ್ತಮಾನದ ಸಂದರ್ಭದಲ್ಲಿ ಪರಿಸರ ಜಾಗೃತಿ ಬಗ್ಗೆ ಇಲಾಖೆಯವರಿಗೇ ಕಾಳಜಿ ಇಲ್ಲದಿರುವುದನ್ನು ತೋರುತ್ತದೆ. ಅಲ್ಲದೆ, ಕಾಡಿನ ರೇಜಂರು ಲೇಖಕರ ಒತ್ತಾಯಕ್ಕೆ ಮಣಿದು, ಹಕ್ಕಿ ಪಿಕ್ಕಿಯವರ ಗುಡಾರಗಳಿಗೆ ಹೋಗಿ ಅವರೊಡನೆ ವಾಗ್ವಾದಕ್ಕಿಳಿದು ಜೋರು ಮಾಡುವ ಸನ್ನಿವೇಶದಲ್ಲಿ ಲೇಖಕರು ಆಕಸ್ಮಿಕವಾಗಿ ಅವರ ದೈನ್ಯಾವಸ್ಥೆ ನೋಡಿ ಮರುಕಪಡುತ್ತಾರೆ.

"ಅಲ್ಲೆಲ್ಲಾ ಮುಂಗುಸಿ, ನರಿ, ಉಡು ಮೊದಲಾದ ಚಿಕ್ಕಪುಟ್ಟ ಕಾಡು ಪ್ರಾಣಿಗಳ ಚರ್ಮ ಮೂಳೆ ಇತ್ಯಾದಿ ಅವಶೇಷಗಳು ಚೆದುರಿಕೊಂಡು ಬಿದ್ದಿದ್ದವು. ಪುಕ್ಕ ತಿಪ್ಪುಳಸಿ ವಿಕಾರವಾಗಿದ್ದ ಹುಂಡುಕೋಳಿಗಳು ಒಂದಷ್ಟು ಬಿದ್ದಿದ್ದವು. ಮಣ್ಣಿನಲ್ಲಿ ಓಣಿ ತೋಡಿ ಒಲೆ ಮಾಡಿಕೊಂಡಿದ್ದರು. ಅದರ ಮೇಲೊಂದು ಚಕ್ಕುಬಿದ್ದು ವಿಕಾರವಾಗಿದ್ದ ಅನ್ನವೋ ಗಂಜಿಯೋ ಕುದಿಯುತ್ತಾ ಇತ್ತು. ಮೂಗಿನಲ್ಲಿ ಸಿಂಬಳ ಸುರಿಸುತ್ತಾ ಕುಳಿತಿದ್ದ ಮೂರು ಜನ ಮಕ್ಕಳು ನಮ್ಮ ಗಲಾಟೆಯನ್ನು ಮುಗ್ಧ ಕಣ್ಣುಗಳಿಂದ ನಿಟ್ಟಿಸುತ್ತಾ ಇದ್ದರು. ಅವರ ದೈನ್ಯಾವಸ್ಥೆ ಕೃಶ ಶರೀರ ಹರಕಲು ಬಟ್ಟೆ ಇವನ್ನೆಲ್ಲಾ ನೋಡಿ, ನನಗೆ ಅವರ ಮೇಲಿನ ಸಿಟ್ಟೆಲ್ಲಾ ಸಂಪೂರ್ಣ ಇಳಿದುಹೊಯ್ತು. ಅವರ ಸ್ಥಿತಿ ನಾಶವಾಗುತ್ತಿರುವ ವನ್ಯ ಜೀವಿಗಳಿಗಿಂತ ಭಿನ್ನವಾಗೇನೂ ನನಗೆ ಕಾಣಲಿಲ್ಲ." (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೩) ಇದು ತೇಜಸ್ವಿ ಅವರು ಬದುಕನ್ನು ಅರಿಯುವ ಕ್ರಮಕ್ಕೆ ಉತ್ತಮ ದೃಷ್ಟಾಂತವಾಗಿದೆ.

ಹಕ್ಕಿ-ಪಿಕ್ಕಿಯವರಿಂದ ಹುಂಡುಕೋಳಿ ನಾಶವಾಗುತ್ತಿರುವುದರಿಂದ ಅವರ ಮೇಲೆ ಕೋಪಗೊಂಡ ಲೇಖಕರು, ಕಂಪ್ಲೆಂಟು ಕೊಟ್ಟು ಪರಿಸರ ಪ್ರಜ್ಞೆ ತೋರುತ್ತಾರೆ. ಹಾಗೆಯೇ ಅವರ ದೈನ್ಯಸ್ಥಿತಿಯನ್ನು ಕಣ್ಣಾರೆ ಕಂಡು ಮರುಕ ವ್ಯಕ್ತಪಡಿಸುತ್ತಾರೆ. ಈ ಬಗೆಯ ಜಿಜ್ಞಾಸೆ, ಸರಿತಪ್ಪುಗಳ ದ್ವಂದ್ವ, ನಿಸರ್ಗದ ಸಮತೋಲನ, ಜೀವ ವೈವಿಧ್ಯದ ಮಹತ್ವವನ್ನು ಅನಾವರಣಗೊಳಿಸುತ್ತಲ್ಲೇ ಅವರ ಚಿಂತನೆಯು 'ನಾಶವಾಗುತ್ತಿರುವ ವನ್ಯ ಜೀವಿಗಳಿಂದ ಭಿನ್ನ'ವಾಗಿಲ್ಲದ ಹಕ್ಕಿ ಪಿಕ್ಕಿಯವರ ಅವಸ್ಥೆಗೆ ಮರುಗುವ ಕಡೆಗೆ ಜಿಗಿಯುತ್ತದೆ. ಇದೇ ತೇಜಸ್ವಿ ಕಥನದ ವೈಶಿಷ್ಟ್ಯ.

ಹಕ್ಕಿ ಪಿಕ್ಕಿಯವರು ಒಂದಷ್ಟು ಹುಂಡು ಕೋಳಿಗಳನ್ನು ಹಿಡಿದು ಕೊಂದಿರಬಹುದು. ಆದರೂ ಅವು ಮತ್ತೆ ಮೊಟ್ಟೆ ಇಟ್ಟು ಮರಿ ಮಾಡಿ ವೃದ್ಧಿಯಾಗುವುದರಿಂದ ಎಂದಿನಂತೆಯೇ ಜೌಗಿನಲ್ಲಿ ಅವನ್ನು ನೋಡಬಹುದು ಎಂದು ಹೊರಟ ಲೇಖಕರಿಗೆ, ಅವರು ಊಹೆ ಸುಳ್ಳಾಗಿರುತ್ತದೆ. "ಅವರು ಎಷ್ಟೊಂದು ಸರ್ವಸಮರ್ಥವಾಗಿ ಬೇಟೆಯಾಡಿದ್ದರೆಂದರೆ ಆ ಜೌಗಿನಲ್ಲಿ ಒಂದೇ ಒಂದು ಹುಂಡುಕೋಳಿಯ ಪಿಳ್ಳೆಯೂ ಉಳಿದಿರಲಿಲ್ಲ. ಒಂದಷ್ಟು ಗೀಜುಗಗಳು ಗೂಡುಕಟ್ಟಲು ಆ ಜೌಗಿನಲ್ಲಿ ಬೆಳೆಯುವ ಜೊಂಡಿನ ನಾರನ್ನು ಸೀಳಿಕೊಂಡು ಒಯ್ಯುತ್ತಿದ್ದುದನ್ನು ಬಿಟ್ಟರೆ ಮತ್ತೆ ಯಾವುದೇ ಜೀವಿಯೂ ಅಲ್ಲಿರಲಿಲ್ಲ. ಕೊನೆ ಪಕ್ಷ ಬೇರಲ್ಲಿಂದಲಾದರೂ ಒಂದೆರೆಡು ಹುಂಡುಕೋಳಿಗಳು ಜೌಗಿನ ಆಕರ್ಷಣೆಗೆ ಇಲ್ಲಿಗೆ ವಲಸೆ ಬರಬಹುದು ಎಂದು ಯೋಚಿಸಿದ್ದೆ. ಅನೇಕ ದಿನಗಳು ಕಳೆದರೂ ಅಲ್ಲಿಗೆ ಯಾವು ಬರಲಿಲ್ಲ. ಆ ಪರಿಸರದಲ್ಲಿ ಅವು ನಿಜಕ್ಕೂ ನಿರ್ನಾಮವಾಗಿದ್ದವು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೬) ಪರಿಸರ ರಕ್ಷಣೆ ಎಂಬುದು ಒಂದು ಸ್ವಯಂ ಸಂಪೂರ್ಣವಾದ ಪ್ರತ್ಯೇಕವಾದ ಆಸಕ್ತಿಯ ಕ್ಷೇತ್ರವಾಗಿರುವುದು ಸಾಧ್ಯವಿಲ್ಲ. ಅದು ನಮ್ಮ ದೈನಂದಿನ ಬದುಕಿನೊಂದಿಗೆ ನಿಕಟ ಸಂಬಂಧ ಹೊಂದಿದೆ.

ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಮಸ್ಯೆಗಳಿಗೆ ಮುಖಾಮುಖಿಯಾಗಿಯೇ ಪರಿಸರ ರಕ್ಷಣೆಯನ್ನೂ ಕುರಿತು ಆಲೋಚಿಸಬೇಕು ಪರಿಸರ ರಕ್ಷಣೆಯ ಜೊತೆಗೆ ಅಂತರ್ಗತವಾಗಿರುವ ಜೀವ ವೈವಿಧ್ಯ ನಾಶ, ಇಂಧನ ಅಪವ್ಯಯ, ಪ್ಲಾಸ್ಟಿಕ್‌ನ ಅತಿಯಾದ ಬಳಕೆಯ ಅಂಶಗಳನ್ನು ಅರ್ಥಮಾಡಿಕೊಳ್ಳಬೇಕು. ಪರಿಸರ ಹಾಗೂ ಇವುಗಳ ನಡುವಿನ ಅಂತರ್ ಸಂಬಂಧ ಮನವರಿಕೆಯಾಗುತ್ತದೆ. ಇಲ್ಲದಿದ್ದರೆ 'ಪ್ರಕೃತಿಯನ್ನು ಮಣಿಸುವ ಹಾಗೂ ಅದರ ಮೇಲೆ ವಿಜಯಸಾಧಿಸ ಹೊರಡುವ ಭಾವುಕ ಕಲ್ಪನೆ ಎಲ್ಲವೂ ಅವನಿಗೇ ವ್ಯತಿರಿಕ್ತವಾಗಿ ಸಂಕಷ್ಟಕ್ಕೆ ಗುರಿಯಾಗುವ ದಿನಗಳು ದೂರದಲ್ಲಿಲ್ಲ' ಎಂಬ ಪ್ರಜ್ಞೆಯ ಹೊಸ ಹೊಳಹು ತೇಜಸ್ವಿ ಕಥನಗಳಲ್ಲಿ ಸಾಂದ್ರವಾಗಿದೆ. ಮನುಷ್ಯ ಈ ಬಗೆಯ ಮಿತಿಮೀರಿದ 'ಕೊಳ್ಳುಬಾಕ ಪ್ರವೃತ್ತಿ'ಯಿಂದ ನಿಸರ್ಗ ತನ್ನ ಸಹಜತೆಯನ್ನು ಕಳೆದುಕೊಳ್ಳುತ್ತಿದೆ. ಹವಾಮಾನ ವೈಪರೀತ್ಯ, ಬರಗಾಲ, ಕ್ಷಾಮ ಇತ್ಯಾದಿ ಭೀಕರ ಘಟನೆಗಳಿಗೆ ಸಾಕ್ಷಿಯಾಗುತ್ತಿದೆ. ಹವಾಮಾನ ವೈಪರೀತ್ಯದಿಂದ ನೀರಿನ ತೀವ್ರ ಸಮಸ್ಯೆ, ಬಯಲು ಸೀಮೆಗಳಿಗಷ್ಟೇ ಅಲ್ಲದೇ ಸದಾ ನೀರಿನ ಒರತೆಗಳಿಂದ ತುಂಬಿರುವ ಮಲೆನಾಡಿಗೂ ವ್ಯಾಪಿಸಿರುವುದು. ಪರಿಸರ ಮನುಷ್ಯನಿಗೆ

ನೀಡುತ್ತಿರುವ ಎಚ್ಚರಿಕೆ ಎಂಬ ಅಂಶವನ್ನು ತೇಜಸ್ವಿ ತಮ್ಮ 'ಮಾಯಲೋಕ'ದಲ್ಲಿ ಸ್ಪಷ್ಟಪಡಿಸಿದ್ದಾರೆ.

"ಅಲ್ಪ ಸ್ವಲ್ಪ ನೀರಿದ್ದ ಕೊಳವೆ ಬಾವಿಗಳ ಬಳಿ ಕೊಡ ಇಟ್ಟುಕೊಂಡು ಕುಳಿತ ಹೆಂಗಸರು ನೀರಿಗಾಗಿ ಜುಟ್ಟು ಹಿಡಿದುಕೊಂಡು ಜಗಳವಾಡುತ್ತಿರುವ ದೃಶ್ಯ ಬಸ್ಸಿನಲ್ಲಿ ಸಾಗುವ ಪ್ರಯಾಣಿಕರಿಗೆ ಸರ್ವೇ ಸಾಮಾನ್ಯವಾಗಿ ಕಾಣುತ್ತಿತ್ತು. ಬಯಲು ಸೀಮೆಯಲ್ಲಿದ್ದ ಅಡಕೆ ಮತ್ತು ತೆಂಗಿನ ತೋಟಗಳಲ್ಲಿ ಬಹಳಷ್ಟು ಒಣಗಿ, ತೋಟ ಖಾಲಿ ಕಂಬಗಳ ಸಮೂಹದಂತೆ ಕಾಣುತ್ತಿತ್ತು. ಸಂಶೋಧನಾ ಕೇಂದ್ರದ ಸೈಂಟಿಸ್ಟ್ ಪ್ರೊಫೆಸರ್ ಮೂರ್ತಿ, 'ಅನೇಕ ಶತಮಾನಗಳಿಂದ ಶೇಖರವಾಗಿದ್ದ ಅಂತರ್ಜಲವನ್ನೆಲ್ಲಾ ಸಿಕ್ಕಾಪಟ್ಟೆ ಗುಂಡಿ ಕೊರೆದು ಯದ್ವಾತದ್ವಾ ಉಪಯೋಗಿಸಿದ್ದೇವೆ. ಅಂತರ್ಜಲಕ್ಕೆ ಆಗಿರುವ ಹಾನಿ ಒಂದೆರಡು ಮಳೆಗಾಲದಿಂದ ರಿಪೇರಿಯಾಗುತ್ತದೆ ಎಂದು ಖಂಡಿತಾ ತಿಳಿಯಬೇಡಿ ಎಂದು ರೈತರಿಗೆ ಕಟುವಾಗಿಯೇ ಎಚ್ಚರಿಸಿದರು. ಇನ್ನೂರಡಿ ಮುನ್ನೂರಡಿ ಗುಂಡಿ ತೆಗೆಸಿ ಕೊಳವೆ ಇಳಿಸಿದ್ದ ರೈತರು ಸಹ ನಾಲ್ಕು ಬೋಗಸೆ ನೀರು ಎತ್ತುವುದರೊಳಗೇ ಬಾವಿ ಖಾಲಿಯಾಗಿದ್ದನ್ನು ನೋಡಿ ಹೌಹಾರಿದ್ದರು. ಆದರೆ ಬರದ ಬಿಸಿ ಕೇವಲ ಬಯಲು ಸೀಮೆಗೆ ಮಾತ್ರ ಪರಿಮಿತವಾಗಿರಲಿಲ್ಲ. ನಿಧಾನವಾಗಿ ಮಲೆನಾಡಿನಲ್ಲಿ ಗುಡ್ಡದ ಕಣಿವೆಗಳ ದಟ್ಟ ಕಾಡಿನಿಂದ ಹರಿದು ಬರುತ್ತಿದ್ದ ಝರಿ, ತೊರೆ, ಹಳ್ಳಗಳ ನೀರು ಕಡಿಮೆಯಾಗಲು ಶುರುವಾಯ್ತು. ಕರ್ನಾಟಕದ ಎಲ್ಲ ಜೀವ ನದಿಗಳೂ ಹುಟ್ಟುವ ಇಲ್ಲಿ ನೀರಿನ ಒರತೆಗಳೆಲ್ಲಾ ಬತ್ತಿ ಜಲದ ಸೆಲೆ ಅಂತರ್ಧಾನವಾಗುತ್ತದೆ ಎಂದು ಯಾರೂ ಊಹಿಸಿರಲಿಲ್ಲ".(ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೩೨)

ಪರಿಸರ ಸಮತೋಲನದಲ್ಲಿ ಏರುಪೇರು ಉಂಟಾದರೆ ಅದು ಯಾರೂ ಊಹಿಸಿರದ ರೂಪದಲ್ಲಿ ತನ್ನ ಪ್ರಭಾವ ಬೀರುತ್ತದೆ. ಇದರಿಂದ ನಾವು ಕಲ್ಪನೆ ಮಾಡಲಾಗದಷ್ಟು ದಂಡ ತೆರಬೇಕಾಗುತ್ತದೆ. ನೀರಿನ ಸಮಸ್ಯೆ ನಿಜಕ್ಕೂ ಆತಂಕಕಾರಿ. ಜೀವಜಲದ ಕೊರತೆ, ಎಲ್ಲಾ ಜೀವಿಗಳನ್ನು ಅಗಾಧವಾಗಿ ಭಾದಿಸುತ್ತಿರುವ ಪ್ರಸ್ತುತ ದಿನಗಳಲ್ಲಿ, ತೇಜಸ್ವಿಯವರ ಈ ಎಚ್ಚರಿಕೆ ಇನ್ನಾದರೂ ಪರಿಸರ ಉಳಿಸುವಲ್ಲಿ ಪ್ರಯತ್ನಶೀಲರಾಗೋಣ ಎಂಬ ಆಶಯವಾಗಿದೆ.

ಪ್ರತಿಯೊಂದು ಜೀವಿಗೂ ಬದುಕಲು ಅದರದೇ ಆದ ಹಕ್ಕಿದೆ ಯಾವುದೇ ಜೀವಿಯನ್ನು ಅದರ ಮೂಲ ನೆಲೆಯಿಂದ ಬೇರ್ಪಡಿಸಿ ಆದರಿಂದ ತಾನು

ಸಂತೋಷ ಪಡುವ ಪ್ರವೃತ್ತಿ ಪರಿಸರಕ್ಕೆ ಮಾಡುವ ವಿಕೃತಿ. ಅವರ ಈ ಧೋರಣೆಯಲ್ಲಿ ಪರಿಸರವಾದದ ಅಂಶವಿದೆ. ಈ ಕೆಳಗಿನ ವಿವರಣೆಯಿಂದ ಅದು ನಮಗೆ ಮನವರಿಕೆ ಆಗುತ್ತದೆ.

"ಕುರೂಪಿನ ಬಾತಿನ ಮರಿಗಳು ಎಂಬಂತೆ ಅವು ಕುರೂಪವಾಗಿದ್ದವು. ಅವುಗಳ ಮೈಮೇಲೆ ಬಾತುಗಳಿಗಿರುವ ಬಣ್ಣದ ಪುಕ್ಕಗಳೊಂದು ಇರಲಿಲ್ಲ. ತೆಳು ಚರ್ಮದ ಮೇಲೆ ರೋಮಗಳಿದ್ದು ಅವು ಹಕ್ಕಿಜಾತಿಗಿಂತ ಹೆಚ್ಚಾಗಿ ಹೆಗ್ಗಣಗಳ ಮೂಷಿಕ ವರ್ಗಕ್ಕೆ ಸೇರಿದಂತೆ ಕಾಣುತ್ತಿದ್ದವು.... ಕೆರೆ ಕಾಣುತ್ತಿದಂತೆಯೇ ಅವುಗಳಲ್ಲಾದ ಪರಿವರ್ತನೆ ಅಚ್ಚರಿ ಹುಟ್ಟಿಸುವಂತಿತ್ತು. ಕೆಲವೇ ದಿನಗಳಲ್ಲಿ ಆ ಕುರೂಪಿ ಮರಿಗಳಿಗೆ ಮೈ ಮೇಲಿದ್ದ ರೋಮಗಳೆಲ್ಲಾ ಉದುರಿ ಪುಕ್ಕಗಳು ಮೂಡಲು ಶುರುವಾದವು. ಕುತ್ತಿಗೆ ಮತ್ತು ರೆಕ್ಕೆ ಮೇಲೆ ನೀಲಿನ ಬಣ್ಣದ ಪುಕ್ಕಗಳು ಮೂಡಿದವು. ಕೆರೆ ದಂಡೆಯ ಮೇಲೆ ಓಡಾಡುವ ಎಲ್ಲರೂ ಒಂದು ನಿಮಿಷವಾದರೂ ನಿಂತು ತೇಲಾಡುವ ಮೋಡಗಳಂತಿದ್ದ ಅವನ್ನು ನೋಡದೆ ಮುಂದಕ್ಕೆ ಹೋಗುತ್ತಿರಲಿಲ್ಲ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೩೨)

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ಮನುಷ್ಯನ ಬಂಧನದಲ್ಲಿದ್ದ ಬಾತಿನ ಮರಿಗಳು ಕುರೂಪವಾಗಿದ್ದು, ತಮ್ಮ ಲವಲವಿಕೆ ಕಳೆದುಕೊಂಡಿದ್ದವು. ಅದೇ ತಮ್ಮ ಮೂಲ ಸ್ಥಾನಕ್ಕೆ ಬಂದ ಕೂಡಲೇ ಅತ್ಯಂತ ಚಲನಶೀಲವಾಗಿದ್ದಲ್ಲದೇ, ನೋಡುಗರ ಕಣ್ಣುಕುಕ್ಕುವಂತೆ ತೇಲುವ ಮೋಡಗಳಾದವು. ಇದನ್ನು ಗಮನಿಸಿದಾಗ ಪ್ರಕೃತಿಯ ಮಡಿಲಲ್ಲಿ ಜೀವಿಸುವ ಯಾವುದೇ ಪ್ರಾಣಿಯಾಗಲೀ ಪಕ್ಷಿಯಾಗಲೀ ತಮ್ಮ ಪ್ರಕೃತಿಯನ್ನು ತೊರೆದು ನೆಮ್ಮದಿಯಿಂದ ಬದುಕಲಾರವು ಎಂಬ ವಾಸ್ತವ ಅರಿವಾಗುತ್ತದೆ. ಪ್ರಕೃತಿಯೇ ಅವುಗಳ ಚೈತನ್ಯದ ಕೇಂದ್ರ, ಜೀವಸೆಲೆ ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಈ ಪ್ರಾಣಿ ಪಕ್ಷಿಗಳ ಸ್ವಚ್ಛಂದಕ್ಕೆ ಹಾನಿ ಉಂಟು ಮಾಡಿ ಅಂಕೆಯಲ್ಲಿಟ್ಟುಕೊಳ್ಳಲು ಹವಣಿಸುವುದು ಕ್ರೌರ್ಯ ಎಂಬ ಧ್ವನಿ ತೇಜಸ್ವಿಯವರ ಕೃತಿಗಳಲ್ಲಿ ವ್ಯಕ್ತವಾಗಿದೆ.

ಕುವೆಂಪು ಪರಿಸರವನ್ನು ಕಂಡ ಕ್ರಮಕ್ಕೂ, ತೇಜಸ್ವಿ ಕಂಡ ಕ್ರಮಕ್ಕೂ ವ್ಯತ್ಯಾಸವಿದೆ. ತೇಜಸ್ವಿ ವಿಷಾದ ರೂಪದಲ್ಲಿ ಪರಿಸರ ನಾಶದ ಬಗೆಗೆ ಆತಂಕ ವ್ಯಕ್ತಪಡಿಸುತ್ತಾರೆ. ನಿಸರ್ಗದೊಂದಿಗಿನ ಒಡನಾಟದ ಹಂಬಲ ಇಬ್ಬರೂ ಲೇಖಕರ ಸಾಮಾನ್ಯ ಅಂಶ. ಆದರೆ, ಈ ಇಬ್ಬರೂ ಲೇಖಕರ ತಾತ್ವಿಕ ನೆಲೆಗಳು ಭಿನ್ನ

ಎಂಬುದು ಸ್ಪಷ್ಟ. ಮೊದಲೇ ಹೇಳಿದಂತೆ ಕುವೆಂಪುವಿಗೆ ಮೂಲತಃ ಪ್ರಕೃತಿ ಎನ್ನುವುದು ಶುದ್ಧ ಆನಂದದ ನೆಲೆ, ಆಧ್ಯಾತ್ಮಿಕ ಅನುಭೂತಿ ನೆಲೆ. ಆದರೆ ತೇಜಸ್ವಿಯವರ ಸಂಬಂಧ ಪರಿಸರದ ಜೊತೆಗೆ ಇನ್ನಷ್ಟು ಸೂಕ್ಷ್ಮ ಆಯಾಮ ಹೊಂದಿರುವಂತದ್ದು. ಪರಿಸರ ಪ್ರಜ್ಞೆಯ ಅರಿವು, ಪರಿಸರ ಸಂರಕ್ಷಣೆಯ ಬಗೆಗೆ ಕಾಳಜಿ ಇಲ್ಲದ ಜನರ ಬಗೆಗೆ ಆಕ್ರೋಶ, ನಿಸರ್ಗ ವಿರೂಪಗೊಳ್ಳುತ್ತಿರುವುದರಿಂದ ಆಗುತ್ತಿರುವ ಕೆಡಕಿನ ಬಗೆಗಿನ ಆತಂಕ ಇವರ ಕಥೆ ಕಾದಂಬರಿಗಳ ಮೂಲ ಚೌಕಟ್ಟಾಗಿ, ಪ್ರಮುಖ ಮಾನದಂಡವಾಗಿ ನಿಲ್ಲುತ್ತದೆ. ತೇಜಸ್ವಿ ಅವರ ಈ ವಿಷಾದದ ಧ್ವನಿ ಅವರ ಕಥನಗಳಲ್ಲಿ ಯಥೇಚ್ಛವಾಗಿದೆ. ಕುವೆಂಪು ಅವರ ಕಾಣಲಾಗದ ಜಿಜ್ಞಾಸೆಯ ಅಂಶ ಇದು.

ಕುವೆಂಪು ಅವರ ಪರಿಸರ ಪ್ರೇಮದ ಆರಾಧನಾ ಗುಣ ಹಾಗೂ ಆಧ್ಯಾತ್ಮಿಕತೆಯಿಂದಾಗಿ ಪರಿಸರ ಪ್ರಜ್ಞೆಯ ಹೊಳಹು ಮಿತಿಯಾಗಿ ಕಾಣುತ್ತದೆ. ಪರಿಸರ ಪ್ರಜ್ಞೆಯ ಆಯಾಮದ ಅಭಿವ್ಯಕ್ತಿಯ ವ್ಯಾಪ್ತಿಗೆ ನಿಲುಕುವುದಿಲ್ಲ. ಕುವೆಂಪು ಅವರ ಪರಿಸರದ ದೃಷ್ಟಿ ಕೇವಲ ಅದರ ಆಸ್ವಾದನೆ ಹಾಗೂ ಆರಾಧನೆಯ ಹಂತದಲ್ಲೇ ವರ್ಣಿತವಾಗಿರುವುದರಿಂದ ಪರಿಸರದ ರಕ್ಷಣೆಯ ಬಗೆಗೆ ಆಳವಾದ ಚಿಂತನೆಗೆ ತೊಡಗುವುದಿಲ್ಲ. ಇದಕ್ಕೆ ಕಾರಣ ವಿಶ್ಲೇಷಿಸುವುದು ಮುಖ್ಯ.

"ಕುವೆಂಪು ಪ್ರಕೃತಿ ಗೀತಗಳಲ್ಲಿ ನಾವು ಕಾಣುವುದು ಪ್ರಾಥಮಿಕ ಮಟ್ಟದ ಸೌಂದರ್ಯಾರಾಧನೆಯನ್ನಲ್ಲ, ಅವುಗಳ ಹಿಂದೆ ಕನ್ನಡಕ್ಕೆ ಹೊಸದಾದ ಒಂದು ಬಗೆಯ ತಹ ತಹ ಇದೆ. ದೈನಂದಿನ ಲಯಗಳಲ್ಲಿ ಸಾಧ್ಯವಾಗದ ಅಖಂಡತೆಯನ್ನು ಏಕಾಗ್ರತೆಯನ್ನು ಪಡೆಯುವ ತವಕವಿದೆ... ಕುವೆಂಪು ಪ್ರಕೃತಿ ದರ್ಶನದ ಹಿಂದೆ ಒಂದು ಸಂಕೀರ್ಣವಾದ ಅನೇಕ ಚಾರಿತ್ರಿಕ ಪ್ರಕ್ರಿಯೆಗಳ ಹೆಣಿಗೆಗಳು ಕೆಲಸ ಮಾಡಿರುವುದನ್ನು ನೋಡಬಹುದು" (ನಾಗರಾಜ್ ಡಿ.ಆರ್., ಶಕ್ತಿಶಾರದೆಯ ಮೇಳ, ೨೦೧೩, ಪುಟ ೬೧) ಎಂದು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಕುವೆಂಪು ಅವರ ಕಾವ್ಯದಲ್ಲಿ ಬರುವ ನಿಸರ್ಗ ಜನವಿಹಿತವಾದದ್ದು. ಅವರ ನಿಸರ್ಗದಲ್ಲಿ ಜನರಿರುವುದು ತೀರಾ ಅಪರೂಪ. ವರ್ಡ್ಸ್‌ವರ್ತ್ ಕಾವ್ಯದಲ್ಲಿ ಬಹುಜನರ ಸಮಾಜವಿದೆ ಎಂಬ ವ್ಯತ್ಯಾಸವನ್ನು ಗುರುತಿಸುತ್ತಾರೆ. ಅಲ್ಲದೇ ಪರಿಸರ ಮತ್ತು ಜನಜೀವನದ ಮೇಲೆ ಕೈಗಾರಿಕಾ ಕ್ರಾಂತಿಯಿಂದ ಉಂಟಾದ ಸಂಕಷ್ಟಗಳ ಪರಿಸ್ಥಿತಿಗೆ ತೋರಿದ ಪ್ರತಿಕ್ರಿಯೆಯಿಂದಾಗಿಯೇ ವರ್ಡ್ಸ್‌ವರ್ತ್ ಅವರ ಕಾವ್ಯದಲ್ಲಿ ಜನರಿಗೆ ಹೆಚ್ಚು ಮಹತ್ವವಿದೆಯೆನ್ನುತ್ತಾರೆ. ವರ್ಡ್ಸ್‌ವರ್ತ್ ಎದುರಿಸಿದ ಕೈಗಾರಿಕಾ

ಕ್ರಾಂತಿಯ ನಂತರ ಇಂಗ್ಲೆಂಡ್‌ನಲ್ಲಿ ಉಂಟಾದ ಪ್ರಕೃತಿವಿನಾಶದ ಆತಂಕ ಕುವೆಂಪು ಅವರಿಗೆ ಎದುರಾಗಲಿಲ್ಲ. ಅಲ್ಲಿ ವಾಸಿಸುವ ಜನರು, ಪ್ರಕೃತಿ ಹಾಗೂ ಅಲ್ಲಿ ಬದುಕುವ ಪ್ರಾಣಿ ಪಕ್ಷಿಗಳ ವಿನಾಶದ ಆತಂಕ ಕುವೆಂಪು ಅವರಿಗೆ ಎದುರಾಗಲಿಲ್ಲ. ಹಾಗಾಗಿ ಡಿ.ಆರ್. ನಾಗರಾಜ್ ಅವರ ಪ್ರಕಾರ ಕುವೆಂಪು ಅವರಿಗೆ ಪ್ರಕೃತಿಯ ಚೆಲುವೆಲ್ಲವೂ ದೈವದ ಸಾಕ್ಷಾತ್ಕಾರವೇ. ಅಂತಿಮ ಹಂತದಲ್ಲಿ ಪ್ರಕೃತಿ ಸೌಂದರ್ಯ ಮತ್ತು ದೈವಗಳೆರಡರ ನಡುವೆ ಭಿನ್ನತೆ ಕಾಣುವುದಿಲ್ಲ. ಎಂಬ ಅಂಶಗಳನ್ನು ಸಕಾರಣವಾಗಿಯೇ ಗುರುತಿಸುತ್ತಾರೆ. ಈ ಅಂಶಗಳನ್ನು ಒಪ್ಪಬಹುದು. ಆದರೆ ಪರಿಸರ ಪ್ರಜ್ಞೆಯ ಹೊಳಹು ಮಿತಿಯಾಗಿ ಕಾಣಲು ಇನ್ನೂ ಹಲವಾರು ಅಂಶಗಳನ್ನು ಗುರತಿಸಬಹುದು.

ನವೋದಯ ಕಾಲದಲ್ಲಿ ಕಾವ್ಯ ರಚನೆಗೆ ತೊಡಗಿದ ಕುವೆಂಪು ಅವರು ಇಂಗ್ಲೀಷ್ ರೋಮಾಂಟಿಕ್ ಕವಿಗಳ ದೃಷ್ಟಿಕೋನದಿಂದ ಸಹಜವಾಗಿ ಪ್ರಭಾವಿತರಾಗಿದ್ದರು. ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್, ಮುಂತಾದ ಕವಿಗಳ ಕವನಗಳಲ್ಲಿ ಕೂಡಾ ಪ್ರಕೃತಿಯ ವಿವರಗಳಲ್ಲಿ ದೈವವನ್ನು ಕಾಣುವ ಪ್ರಯತ್ನ ಮುಖ್ಯವಾಗಿದೆ. "ಇಂಗ್ಲೀಷ್ ರೊಮ್ಯಾಂಟಿಕ್ ಕಾವ್ಯದಲ್ಲಿ ನಿಸರ್ಗ, ಮರ, ಗಿಡ, ಬೆಟ್ಟ ಎಲ್ಲವೂ ದೈವವನ್ನು ಪ್ರಕಟಿಸಹತ್ತುತ್ತವೆ.

ನಿಸರ್ಗದ ಎಲ್ಲ ವಸ್ತುಗಳು ಕೂಡಾ, ಕೋಲ್‌ರಿಜ್‌ನ ಮಾತಿನಲ್ಲೇ ಹೇಳುವುದಾದರೆ 'ಆ ದೈವದ ಅನಂತ ಭಾಷೆ'ಯಿಂದ ಬಂದದ್ದು. ಇಲ್ಲಿ ಕೂಡಾ ನೋಡುತ್ತಿದ್ದ ಹಾಗೆ ಮರ, ಗಿಡ, ಬಳ್ಳಿ, ಬೆಟ್ಟ, ನೀರು, ತಮ್ಮ ಭೌತಿಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ಉತ್ಕಟ ಧಾರ್ಮಿಕ ಅನುಭವದ ವಿಶಿಷ್ಟ ರೂಪಗಳಾಗುತ್ತವೆ". (ನಾಗರಾಜ್ ಡಿ.ಆರ್., ಶಕ್ತಿಶಾರದೆಯ ಮೇಳ, ೨೦೧೩, ಪುಟ ೩೩) ಹಾಗಾಗಿ ತೇಜಸ್ವಿ ಹಾಗೂ ಕುವೆಂಪು ಅವರ ಕೃತಿಗಳಲ್ಲಿ ವ್ಯಕ್ತವಾಗುವ ಪರಿಸರದ ದೃಷ್ಟಿಕೋನದ ವ್ಯತ್ಯಾಸಕ್ಕೆ ಕಾಲಘಟ್ಟದ ಸಾಹಿತ್ಯಿಕ ಪ್ರೇರಣೆಗಳೇ ಕಾರಣವಾಗಿದೆ. ಕನ್ನಡ ನವೋದಯ ಕಾವ್ಯದ ದರ್ಶನದಲ್ಲಿ ವಿಜ್ಞಾನ ಮತ್ತು ಧರ್ಮಗಳೆರಡು ಸಾಮರಸ್ಯವನ್ನು ಸಾಧಿಸಿವೆ.

"ಆಧುನಿಕ ಕನ್ನಡ ಕಾವ್ಯದ ಪ್ರಕೃತಿದರ್ಶನವನ್ನು ವಿಶ್ಲೇಷಿಸಿದರೆ ನಮಗೆ ಕಾಣಸಿಗುವುದು ಮನುಷ್ಯ ಮತ್ತು ಸಮಾಜದ ಏಕೀಕೃತ ಸ್ಥಿತಿಯೇ: ನಿಸರ್ಗಾರಾಧನೆ ಎಂದರೆ ಮೂಲತಃ ಮನುಷ್ಯ ಎಲ್ಲರದರೊಡನೆ ಸಾಧಿಸಿರುವ

ಸಾಮರಸ್ಯದ ಸ್ಥಿತಿಯ ಆರಾಧನೆಯೆ. ಕನ್ನಡ ನವೋದಯದ ಈ ತಾತ್ವಿಕ ಸೂಕ್ಷ್ಮತೆ ನಿಜಕ್ಕೂ ಅಪೂರ್ವವಾದದ್ದು. ಈ ಅಂಶದ ವಿಶ್ಲೇಷಣೆಗೆ ನಾವು ಹಿರಿಯ ನವೋದಯ ಕವಿಗಳ ಯಾವುದೇ ಶ್ರೇಷ್ಟ ಕವನವನ್ನು ತೆಗೆದುಕೊಂಡರೂ ನಡೆಯುತ್ತದೆ. ಪು.ತಿ.ನ. ಬೇಂದ್ರೆ, ಕುವೆಂಪು – ಈ ಕವಿಗಳ ಯಾವುದೇ ಶ್ರೇಷ್ಟ ನಿಸರ್ಗ ಕವನದಲ್ಲೂ ಈ ಸಾಮರಸ್ಯದ ಸ್ಥಿತಿ ಇಡೀ ಕವನವನ್ನು ಪ್ರತಿಮಾತ್ಮಕವಾಗಿ ಆವರಿಸಿರುತ್ತದೆ".(ನಾಗರಾಜ್ ಡಿ.ಆರ್., ಶಕ್ತಿಶಾರದೆಯ ಮೇಳ, ೨೦೧೩, ಪುಟ ೩೦೫)

ಅಲ್ಲದೆ, ಪ್ರಕೃತಿ ಎಂಬುದು 'ನಿತ್ಯ'. 'ನಿತ್ಯ ಶಕ್ತಿ'ಯಾದ ಪ್ರಕೃತಿಯನ್ನು ಮನುಷ್ಯ ಪ್ರಯತ್ನದಿಂದ ಸೃಷ್ಟಿಸಲೂ ಸಾಧ್ಯವಿಲ್ಲ ಹಾಗೆಯೇ ನಾಶಪಡಿಸಲೂ ಸಾಧ್ಯವಿಲ್ಲ ಎಂಬ ಧೋರಣೆ ಕುವೆಂಪು ಅವರದು. ಈ ಧೋರಣೆಯಿಂದಾಗಿ ಪರಿಸರ ಕಾಳಜಿಯ ಬಗೆಗೆ ವಿಷಯ ಕೇಂದ್ರೀಕರಿಸಲು ಸಾಧ್ಯವಾಗಿಲ್ಲ ಎನ್ನಿಸುತ್ತದೆ. ಇದನ್ನು ಅವರ ಸಾಹಿತ್ಯದ ಮಿತಿ ಎಂದು ಗುರುತಿಸುವು ತಪ್ಪಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ, ಕುವೆಂಪು ಅವರದು ಪರಿಸರದೆಡೆಗೆ ಭಾವುಕ ದೃಷ್ಟಿ. ಪರಿಸರ ಸೌಂದರ್ಯದ ಆಸ್ವಾದನಾ ಕ್ರಮಕ್ಕೆ ಉತ್ತಮ ಮಾದರಿಯಾಗಿದೆ. ತೇಜಸ್ವಿ ಅವರ ಬಹುತೇಕ ಕೃತಿಗಳಲ್ಲಿ ಚಿತ್ರಿತವಾಗಿರುವ ಪರಿಸರ ವೈಜ್ಞಾನಿಕ ಹಾಗು ವೈಚಾರಿಕ ತರ್ಕದಿಂದ ಕೂಡಿರುವಂತಹದ್ದು. ಈ ಕೃತಿಗಳ ಮೂಲಕ ಪರಿಸರದ ದೊಡ್ಡ ಪ್ರಶ್ನೆಯನ್ನು ಅನಾವರಣಗೊಳಸುತ್ತಾರೆ. ಕುವೆಂಪು ಸಾಹಿತ್ಯದಲ್ಲಿರುವಂತೆ ಅಗಾಧ ಜೀವಜಾಲಗಳ ಹೆಣಿಗೆಯನ್ನು, ಅವುಗಳ ನಡುವಿನ ಬಂಧ, ಸೃಷ್ಟಿ ವೈಚಿತ್ರಗಳನ್ನು ವರ್ಣಿಸುತ್ತಾ, ಅರಣ್ಯನಾಶ, ಪರಿಸರ ಅಸಮತೋಲನಗಳಗೆ ಕಾರಣಗಳನ್ನು ವಿವೇಚಿಸುತ್ತಾ ವಿಶ್ಲೇಷಿಸುತ್ತಾ ಸಾಗುವ ತೇಜಸ್ವಿ ಕಥನಗಳು ವರ್ತಮಾನಕ್ಕೆ ಹೆಚ್ಚು ಪ್ರಸ್ತುತವಾಗುತ್ತವೆ. ತೇಜಸ್ವಿಯವರ ಪರಿಸರದೆಡೆಗಿನ ದೃಷ್ಟಿ ಅದನ್ನು ಉಳಸುವ ದಿಸೆಯಲ್ಲಿ ಪರಿಹಾರ ಮಾರ್ಗದ ಸೂಚನೆ ನೀಡುತ್ತದೆ. ಜೊತೆಗೆ ಪರಿಸರವನ್ನು ಹೀಗೂ ಅವಲೋಕಿಸಬಹುದು, ಪ್ರೀತಿ ಮೂಡಿಸಿಕೊಳ್ಳಬಹುದು ಎಂಬ 'ಮಾದರಿ' ಆಗಿದೆ. ಕುವೆಂಪುರವರ ಪರಿಸರ ಪ್ರೀತಿ ತೇಜಸ್ವಿಯವರಲ್ಲಿ ವೈಜ್ಞಾನಿಕವಾಗಿ ವಿಕಾಸಹೊಂದಿದೆ. ತೇಜಸ್ವಿಯರಿಗೆ ಪರಿಸರದ ಬಗೆಗಿನ ಕುತೂಹಲವು ಬದುಕನ್ನು ಅರಿಯುವ ಒಂದು ಜೀವಂತ ಕ್ರಮ ಹಾಗೂ ನೈಜ ಮಾರ್ಗವಾಗಿದೆ. ಈ ಬಗೆಯ ಪರಿಸರ ಪ್ರಜ್ಞೆಯ ಅಂಶದಿಂದ ತೇಜಸ್ವಿ ಪರಿಸರದ ಪ್ರತಿನಿಧಿಯಾಗುತ್ತಾರೆ. ಕುವೆಂಪುರವರಿಗಿಂತ ಮುಖ್ಯವಾಗುತ್ತಾರೆ.

# ಅಧ್ಯಾಯ – ೫

# ಆಧುನಿಕತೆಯ ಅನುಸಂಧಾನದ ನೆಲೆಗಳು

ಹೊಸ ಪರಂಪರೆಗಳ ಪ್ರವೃತ್ತಿಗಳು ಇಪ್ಪತ್ತನೇ ಶತಮಾನದ ವಿಶೇಷತೆಯಾಗಿದೆ. ಔದ್ಯೋಗಿಕರಣ, ನಗರೀಕರಣ, ಜಾಗತೀಕರಣ ಮುಂತಾದ ಸಮಾಜದಲ್ಲಾಗುವ ಪರಿವರ್ತನೆಗಳೆಲ್ಲ ಸೇರಿ 'ಆಧುನಿಕರಣ'ಕ್ಕೆ ಕಾರಣವಾಗುತ್ತದೆ. 'ಆಧುನಿಕತೆ' ಎಂಬ ಶಬ್ದವು, ವಿಶಾಲವಾದ ಅರ್ಥವನ್ನು ಪಡೆದುಕೊಳ್ಳುತ್ತದೆ. ಅದನ್ನು ವ್ಯಾಖ್ಯಾನರೂಪದಲ್ಲಿ ಸಂಗ್ರಹಿಸಿ ಹೇಳುವುದು ಕಷ್ಟ. ನವೀನತೆ, ನವ್ಯತೆ ಎಂಬ ಅರ್ಥದಲ್ಲಿ ಬಳಕೆಯಾಗುವ ಆಧುನಿಕತೆ ಎಂಬ ಪದವು ಗ್ರಾಮೀಣವಲ್ಲದ್ದು, ನಗರಕ್ಕೆ ಸೇರಿದ್ದು, ವೈಜ್ಞಾನಿಕವಾದದ್ದು ಎಂಬರ್ಥದಲ್ಲೂ ಬಳಕೆಯಾಗುತ್ತಿದೆ. ಸಮಕಾಲೀನ ಸಂಗತಿಗಳಿಗೆ ಒಪ್ಪದ, ಒಗ್ಗದ ಸಂಪ್ರದಾಯಗಳನ್ನು ತಿರಸ್ಕರಿಸುವುದು ಹಾಗೂ ಸಾರಸಗಟಾಗಿ ತಿರಸ್ಕರಿಸದೆ ಅದರೊಳಗೆ ಇರುವ ಜೀವಪರ ಮೌಲ್ಯಗಳನ್ನು ಹೊರತೆಗೆದು ಪರಿಷ್ಕರಿಸುವುದು ಎಂಬ ಅರ್ಥದಲ್ಲೂ 'ಆಧುನಿಕತೆ'ಯು ಬಳಕೆಯಾಗುತ್ತದೆ. ಹಾಗಾಗಿ ಆಧುನಿಕತೆ ನಿರಂತರವಾದ ಪ್ರಕ್ರಿಯೆ.

ವಸಾಹತುಶಾಹಿಯ ಆಗಮನದಿಂದ ಸಂದರ್ಭದಲ್ಲಿ ಉಂಟಾದ ಆಧುನಿಕತೆ ಹಾಗೂ ಸ್ವಾತಂತ್ರ್ಯಾನಂತರ ಉಂಟಾದ ಆಧುನಿಕತೆ ಈ ಎರಡು ಬಗೆಯ ಮುಖಗಳನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥೆ ಕಾದಂಬರಿಗಳ ಪ್ರಧಾನ ಭಿತ್ತಿ 'ಮಲೆನಾಡಿನ ಪರಿಸರ'. ಪಶ್ಚಿಮದ ಸೆರಗಿನಲ್ಲಿ ಹಬ್ಬಿರುವ ಮಲೆನಾಡು ಬೆಟ್ಟ ಗುಡ್ಡಗಳಿಂದಲೂ ದಟ್ಟವಾದ ಅರಣ್ಯಗಳಿಂದಲೂ ಸುತ್ತುವರೆದಿದ್ದು ರಸ್ತೆ ವಾಹನಗಳು ಇಲ್ಲದೆ, ಬಾಹ್ಯ ಸಂಪರ್ಕದಿಂದ ದೂರ ಉಳಿದ ಪ್ರಾಂತ್ಯವಾಗಿತ್ತು. ಇದು ಒಂದು ನೂರು ವರ್ಷಗಳ ಹಿಂದೆ ಇದ್ದ ಭೌತಿಕ ಸ್ವರೂಪ. ಶ್ರಮ ಸಂಸ್ಕೃತಿಯೇ ಪ್ರಧಾನವಾಗಿದ್ದ ಈ ಪರಿಸರ ಅನ್ಯಸಂಪರ್ಕದಿಂದ ದೂರವಾಗಿ ತನ್ನದೇ ಆದ ಅನನ್ಯತೆಯನ್ನು ಸ್ಥಾಪಿಸಿಕೊಂಡಿತ್ತು. ಹೀಗೆ ನಿಸರ್ಗದ ಮಡಿಲಿನಲ್ಲಿ ಸಹಜವಾದ ಬದುಕಿಗೆ ವಸಾಹತುಶಾಹಿ ಪ್ರಭುತ್ವದೊಂದಿಗೆ, ಆಗಮಿಸಿದ 'ಆಧುನಿಕತೆ'ಯು ಅನೇಕ ಪಲ್ಲಟಗಳಿಗೆ ಕಾರಣವಾಗುತ್ತದೆ.

೨೦ನೇ ಶತಮಾನದ ಆರಂಭದ ಕಾಲಘಟ್ಟದಲ್ಲಿ ಸಾಹಿತ್ಯ ಕೃಷಿ ಪ್ರಾರಂಭಿಸಿದ ಕುವೆಂಪು ಅವರ ಕೃತಿಗಳಲ್ಲಿ ಆಗತಾನೆ ಕಾಲಿಡುತ್ತಿದ್ದ 'ಆಧುನಿಕತೆ'ಯ ಆಗಮನ,

ಅದರ ಸೆಳೆತ ಸಂಭ್ರಮಗಳ ಜೊತೆಗೆ ಅದರ ಸಂಸರ್ಗದಿಂದ ಮಲೆನಾಡಿನ ಪರಂಪರಾಗತ ಸಂಪ್ರದಾಯ, ನಂಬಿಕೆಗಳೊಂದಿಗೆ ಏರ್ಪಡುವ ತಿಕ್ಕಾಟ, ಸ್ಥಿತ್ಯಂತರಗಳನ್ನು ಕಾಣಬಹುದು. ಆದರೆ, ತೇಜಸ್ವಿ ಸಾಹಿತ್ಯಕೃಷಿ ನಡೆಸುವ ವೇಳೆಗೆ 'ಜಾಗತೀಕರಣ' 'ನಗರೀಕರಣ'ಗಳು ತೀವ್ರಗತಿಯ ಬದಲಾವಣೆ ಉಂಟುಮಾಡಿದ್ದ ಕಾಲಘಟ್ಟ. ಇವರ ಕೃತಿಗಳಲ್ಲಿ ಆಧುನಿಕತೆಯಡೆಗೆ ಸಂಭ್ರಮ-ತುಡಿತ ಇಲ್ಲದಿದ್ದರೂ 'ಆಧುನಿಕತೆ'ಯನ್ನು ವಿರೋಧಿಸುವ ಅಂಶವಿಲ್ಲ. ಆದರೆ ಆಧುನಿಕತೆಯ ಪ್ರಭಾವದಿಂದ ಆಗುತ್ತಿರುವ ಅವಾಂತರಗಳನ್ನು ಸಂಘರ್ಷಗಳನ್ನು, ಸಂಸ್ಕೃತಿ ನಾಶದಂತಹ ಗಂಭೀರ ಅಂಶಗಳ ಮೇಲೆ ಹೆಚ್ಚಿನ ಗಮನ ಕೇಂದ್ರಿಕರಿಸಿವೆ. ಪ್ರಸ್ತುತ ಅಧ್ಯಾಯದಲ್ಲಿ ಈ ಇಬ್ಬರೂ ಲೇಖಕರ ಕತೆ-ಕಾದಂಬರಿಗಳಲ್ಲಿ ವ್ಯಕ್ತವಾಗಿರುವ 'ಆಧುನಿಕತೆ'ಯ ಸ್ವೀಕಾರ ಮತ್ತು ನಿರಾಕರಣೆಯ ನೆಲೆಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ವಸಾಹತುಶಾಹಿಯ ಮೂಲಕ ಆಧುನಿಕತೆಯು, ಸಾಂಪ್ರದಾಯಿಕ ಜೀವನಕ್ಕೆ ಎರಡು ರೀತಿಯಲ್ಲಿ ಕಾಲಿಟ್ಟಿತು ಎನ್ನಬಹುದು. ವಿಜ್ಞಾನ ಹಾಗೂ ಕೈಗಾರಿಕೆಗಳು ಮನುಷ್ಯನ ಭೋಗ ಜೀವನಕ್ಕೆ ಸೃಷ್ಟಿಸಿದ ವಸ್ತುಗಳ ಮೂಲಕ ಪ್ರವೇಶಿಸಿತು. ಹಾಗೂ ಮತ್ತೊಂದು ಸಾಂಸ್ಥಿಕ ರೂಪಗಳಾದ ಸ್ಕೂಲು, ಹೊಟೆಲ್ಲು, ಆಸ್ಪತ್ರೆ, ಪೊಲೀಸು, ಕೋರ್ಟು, ರಸ್ತೆ, ಬಸ್ಸು ಮುಂತಾದ ಸಾರ್ವಜನಿಕ ಸ್ಥಳಗಳ ರೂಪದಲ್ಲಿ ಪ್ರವೇಶಿಸಿತು. ಹೀಗೆ ಪ್ರವೇಶ ಪಡೆದ ಆಧುನಿಕತೆ ತನ್ನ ಆಕರ್ಷಣೆಯಿಂದ ಎಲ್ಲರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತಾ, ಸಂಪ್ರದಾಯ, ನಂಬಿಕೆ ಹಾಗೂ ಜೀವನ ವಿಧಾನವನ್ನು ಪಲ್ಲಟಿಸಿಯೋ, ಸಂಘರ್ಷ ಉಂಟಾಗುವಂತೆಯೋ ಮಾಡುತ್ತದೆ. ಇಲ್ಲವೇ ಅದರಲ್ಲಿ ಬೆರೆತು ಆ ಪರಿಸರದ ಅವಿಭಾಜ್ಯ ಅಂಗವಾಗಿ ಮಾರ್ಪಡಾಗುತ್ತದೆ. ಇದು ಆಧುನಿಕತೆಯ ವೈಶಿಷ್ಟ್ಯ. ಕುವೆಂಪು ಅವರ ಕೃತಿಗಳಲ್ಲಿ ಮಲೆನಾಡಿನ ಸಮುದಾಯಗಳು ವೈಯಕ್ತಿಕ ನೆಲೆಯಲ್ಲಿ ಆಧುನಿಕತೆ ಹಾಗೂ ಸಾಂಪ್ರದಾಯಿಕತೆ ಎರಡಕ್ಕೂ ಇಂಬುಕೊಡುತ್ತಾ ಪರಸ್ಪರ ಸಂಘರ್ಷಿಸುತ್ತಾ, ನಿರಾಕರಣೆ-ಸ್ವೀಕರಣೆ ಎಡೆ ಮಾಡುತ್ತಾ ಬಂದಿರುವುದನ್ನು ಕಾಣಬಹುದು.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಗಳು ೧೯ನೇ ಶತಮಾನದ ಕೊನೆ ೨೦ನೇ ಶತಮಾನದ ಆರಂಭ ಕಾಲಘಟ್ಟದ ಮಲೆನಾಡಿನ ಸಮಗ್ರ ಜೀವನವನ್ನು ಒಳಗೊಂಡಿರುವುದರಿಂದ 'ಆಧುನಿಕತೆ'ಯ ಆರಂಭದ ಕಾಲಘಟ್ಟವಾಗಿದೆ. ಈ ಅವಧಿಯಲ್ಲಿ ಮಲೆನಾಡ

ಪರಿಸರಕ್ಕೆ ಕಾಲಿಟ್ಟ ಕ್ರೈಸ್ತ ಮಿಷನರಿಗಳು ತಮ್ಮೊಡನೆ ಪರಿಚಯಿಸಿದ ಗಡಿಯಾರ, ಲಾಂದ್ರ, ಲ್ಯಾಂಪು, ಸೈಕಲ್ ಮುಂತಾದ ವಸ್ತುಗಳು ಮಲೆನಾಡಿನ ಜನರ ಜೀವನ ಕ್ರಮದೊಳಗೆ ಪ್ರವೇಶಿಸಿ ಸಂಚಲನ ಮತ್ತು ಒಂದು ಬಗೆಯ ನಾವೀನ್ಯತೆಯನ್ನು ತಂದವು. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಈ ಬಗೆಯ ವಸ್ತುಗಳು ದೇವಯ್ಯನಂತಹ ಯುವಕರನ್ನು ಆಕರ್ಷಿಸಲು ಪಾದ್ರಿಯ ಮೂಲಕ ಬಂದವು. ಅಂಗಳದ ನೆರಳನ್ನು ನೋಡಿ ಕಾಲನಿರ್ಣಯ ಮಾಡಿ ಆಳುಗಳನ್ನು ಕೆಲಸಕ್ಕೆ ಕರೆಯುವ ಸಂದಿಗ್ಧತೆಯನ್ನು 'ಗಡಿಯಾರ' ನಿವಾರಿಸಿದ್ದು ಬೆಟ್ಟಳ್ಳಿ ಕಲ್ಲೇಗೌಡರಿಗೆ ಸಂತಸದ ವಿಷಯ. ಹಾಗೇ ಲಾಟೀನು, ಸೈಕಲ್ ಮೊದಲಾದ ವಸ್ತುಗಳು ದುಂದುಗಾರಿಕೆ ಎಂದು ಅವರು ಮಗನ ಮೇಲೆ ಸಿಟ್ಟಾದರೂ ಅಂತರಂಗದಲ್ಲಿ ಎಲ್ಲರಂತೆ ಅವರೂ ಒಪ್ಪಿಕೊಂಡಿದ್ದರು.

ಈ ರೀತಿಯ ವಸ್ತುಗಳಿಂದ ಕೋಣೂರು, ಹಳೆಮನೆ, ಬೆಟ್ಟಳ್ಳಿ ಮನೆಗಳು ನವನಾಗರಿಕತೆಯನ್ನು ಪಡೆಯುತ್ತಿದ್ದುದು ಸುತ್ತಮುತ್ತಲಿನ ಪರಿಸರಕ್ಕೆ ಬೆರಗಿನ ಚರ್ಚೆಯ ಸಂಗತಿಯಾಗಿತ್ತು. ಬೆಟ್ಟಳ್ಳಿ ಮನೆಯವರಿಗೆ ಆಳು ಕಾಳುಗಳಿಗೆ ಇವೆಲ್ಲ ಬೆರಗಿನ ವಿಚಾರವಾದರೆ, ಹಳೆಮನೆ ಶಂಕರಪ್ಪ ಹೆಗಡೆಗೆ ಕಿಲಸ್ತರ ಪಾದ್ರಿಗಳು ಕೊಟ್ಟ ವಿಲಾಯಿತಿ ವಸ್ತುಗಳಾದ ಲಾಟೀನು, ತೋಟಾಕೋವಿ, ಸೀಮೆಬಿಸ್ಕತ್ತು, ಬೈಸಿಕಲ್ಲು, ಕ್ರಾಪು, ಹ್ಯಾಟು, ಬೂಟ್ಸು 'ಎಲ್ಲವೂಗಳಿಂದ ಬೆಟ್ಟಳ್ಳಿ ಮನೆ ಕುಲಗೆಟ್ಟು ಹೋಗಿದೆ' ಎಂಬ ಭಾವನೆ ಮೂಡಿಸಿತ್ತು. ಆಚಾರ, ಕಟ್ಟಳೆಗಳಲ್ಲಿ ತೀವ್ರ ಸಂಪ್ರದಾಯ ನಿಷ್ಠನೂ, ಬ್ರಾಹ್ಮಣರ ಅನುಯಾಯಿಯೂ ಆದ ಶಂಕರಪ್ಪ ಹೆಗಡೆಗೆ ತಿರುಪತಿ ಧರ್ಮಸ್ಥಳಗಳ ದೇವರಕಾಣಿಕೆ ಇಟ್ಟಿರುವ ಮನೆಯ ಒಳಕ್ಕೆ ಆ ವಸ್ತುಗಳನ್ನು ತಂದಿಟ್ಟುಕೊಳ್ಳುವುದು ಮಲೀನವಾದ ಪಾಪಕಾರ್ಯ.

ಈ ಕಾರಣದಿಂದಾಗಿ, ಬೆಟ್ಟಳ್ಳಿ ಮನೆಯವರು ಆತನ ಪಾಲಿಗೆ ಅಸ್ಪೃಶ್ಯರು. ಈ ಕಾರಣಕ್ಕೆ ಕಲ್ಲೂರು ದೇವಸ್ಥಾನಕ್ಕೆ ಹೋಗುತ್ತಿರುವ ಬೆಟ್ಟಳ್ಳಿ ಗಾಡಿಯನ್ನು ಏರಲು ಒಪ್ಪುವುದಿಲ್ಲ. ಆಧುನಿಕತೆಯ ಪ್ರಭಾವದಿಂದ ಬಂದ ಈ ಬಗೆಯ ವಸ್ತುಗಳು ಮೂಡಿಸಿದ ಆಕರ್ಷಣೆ, ಉಂಟು ಮಾಡಿದ ತಲ್ಲಣವನ್ನು ಮೀರಿ ಅವುಗಳನ್ನು ಸ್ವೀಕರಿಸುವ ಪರಿ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಅಲ್ಲದೆ ಈ ವಸ್ತುಗಳು ಮೊದಮೊದಲು ಅನೇಕ ಸಂದೇಹ ನಿರಾಕರಣೆಗೆ ಒಳಗಾದರೂ, ಬಹುಬೇಗ ಇಲ್ಲಿನ ಜೀವನ ಕ್ರಮದಲ್ಲಿ ಒಂದಾಗಿ ಸಾಮಾಜಿಕ ಮನ್ನಣೆಗೆ ಪಾತ್ರವಾದವು.

ಬೆಟ್ಟ ಗುಡ್ಡಗಳಿಂದ ಕೂಡಿದ ಪ್ರದೇಶವಾದ ಮಲೆನಾಡಲ್ಲಿ ಬಹುತೇಕರು ನಡೆದೇ ಓಡಾಡುತ್ತಿದ್ದರು. ಕಾಲು ಹಾದಿಯಲ್ಲೇ ಎಷ್ಟು ದೂರವಾದರೂ ನಡೆದು ಹೋಗುತ್ತಿದ್ದ ಪರಿಸರಕ್ಕೆ ಸೈಕಲ್ ಬಂದದ್ದು, ಅದು ಉಂಟು ಮಾಡಿದ ಸಂಚಲನವನ್ನು ಕುವೆಂಪು ಅವರು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ರೋಚಕವಾಗಿ ಚಿತ್ರಿಸಿದ್ದಾರೆ.

ಬೆಟ್ಟಳ್ಳಿ ಹಕ್ಕಲಲ್ಲಿ ಬೀಸೆಕಲ್ಲು ಸವಾರಿ ನೋಡಲು ಸುತ್ತಮುತ್ತಲು ಜನವೆಲ್ಲ ಜಮಾಯಿಸಿದ್ದರು. ಆ ಬಯಲಲ್ಲಿ ಸೈಕಲ್ ಬರುವುದಕ್ಕೂ ಮೊದಲು ಬೈಸಿಕಲ್ ನೋಡಿದ್ದ ಜನಕ್ಕೆ ಇದರ ಮೇಲೆ ಕುಳಿತು ಸವಾರಿ ಮಾಡುವುದು ವಿಸ್ಮಯದ ಸಂಗತಿಯಾಗಿತ್ತು ಅದಕ್ಕೆ ಮಾಯಾವಿದ್ಯೆಯೇ ಬೇಕು. ಪಾದ್ರಿ ಅಂತಹ 'ಮಾಯಾವಿ' ಅಂದುಕೊಂಡಿದ್ದರು ಅಲ್ಲಿನ ಜನ. ಈ ಸೈಕಲನ್ನು ಬಯಲಿಗೆ ಆಳುಗಳ ಮೂಲಕ ಹೊರಿಸಿಕೊಂಡು ಬಂದು ಇಳಿಸಿದ ಸಂದರ್ಭದಲ್ಲಿ, ಕುತೂಹಲದಿಂದ ಅದನ್ನು ಮುಟ್ಟಲು ಮುನ್ನುಗ್ಗಿದಾಗ ಅಲ್ಲಿ ಮುಟ್ಟಬಹುದಾದವರು ಮುಟ್ಟಬಾರದವರು ಎಂಬ ಭೇದ ಭಾವ ಮರೆಯಾದದ್ದು ವಿಶೇಷ ಸಂಗತಿಯಾಗಿತ್ತು. ಆ ಕ್ಷಣದ ಮಟ್ಟಿಗೆ ಆಧುನಿಕತೆಯ ಸಂಕೇತವಾದ ಆ ವಸ್ತು ತಾರತಮ್ಯವನ್ನು ಅಳಿಸಿಹಾಕಿತ್ತು.

ಆ ಸಂದರ್ಭದಲ್ಲಿ ಪಾದ್ರಿ ಜೀವರತ್ನಯ್ಯನ ವೃತ್ತಿಬುದ್ಧಿ ತನಗೆತಾನೆ ಹೀಗೆ ಹೇಳಿಕೊಂಡಿತು. 'ಮತ ಪ್ರಚಾರಕ್ಕೆ ಬೈಬಲ್ಲು ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೇ ಹೆಚ್ಚು ಪ್ರಭಾವ ಶಾಲಿ' ಅನಿಸುತ್ತದೆ. ಅಂದರೆ, ಜನ ಜಾತಿ ಭೇದವಿಲ್ಲದೆ ಬೈಸಿಕಲ್ಲನ್ನು ಅತ್ಯಂತ ಸಂಭ್ರಮದಿಂದ ಬೆರಗಿನಿಂದ ಗಮನಿಸುವುದರಿಂದ. ಈ ಸೈಕಲ್ ನೀಡುವ ಆಮಿಷ ಒಡ್ಡಿ, ಮತಾಂತರ ಮಾಡುವುದು ಸುಲಭಸಾಧ್ಯ ಎಂದು ಕಂಡುಕೊಳ್ಳುವುದು ಮತಾಂತರ ಮನಸ್ಥಿತಿಯ ಹಿಂದಿರುವ ಕುತರ್ಕವಾಗಿದೆ. ಈ ಸೈಕಲ್ ಸ್ಪರ್ಶ, ಬೇರೆ ಬೇರೆಯವರಿಗೆ ಭಿನ್ನವಾದ ಅನುಭವಗಳನ್ನು, ಬೆರಗನ್ನು ತರುತ್ತದೆ.

"ಗುತ್ತಿಗೆ ಚಕ್ರಕ್ಕೆ ಸುತ್ತಿರುವ ಟೈರು ಮೆತ್ತಗಿರುವುದು, ಕಪ್ಪಾಗಿರುವುದು ಕಾಳಿಂಗನ ಹಾವು ಸುತ್ತಿರುವಂತೆ ಅನಿಸಿದರೆ ಐತನಿಗೆ ಸೈಕಲ್‌ನ ನಾನಾಭಾಗವನ್ನು ಸ್ಪರ್ಶಿಸಿದ ಅನುಭವ, ಪೀಂಚಲುವಿನ ಅಂಗೋಪಾಂಗಗಳನ್ನು ಮದುವೆಯಾದ ಹೊಸದರಲ್ಲಿ ಸ್ಪರ್ಶಿಸಿ ಸುಖಿಸಿದಂತೆ ತೃಪ್ತಿಯ ತುದಿಯನ್ನು ಮುಟ್ಟಿದ". (ಕುವೆಂಪು, ಮಲೆಗಳಲ್ಲಿ ಮದುಮಗಳು, ೨೦೧೦, ಪುಟ ೧೫೭) ಆಧುನಿಕ ವಸ್ತುವಿನ ಆಕರ್ಷಣೆ ಅದು ನೀಡುವ ಅನುಭವ ತೀವ್ರತೆಯನ್ನು ಈ ಸಂದರ್ಭ ತಿಳಿಸುತ್ತದೆ.

ಬೆಟ್ಟಳ್ಳಿ ಹಕ್ಕಲಿನಲ್ಲಿ ದೇವಯ್ಯನ ಸೈಕಲ್ ಸವಾರಿ ಕಲಿಯುವಿಕೆಯಾಗಿರಲಿಲ್ಲ. ಅಲ್ಲಿ ಸೇರಿದ ಜನರ ಎದುರು ತನ್ನ ಶ್ರೀಮಂತಿಕೆಯನ್ನು ವೈಭವವನ್ನು ತೋರಿಸುವುದಾಗಿತ್ತು.

'ದೇವಯ್ಯ ಸೈಕಲ್ ಬ್ಯಾಲೆನ್ಸ್ ಮಾಡುತ್ತಿಲ್ಲ, ಆಧುನಿಕತೆಯ ಬ್ಯಾಲೆನ್ಸ್ ನಡೆಯುತ್ತಿದೆ' ಎಂಬ ವಾಖ್ಯಾನ್ಯ ದೇವಯ್ಯನ ಮತಾಂತರದ ಹಿಂದಿನ ಉದ್ದೇಶವನ್ನು ಆಸಕ್ತಿಯನ್ನು ಸೂಚಿಸುತ್ತದೆ. ದೇವಯ್ಯ ಮತಾಂತರ ಬಯಸಿದ್ದು ಕ್ರೈಸ್ತಧರ್ಮದ ತತ್ತ್ವಗಳಿಗೆ ಮನಸೋತಲ್ಲ. ಅದು ತರುವ ಇಂತಹ ಆಧುನಿಕ ವಿಲಾಸದ ವಸ್ತುಗಳಿಗೆ ಆಕರ್ಷಿತನಾಗಿ. ಅವುಗಳನ್ನು ಬಳಸಿಕೊಳ್ಳುತ್ತಾ ಸುತ್ತಲ ಸಮಾಜದ ಎದುರಿನಲ್ಲಿ ಆಧುನಿಕವಾಗಿ ಕಾಣಬೇಕೆಂಬ ಹಂಬಲದಿಂದ. ಹೀಗೆ ಮಲೆಗಳಲ್ಲಿ ಮದುಮಗಳು ಕಾಲಮಾನಕ್ಕೆ ಬೆರಗು, ಕುತೂಹಲ ಪ್ರತಿಷ್ಠೆಯನ್ನು ತಂದ ಆಧುನಿಕತೆಯ ಕುರುಹಾದ ಬೈಸಿಕಲ್, 'ಕಾನೂರು ಹೆಗ್ಗಡತಿ' ಕಾಲಕ್ಕಾಗಲೇ ಮಲೆನಾಡ ಪರಿಸರದಲ್ಲಿ ಎಲ್ಲೆಡೆ ಬಳಕೆಗೆ ಬರತೊಡಗಿತ್ತು. ಅದನ್ನು ಬಳಸುವವರಲ್ಲಿ ಮೂಡಿಸಿದ್ದ ಒಣ ಪ್ರತಿಷ್ಠೆಯನ್ನು ಅವರುಗಳ ಅಕೌಶಲತೆಯಿಂದ ಉಂಟಾಗುತ್ತಿದ್ದ ಅಧ್ವಾನವನ್ನು ಈ ಕೃತಿಯಲ್ಲಿ ನೋಡಬಹುದು.

ಹೂವಯ್ಯ ಸರಕಾರಿ ರಸ್ತೆಯಲ್ಲಿ ಬರುತ್ತಿರುವಾಗ, ಎದುರಿನಲ್ಲಿ ಸೈಕಲ್ ಸವಾರನೊಬ್ಬ ಇಳಿಜಾರಿನ ರಸ್ತೆಯಲ್ಲಿ ಅತಿ ವೇಗದಿಂದ ಧಾವಿಸುತ್ತಾ, ಈತನನ್ನು ತಾಕಿಸಿಕೊಂಡು ಹೋಯಿತೊ ಎನ್ನುವಷ್ಟು ಸನಿಹದಲ್ಲಿ ಹಾದು ಮುಂದಿನ ತಿರುವಿನಲ್ಲಿ ಡಿಕ್ಕಿ ಹೊಡೆದು ಉರುಳಿಬಿದ್ದ. ಎದ್ದವನು ಕೊಪ್ಪ-ತೀರ್ಥಹಳ್ಳಿ ರೋಡ್‌ನಷ್ಟು ಡರ್ಟಿರೋಡ್ ನಾನೆಲ್ಲೂ ಕಾಣಲಿಲ್ಲವೆಂದು ಬೈದ. ತನ್ನ ಬಿಎಸ್‌ವಿ ಬೈಸಿಕಲ್ 'ಡಿರೇಂಜ್' ಆಗೋದಿಲ್ಲ ಎಂದು ಹೊಗಳಿಕೊಂಡ. ಈ ಸಂದರ್ಭದಲ್ಲಿ ಆಧುನಿಕತೆಯ ಮೂಲಕ ಪ್ರವೇಶ ಪಡೆದ 'ಯಂತ್ರ ನಾಗರಿಕತೆ' ತರುವ ಅನಾಹುತವನ್ನು, ಕುವೆಂಪು ಹೂವಯ್ಯನ ಮೂಲಕ ಹೀಗೆ ಹೇಳುತ್ತಾರೆ.

"ಯಂತ್ರ ನಾಗರಿಕತೆ, ಇಂಗ್ಲಿಷ್ ಚಾಂಚಲ್ಯ, ಉದ್ವೇಗ, ವೇಗ ಈ ಪ್ರಗತಿಗಾಮಿಯಾದ ಪ್ರಪಂಚ ಬಹುದೂರದ ಮಲೆನಾಡಿನ ಕೊಂಪೆಯಲ್ಲಿ.... ಕ್ಷಣ ದರ್ಶನ ಕೊಟ್ಟಂತಾಯಿತು. ನಿಲ್ಲದೆ ಮುಂಬರಿಯುತ್ತಿರುವ, ದಿನದಿನವೂ ಬದಲಾಯಿಸುತ್ತಿರುವ ಹೊರಗಣ ವಿಶಾಲ ಜಗತ್ತಿಗೆ ಪ್ರತಿಮೆಗಳಾದರು ಆ ಬೈಸಿಕಲ್ ಮತ್ತು ಸವಾರ.... ಪಟ್ಟಣದ ಬೀದಿಯಲ್ಲಿ ಗಮನಕ್ಕೂ ಬಾರದ ಬೈಸಿಕಲ್ಲು

ಕಾಡುಬೀಡಿನಲ್ಲಿ ವಿಶೇಷಾತಿಥಿಯಾಗಿ ತೋರಿತು. ಎಷ್ಟಾದರೂ ಆಕ್ರಮಣಶೀಲವಾದ ಆ ಚಂಚಲಮಾನ ನಾಗರಿಕ ಲೋಕವು ಮಲೆನಾಡಿಗೆ ದಾಳಿಯಿಡುವ ಮೊದಲು ಮುನ್ನಟ್ಟಿದ ರಣಚಾರನಲ್ಲವೆ ಆ ಬೈಸಿಕಲ್ ಸವಾರ !". (ಕುವೆಂಪು, ಕಾನೂರು ಹೆಗ್ಗಡಿತಿ, ೧೯೯೮, ಪುಟ ೩೧೮)

ಆಧುನಿಕತೆಗೆ ಒಳಗಾದ ವ್ಯಕ್ತಿ ಸ್ಥಳೀಯತೆಯನ್ನು ಕೀಳಾಗಿ ನೋಡುವಂತಹ, ಟೀಕಿಸುವಂತಹ, ಮನೋಭಾವ ರೂಪುಗೊಳ್ಳುತ್ತಿರುವುದನ್ನು ಈ ಮೇಲಿನ ಘಟನೆಯಿಂದ ಅರ್ಥಮಾಡಿಕೊಳ್ಳಬಹುದು. ಅಂದರೆ 'ತನ್ನ ಸೈಕಲ್ ಈ ರಸ್ತೆಗೆ ಯೋಗ್ಯವಲ್ಲ ಎಂಬುದಕ್ಕಿಂತ ತನ್ನ ಸೈಕಲ್‌ಗೆ ಈ ರಸ್ತೆ ಯೋಗ್ಯವಲ್ಲ' ಎಂಬ ಸೈಕಲ್ ಸವಾರನ ಧೋರಣೆ ಆಧುನಿಕತೆ ತಂದಂತಹ ಮನಸ್ಥಿತಿ. ಇದು ಸಹಜವಾಗಿ ವಸಾಹತು ಸಂಸ್ಕೃತಿಯೊಂದು ಉಂಟುಮಾಡಬಹುದಾದ ಮನೋಧರ್ಮವಾಗಿದೆ. ಆಧುನಿಕ ವಸ್ತುವೊಂದು ಬಂದಾಗ, ಅದು ತನ್ನ ಆಕರ್ಷಣೆಯಿಂದಾಗಿ ಸ್ವೀಕೃತವಾದ ಸ್ಥಳೀಯ ವಸ್ತು ವಿಷಯಗಳ ಜೊತೆಗೆ ತುಲನಾತ್ಮಕವಾದ ದೃಷ್ಟಿಯೊಂದು ಧುತ್ತನೆ ಎದುರಾಗುವುದು. ವಾಸ್ತವವೂ ಹೌದು. ಹೀಗೆ ಆಧುನಿಕತೆಯಿಂದ ಸ್ಥಳೀಯರ ಮನೋಭಾವಗಳಲ್ಲಿ ಕ್ರಾಂತಿಯನ್ನುಂಟುಮಾಡುತ್ತಿದ್ದ ಅನೇಕ ಅಂಶಗಳನ್ನು ಕುವೆಂಪು ಅವರ ಕಾದಂಬರಿಗಳಲ್ಲಿ ಕಾಣಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಮೇಗರವಳ್ಳಿಯಲ್ಲಿರುವ ಅಂತಕ್ಕ ಸೆಟ್ಟಿಯ ಮನೆ, ಪಾದ್ರಿಯ ಪ್ರವೇಶದೊಂದಿಗೆ ಓಟ್ಲುಮನೆಯಾಗಿ ಪರಿವರ್ತನೆಯಾಗುತ್ತದೆ. ಅಲ್ಲದೆ ತೀರ್ಥಹಳ್ಳಿಯಿಂದ ಪಾದ್ರಿ ಜೀವರತ್ನಯ್ಯ, ಅಂತಕ್ಕನಿಗೆ ಕಾಫಿ ಪುಡಿ ತಂದುಕೊಟ್ಟು ಅದನ್ನು ತಯಾರಿಸುವ ಬಗೆಯನ್ನು ತೋರಿಸಿಕೊಟ್ಟಿದ್ದರಿಂದ ಮಲೆನಾಡಿಗೆ ಕಾಫಿಯ ಪ್ರವೇಶವೂ ಆಗುತ್ತದೆ. ಪ್ರಾರಂಭದಲ್ಲಿ ಇದು ಮುಜುಗರ ಎನಿಸಿದರೆ ಆನಂತರ ಹೆಮ್ಮೆಯ ಸಂಗತಿಯಾಗಿ ಪರಿವರ್ತನೆಯಾಗುತ್ತದೆ. ಇಂದು ಮಲೆನಾಡಿನ ಪರಿಸರದಲ್ಲಿ ಪ್ರತಿಯೊಬ್ಬರ ಮನೆಯಲ್ಲೂ ಕಾಫಿ ಅವಿಭಾಜ್ಯ ಅಂಗ. ಅದು ಸಾಧ್ಯವಾದದ್ದು ಹೋಟೆಲ್ ಮೂಲಕ. ಹೀಗೆ ಕಾಫಿ ಪ್ರವೇಶದೊಂದಿಗೆ ಅಂತಕ್ಕನಮನೆ 'ಓಟ್ಲು ಮನೆ' ಆಗುತ್ತದೆ. ಇದು ಜನ-ಜಂಗುಳಿ ಸೇರುವ ಹಾಗೂ ಸುದ್ದಿ ಮಾಧ್ಯಮದ ಕೇಂದ್ರ ಕೂಡ. ಸುಬ್ಬಣ್ಣ ಹೆಗಡೆ, ತಿರುಪತಿಗೆ ಹೋದ ತನ್ನ ಮಗ ದೊಡ್ಡಣ್ಣ ಹೆಗಡೆ ವಿಚಾರವಾಗಿ ತಿಳಿಯಲು ಬರುವುದು, ಪಾದ್ರಿ ಜೊತೆ ಚರ್ಚಿಸುವುದು ಅಂತಕ್ಕನ ಓಟ್ಲುಮನೆಯಲ್ಲಿ. ಅಂತೆಯೇ

ಆಧುನಿಕತೆಯ ಪ್ರವೇಶ ಹೆಚ್ಚಿದಂತೆಲ್ಲ ನಾಗರಿಕತೆಯ 'ಚಲನೆ' ಮಲೆನಾಡನ್ನು ವ್ಯಾಪಿಸುತ್ತಿರುವ 'ಕುರುಹು' ಆಗಿ ಬದಲಾವಣೆಯ ಧ್ಯೋತಕವಾಗಿ ನಿಲ್ಲುತ್ತದೆ.

ಇವುಗಳ ಜೊತೆಗೆ ಆಧುನಿಕತೆಯು ವೇಷ ಭೂಷಣದ ಮೂಲಕ ಮಲೆನಾಡಿನ ಪರಂಪರಾಗತ ಬದುಕಿನಲ್ಲಿ ಬೆರಗು, ಸಂಭ್ರಮ, ಆತಂಕ, ಸಂಘರ್ಷಕ್ಕೆ ಕಾರಣವಾದ ಅಂಶಗಳನ್ನು ಕುವೆಂಪು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪಾದ್ರಿಯ ಜೊತೆಯಲ್ಲಿ ಬೆಟ್ಟಳ್ಳಿ ಪ್ರವೇಶಿಸುವ ಸಿಂಧುವಳ್ಳಿ ಚಿನ್ನಪ್ಪ ಕ್ರೈಸ್ತಧರ್ಮದ ಪ್ರಭಾವಕ್ಕೆ ಒಳಗಾಗಿ, ಆತನ ವೇಷ-ಭೂಷಣಗಳಲ್ಲಿ ಹೊಸತನ ಕಾಣಿಸಿಕೊಂಡಿತು. ಚಿನ್ನಪ್ಪ, ದೇವಯ್ಯನಂತಹ ಯುವಕರು ಕ್ರೈಸ್ತಧರ್ಮಕ್ಕೆ ಮನಸೋತದ್ದು, ಈ ಆಧುನಿಕತೆಗಾಗಿ ಹಾಗೂ ವಸ್ತು ಉಡುಪುಗಳಿಗಾಗಿ. "ಆಗ ತಾನೆ ಪೇಟೆಗಳಲ್ಲಿ ರೂಢಿಗೆ ಬರುತ್ತಿದ್ದ ಬನೀನು ತೊಟ್ಟು, ಅಂಗಿಕೋಟು ಹಾಕಿದ್ದನು. ಕಾಲಿಗೆ ಶಿವಮೊಗ್ಗದ ಕಡೆಯ ಮೆಟ್ಟನ್ನು ಹಾಕಿದ್ದನು". (ಕುವೆಂಪು, ಮಲೆಗಳಲ್ಲಿ ಮದುಮಗಳು, ೨೦೦೨, ಪುಟ ೪೨)

ಚಿನ್ನಪ್ಪನಂತೆ ದೇವಯ್ಯ ಹೊಸ ರೀತಿ ಉಡುಪನ್ನು ಹಾಕಿಕೊಂಡು ಬಂದಾಗ, ತಾಯಿ ಮತ್ತು ಹೆಂಡತಿಗೆ ಒಳಗೊಳಗೆ ಆನಂದವನ್ನುಂಟುಮಾಡಿತ್ತು. ಆದರೆ ಜುಟ್ಟು ಬೋಳಿಸಿ ಕ್ರಾಪು ಬಿಟ್ಟಿದ್ದು, ಆ ಮನೆಗೆ ಭಯಂಕರವಾಗಿಯೇ ಕಂಡಿತ್ತು. ತಂದೆ ಸತ್ತಾಗ ಮಾತ್ರ ಮಗನ ತಲೆಬೋಳಿಸುವ ಆಚಾರವಿರುವಾಗ ತಂದೆ ಬದುಕಿರುವಾಗಲೇ ಹೀಗೆ ಮಾಡಿದ್ದು ಅಪಶಕುನದಂತೆ ಕಂಡಿತು. ಹೆಂಡತಿ ಮತ್ತು ತಾಯಿ ತಲ್ಲಣಗೊಂಡು, ದೇವರಿಗೆ ತಪ್ಪು ಕಾಣಿಕೆ ಕಟ್ಟಿದರು. ಆದರೆ ದಿನಗಳೆದಂತೆಲ್ಲ ದೇವಯ್ಯನ ಹೆಂಡತಿಗೆ ಜುಟ್ಟಿಗಿಂತಲೂ ಕ್ರಾಪೇ ತನ್ನ ಗಂಡನಿಗೆ ಲಕ್ಷಣವಾಗಿ ಕಾಣುವಂತೆ ತೋರಿತು.

ಆಧುನಿಕತೆ ನಮ್ಮೊಳಗೆ ಪ್ರವೇಶಿಸುವಾಗ ತರುವ ಆತಂಕ, ಆಕರ್ಷಣೆ ಈ ಬಗೆಯದು. ಎಲ್ಲಾ ಕಾಲಕ್ಕೂ ಹಳೆತು-ಹೊಸತರ ನಡುವಿನ ಸಂಘರ್ಷ ಇದ್ದೇ ಇರುತ್ತದೆ. ಅದೇ ರೀತಿ ಮಲೆನಾಡ ಪರಿಸರದ ಒಂದು ಸಮುದಾಯದ ಪರಂಪರಾಗತ ಬದುಕಿನೊಳಗೆ ಆಧುನಿಕತೆಯು ಗೊಂದಲ, ದ್ವಂದ್ವವನ್ನು ಹುಟ್ಟು ಹಾಕಿತು. ದೇವಯ್ಯನಲ್ಲಾಗುವ ಬಾಹ್ಯ ಬದಲಾವಣೆಗೆ ತಂದೆ ಕಲ್ಲೇಗೌಡರ ಪ್ರತಿಕ್ರಿಯೆ ತಟಸ್ಥವಾದದ್ದು. ತಾಯಿಯು ಅವನು ಹಾಕುವ ಬಟ್ಟೆಗೆ ಮನಸೋತರೂ

ಅವನ ಕ್ರಾಪಿಗೆ ಕಂಗಾಲಾಗುತ್ತಾಳೆ. ಆದರೆ ಹೊಸತಲೆಮಾರಿನ ಹೆಣ್ಣಾದ ಸಂಪ್ರಾದಾಯದ ಕಟ್ಟು ಪಾಡುಗಳಲ್ಲೇ ಬೆಳೆದ ದೇವಮ್ಮನಿಗೆ ಮೊದಲಿಗೆ ಕ್ರಾಪು ಅಪಶಕುನದಂತೆ ಕಂಡರೂ ಕ್ರಮೇಣ ಹಿತವಾಗಿ ಚೆಲುವಾಗಿ ಕಾಣತೊಡಗುತ್ತದೆ. ಅಂತಕ್ಕನ ಮಗಳು ಕಾವೇರಿ ದೇವಯ್ಯನಿಗೆ ಸೋಲುವುದು ಆತನ ಶ್ರೀಮಂತಿಕೆಗಲ್ಲ ಆತನ ಕ್ರಾಪಿಗೆ, ಹೊಸ ರೀತಿಯ ಬಟ್ಟೆಗೆ. ಹೀಗೆ ಆಧುನಿಕತೆ ತಂದ ನವೀನ ಮಾದರಿಯ ವೇಷಭೂಷಣಗಳ ಬಗ್ಗೆ ಹಿರಿಯ ತಲೆಮಾರು ಅಂತಹ ಗೌರವನ್ನೇನೂ ತೋರಿಸಲಿಲ್ಲ. ಆದರೆ ಹೊಸತಲೆಮಾರಿಗೆ ವಯೋಮಾನಕ್ಕೆ ಅನುಗುಣವಾಗಿ ಸಹಜವಾಗಿ ರೋಮಾಂಚನವನ್ನುಂಟು ಮಾಡಿದವು.

ಅಂತೆಯೇ ಹಿರಿಯರ ಆಕ್ಷೇಪಣೆಗಳ ನಡುವೆಯೂ ಯುವಕರು ತಮ್ಮ ಬದುಕಿನ ವಿನ್ಯಾಸದೊಳಗೆ ಆಧುನಿಕ ವಸ್ತುಗಳು ಹಾಗೂ ಶೈಲಿಯನ್ನು ಅಳವಡಿಸಿಕೊಳ್ಳುವ ಪರಿ, ಆಧುನಿಕತೆ ಎಂಬುದು ಸಂಪ್ರದಾಯದೊಳಗೆ ತನ್ನ ಹೆಜ್ಜೆ ಗುರುತುಗಳನ್ನು ಮೂಡಿಸುತ್ತಿರುವುದಕ್ಕೆ ಸಾಕ್ಷಿಯಾಗಿವೆ. ಸಾಂಪ್ರದಾಯಿಕತೆ ಹಾಗೂ ಆಧುನಿಕತೆ ಮುಖಾಮುಖಿಯಾಗುತ್ತಲೇ ಸಂಪ್ರದಾಯಿಕತೆಯನ್ನು ಹಿಂದಿಕ್ಕಿ ಆಧುನಿಕತೆ ಜನಪ್ರಿಯವಾಗುತ್ತಿರುವುದನ್ನು ಇಲ್ಲಿ ಗಮನಿಸಬಹುದು. ಆಧುನಿಕತೆಯ ಈ ಬದಲಾವಣೆಗಳು ಭಾರತೀಯ ಸಾಮಾಜಿಕ ಜೀವನದಲ್ಲಿ ಎಂದೂ ಆದರಣೀಯವಾಗಿಲ್ಲ. ಆದರೆ ದೇವಯ್ಯನ ಆಧುನಿಕವೇಷ ಕಲ್ಲೂರು ದೇವಸ್ಥಾನದ ಪರಿಸರದಲ್ಲೂ ಹೊಸ ಸಂಚಲನವನ್ನು ಉಂಟು ಮಾಡಿತು.

"ಕೆದರು ಕ್ರಾಪಿನ ತಲೆ, ಹರ ಕೊಂಡಿನಿಂದ ಹೊಳೆವ ಕಿವಿ, ಕರಿಯ ಕುಡಿಮೀಸೆ, ಹೊನ್ನುಂಗರದ ಬೆರಳು, ನಶ್ಯ ಬಣ್ಣದ ಕೋಟು, ಬಿಳಿಮಲ್ಲಿನ ಕಚ್ಚೆ ಪಂಚೆ.... ಕ್ರೈಸ್ತ ಪಾದ್ರಿಗಳ ಮೂಲಕ ಆಗತಾನೆ ಪ್ರವೇಶಿಸುತ್ತಿದ್ದ ನವ ನಾಗರಿಕತೆಯ ಸ್ಥೂಲರುಚಿಯ ಲಕ್ಷಣಗಳಿಂದ ಸಮನ್ವಿತರಾದ ದೇವಯ್ಯಗೌಡರನ್ನು ನೋಡಿ ನೆರೆದವರೆಲ್ಲರೂ ಹೆಂಗಸರೂ ಗಂಡಸರೂ ಎಲ್ಲರೂ ಬೆರಗಾದರು.... ಕೆಲವರಲ್ಲಿ ಕರುಬು ತಲೆ ಹಾಕಿತ್ತು". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೯೮, ಪುಟ ೩೯೭)

ದೇವಯ್ಯನ ಆಧುನಿಕ ವೇಷ ಮೇಲು ಜಾತಿಯ ಐತಾಳನ ಹೆಂಡತಿಗೆ ಅತೀವ ಆಕರ್ಷಣೀಯವಾಗಿ ಕಾಣುತ್ತದೆ. ದೇವಯ್ಯನ ಹಾಗೆ ತನ್ನ ಪ್ರಿಯಕರ ನಾರಾಯಣ ಭಟ್ಟನೂ ಕ್ರಾಪು ಬಿಟ್ಟಿದ್ದರೆ, ಎಷ್ಟು ಚೆನ್ನಾಗಿರುತ್ತಿತ್ತು ಎಂದು ಆ ರೂಪವನ್ನು ಮನದಲ್ಲಿ ಕಲ್ಪಿಸಿಕೊಂಡಳು. ದೇವಯ್ಯನ ಪ್ರಭಾವದಿಂದ ಆತನ ಆಳು

ಬಚ್ಚ ತಲೆಗೆ ಕೆಂಪು ವಸ್ತ್ರ, ಅಂಗಿ, ಮೊಳಕಾಲು ದಾಟಿದ ಅಡ್ಡಪಂಚೆ ತೊಟ್ಟಿದ್ದು ತಳಸಮುದಾಯಕ್ಕೆ ಹುಬ್ಬೇರಿಸುವಂತೆ ಮಾಡಿತ್ತು.

'ಕಾನೂರು ಹೆಗ್ಗಡಿತಿ'ಯು, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ನಂತರದ ಕಾಲಘಟ್ಟದ ಕೃತಿಯಾಗಿದೆ. ಈ ಕೃತಿಯ ಆರಂಭದಲ್ಲೇ ತೀರ್ಥಹಳ್ಳಿ ಕಲ್ಲುಸಾರ ದಾಟಿಕೊಂಡು ಬರುವ, ಹೂವಯ್ಯ ರಾಮಯ್ಯರಿಬ್ಬರ ಪ್ರವೇಶದ ಚಿತ್ರವೇ ಮಲೆನಾಡಿಗೆ ಆಧುನಿಕತೆ ಪ್ರವೇಶದ ಸಂಕೇತದಂತಿದೆ. ಆಧುನಿಕ ಶಿಕ್ಷಣ ಬಯಸಿ ಹಳ್ಳಿಯಿಂದ ನಗರಕ್ಕೆ ನಿರ್ಗಮಿಸಿ, ಆಧುನಿಕತೆಯ ಪ್ರಭಾವಕ್ಕೆ ಒಳಗಾದರೂ ಅದನ್ನು ತಮ್ಮದಾಗಿಸಿಕೊಂಡ ಬಗೆ ಮಾತ್ರ ಭಿನ್ನವಾಗಿತ್ತು.

ಕಾದಂಬರಿಯ ಮುಂದಿನ ಘಟನಾವಳಿಗಳಲ್ಲಿ ಆಧುನಿಕತೆಯ ಪ್ರಭಾವಕ್ಕೊಳಗಾದ ಹೂವಯ್ಯ ಮತ್ತು ರಾಮಯ್ಯ ಇವರ ವೇಷಭೂಷಣಗಳೇ ಅದನ್ನು ಧ್ವನಿಸಿಬಿಡುತ್ತವೆ. 'ಹೂವಯ್ಯ ತಲೆಗೆ ಟೋಪಿ ಧರಿಸಿರಲಿಲ್ಲ. ಆತನ ಕ್ರಾಪು ಪೊದೆ ಪೊದೆಯಾಗಿ ತಲೆಯೆಲ್ಲಾ ಆವರಿಸಿತ್ತು. ಒಂದು ತೆರನಾದ ಧೀರ ಸ್ವಚ್ಛಂದತೆಯಿಂದ ಮನೋಹರವಾಗಿ ಕಾಣುತ್ತಿದ್ದ ಅವನ ವೇಷ ಭೂಷಣಗಳು ಆತನ ವ್ಯಕ್ತಿತ್ವವನ್ನು ಸಾರುವಂತಿತ್ತು. ಆತನ ತಮ್ಮ ರಾಮಯ್ಯ ಖಾದಿ ಬಟ್ಟೆ ತೊಟ್ಟಿದ್ದ; ತಲೆಗೊಂದು ಬಿಳಿಯ ಖಾದಿಟೋಪಿ, ಮೈಗೆ ನೀಲಿ ಬಣ್ಣದ ಕೋಟು, ಕೋಟಿನ ಕಿಸೆಯಲ್ಲಿ ಫೌಂಟನ್ ಪೆನ್ನು, ಕೈ ಗಡಿಯಾರ ಅಂಚಿನ ಖಾದಿ ಪಂಚೆ ತೊಟ್ಟಿದ್ದ. ಲೌಕಿಕ ಸುಖಕ್ಕೆ ಹೆಚ್ಚು ಒಲಿದಂತೆ ಕಾಣುವ ಆತನಲ್ಲಿ ಮುಗ್ಧತೆ ಎದ್ದು ಕಾಣುತ್ತಿತ್ತೆ ಹೊರತು ದೃಢತೆ ಕಾಣುತ್ತಿರಲಿಲ್ಲ. ಎಂದು ನಿರೂಪಕರೇ ಹೇಳುತ್ತಾರೆ. ಒಟ್ಟಿನಲ್ಲಿ ಈ ಆಧುನಿಕ ಶಿಕ್ಷಣ ಮತ್ತು ನಗರ ಪರಿಸರದ ಪ್ರಭಾವದಿಂದ ಇವರ ವೇಷಭೂಷಣದಲ್ಲಿ ಆಧುನಿಕತೆ ಎದ್ದು ಕಾಣುತ್ತಿತ್ತು.

ಇವರ ವೇಷಭೂಷಣದ ಬಗ್ಗೆ ಪರಿಸರದ ಇತರೆಡೆಗಳಲ್ಲಿ ಯಾವ ಪ್ರತಿಕ್ರಿಯೆಯೂ ಅಷ್ಟಾಗಿ ಕಂಡು ಬರುವುದಿಲ್ಲ. ವಿದ್ಯಾವಂತರು ಎಂಬ ನೋಟದಲ್ಲಿ ಮೆಚ್ಚುಗೆ ಗೌರವವಿತ್ತು. ಆದರೆ ಚಂದ್ರೇಗೌಡರಿಗೆ ಮಾತ್ರ ಮಕ್ಕಳ ಈ ವೇಷಭೂಷಣದ ಬಗ್ಗೆ ಕಟುವಾದ ವಿರೋಧವಿತ್ತು. ಅಣ್ಣಂದಿರ ಹಾಗೆ ಕ್ರಾಪು ಬಿಡಲು ಹೊರಟ ಬಾಲಕ ವಾಸುವನ್ನು ತಡೆದಿದ್ದರು. ಹೂವಯ್ಯ ರಾಮಯ್ಯರ ಸರಳ ನಿರ್ಮಲ ಉಡುಪು ಕೂಡ ಚಂದ್ರೇಗೌಡನ ಪಾಲಿಗೆ ಷೋಕಿಯಾಗಿ ತೋರುತ್ತಿತ್ತು. ಅಲ್ಲದೇ 'ನೆಲಾ ಗುಡಿಸುವಂತೆ ಬಿಳೀ ಪಂಚೆ ಉಟ್ಕಂಡು ಷೋಕಿ ಮಾಡಿಬಿಟ್ಟರೆ ಎಲ್ಲಾ

ಬಂತು ! ಆ ವೆಂಕಪ್ಪಯ್ಯ ಹೇಳ್ದಾಂಗೆ ಮಣ್ಣು ಕೆರೆಯೋ ಜಾತಿಗಳ ಕೈಗೆ ಲೇಖನಿಕೊಟ್ಟರೆ ಇನ್ನೇನಾಗ್ತದೆ'. ಎಂಬ ಧೋರಣೆ ಅವರದು.

ಕೃಷಿಯನ್ನೇ ಅವಲಂಬಿಸಿರುವ ಶೂದ್ರ ಸಮುದಾಯದ ಮಕ್ಕಳು ಬಿಳಿಯ ಉಡುಪಾಗಲಿ, ಶುಭ್ರತೆಯಿಂದ ಇರುವುದಾಗಲಿ ತರವಲ್ಲ ಎಂಬ ಪರಂಪರಾಗತ ಮನಸ್ಸಿನ ಸ್ಥಾಪಿತ ನಿಲುವು ಇದು. ಶಿಕ್ಷಣವು ಅಲ್ಲಿನ ಸಮಾಜದಲ್ಲಿ ಹೇಗೆ ನಿರಾಕರಣೆಗೆ ಒಳಗಾಗಿತ್ತೋ ಹಾಗೇ ಉಡುಪು ಕೂಡ ಇಂತಹ ನಿರಾಕರಣೆಗೆ ಒಳಗಾಗಿತ್ತು. ಶಿಕ್ಷಣ ಹೇಗೋ ಹಾಗೆ ಶುಚಿತ್ವ ಹಾಗೂ ಅದರ ಸಂಕೇತವಾದ ಬಿಳಿಯುಡಿಗೆಯೂ ಕೇವಲ ಮೇಲುವರ್ಗಕ್ಕೆ ಸೀಮಿತ ಎಂಬ ಪೂರ್ವಾಗ್ರಹ ಈ ಪರಿಸರದಲ್ಲಿ ಮನೆ ಮಾಡಿತ್ತು. ಹಾಗೆ ಸದಾ ಮಣ್ಣಲ್ಲಿ ಕೆಲಸಮಾಡುವ ಜನ ಶುಚಿತ್ವಕ್ಕೆ ಗಮನ ನೀಡಿದರೆ, ಕಸುಬಿನಿಂದ ದೂರವಾಗುತ್ತಾರೆಂಬ ಆತಂಕವೂ ನೆಲೆಸಿತ್ತು. ಆದ್ದರಿಂದ ಸ್ತ್ರೀ ಪುರುಷರಾದಿಯಾಗಿ ಶೂದ್ರಾದಿ ಸಮುದಾಯಗಳಲ್ಲಿ ವಾರಕ್ಕೆ ಒಂದು ದಿನದ ಸ್ನಾನ ಮಾಡುವ ಪದ್ಧತಿ ಇತ್ತು. ಮಲೆನಾಡ ಒಕ್ಕಲಿಗರ ಪಾಲಿಗೆ ಶನಿವಾರ ಸ್ನಾನದ ವಾರವಾಗಿತ್ತು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಹಳೆಮನೆ ಶಂಕರಪ್ಪ ಹೆಗ್ಗಡೆ ಮತ್ತು ಅವನ ಹೆಂಡತಿ, ಬ್ರಾಹ್ಮಣರ ಪ್ರಭಾವದಿಂದ ಪ್ರತಿನಿತ್ಯ ಸ್ನಾನ ಮಾಡುತ್ತಿದ್ದರು. ಆತ ಬಿಳಿಬಟ್ಟೆ ಧರಿಸುತ್ತಿದ್ದ ಹಾಗೂ ಮಿಂದು ಮಡಿಯುಟ್ಟು, ತುಳಸಿ ಪೂಜೆ ಮಾಡುತ್ತಿದ್ದ ತಾನು ಸಂಸ್ಕಾರವಂತನಾಗಿದ್ದೇನೆಂದೂ ತನ್ನ ಚಿಕ್ಕಪ್ಪನಾದ ಸುಬ್ಬಣ್ಣ ಹೆಗ್ಗ'ಡೆ ಇನ್ನೂ ಅಸಂಸ್ಕೃತನೆಂಬ ಭಾವನೆ ತಳೆದಿದ್ದ. ಈ ನಡವಳಿಕೆ ಸುಬ್ಬಣ್ಣ ಹೆಗಡೆಗೆ ಮನೆಹಾಳು ಕೆಲಸವಾಗಿ ಕಂಡಿತ್ತು. ತನ್ನ ಮಗ ತಿಮ್ಮಪ್ಪ ಹೆಗ್ಗಡೆ ಬಿಳಿ ಬಟ್ಟೆ ಹಾಕಿಕೊಂಡಿದ್ದಕ್ಕೆ 'ನೆರೆಮನೆ ಅಣ್ಣನ ಹಾಗೆ ಮನೆಹಾಳ್ ಬಾಳೇನಲ್ಲಾ ಕಲೀತಾ ಬರ್‍ತಿಯಲ್ಲೋ ನಿನ್ನ ಈ ಕರಿ ಬೂಲಕ್ಕೆ ಯಾಕೋ ಈ ಬಿಳಿ ಬಟ್ಟೆ' ಎಂದು ಚೀಮಾರಿ ಹಾಕಿದ್ದರು.

ಬ್ರಾಹ್ಮಣರ ಸಂಪ್ರದಾಯ ಅನುಸರಿಸುವ ಶಂಕರಪ್ಪ ಹೆಗ್ಗಡೆ ಮತ್ತು ಅವನನ್ನು ಅನುಸರಿಸಲು ಹೊರಟ ತಿಮ್ಮಪ್ಪ ಹೆಗಡೆಯ ನಡವಳಿಕೆಯನ್ನು ಆತಂಕ ಮತ್ತು ಕೋಪದಿಂದ ವಿರೋಧಿಸುವ ಸುಬ್ಬಣ್ಣ ಹೆಗ್ಗಡೆಯ ಮನಸ್ಸಿನ ಹಿಂದಿರುವುದು, ರೈತ ಮಕ್ಕಳಿಗೆ ಬಿಳಿಯುಡಿಕೆ ತರವಲ್ಲ ಎಂಬ ಪಾರಂಪರಿಕ ಮನೋಭಾವ. ಸುಂದರವಾಗಿ ಕಾಣಬೇಕೆಂಬ ಮನೋಭಾವ ಮನೆಹಾಳು ಮಾಡುತ್ತದೆ ಎಂಬುದು

ಆ ಕಾಲದ ಹಿರಿಯರ ಭೀತಿ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸುಬ್ಬಣ್ಣ ಹೆಗ್ಗಡೆಯಾಗಲಿ, 'ಕಾನೂರು ಹೆಗ್ಗಡಿತಿ'ಯ ಚಂದ್ರೇಗೌಡ ಆಗಲಿ ತಮ್ಮ ಮಕ್ಕಳು ಆಧುನಿಕ ಶಿಕ್ಷಣದ ಮೂಲಕ ಮಲೆನಾಡಿನ ಪರಿಸರದಲ್ಲಿ ಹೊಸರೀತಿಯ ಜೀವನ ಕ್ರಮವನ್ನು ರೂಢಿಸಲು ಪ್ರಯತ್ನ ಪಡುವುದು ಮನೆಹಾಳು ಕೆಲಸವೆಂಬ ಆತಂಕದಿಂದ ಹೀಗಾಗಿ ಅದನ್ನು ವ್ಯಂಗ್ಯವಾಗಿ ವಿರೋಧಿಸುವುದನ್ನು ಕಾಣಬಹುದು.

ಅಷ್ಟೇ ಅಲ್ಲದೆ ಆಧುನಿಕತೆಯ ಸೆಳೆತಕ್ಕೆ ಸಿಕ್ಕಿ ಪರಂಪರಾಗತವಾದ ವೃತ್ತಿಯಿಂದ ತಮ್ಮ ಮಕ್ಕಳು ಎಲ್ಲಿ ದೂರವಾಗುತ್ತರೋ ಎಂಬ ಆತಂಕ ಕಾಡುತ್ತದೆ. ಯಥಾಸ್ಥಿತಿಯನ್ನು ಕಾಯ್ದುಕೊಂಡು ಹೋಗಬೇಕೆಂಬುದು ಅವರ ದೃಷ್ಟಿ. ಪೌರೋಹಿತ್ಯವೇ ಪ್ರಧಾನ ಕಸುಬಾದ ಮೇಲುವರ್ಗದಲ್ಲಿ ಬಿಳಿಯಬಟ್ಟೆ ಸರ್ವೇ ಸಾಧಾರಣ ಸಂಗತಿಯಾಗಿತ್ತು. ವ್ಯವಸಾಯದ ಬದುಕೇ ಪ್ರಧಾನವಾದ ಸಮುದಾಯಗಳಲ್ಲಿ ಅದರ ಅನುಕರಣೆ ಮತ್ತು ಅನುಸರಣೆ ತಕ್ಕುದ್ದಲ್ಲ ಎಂಬುದು ಅಲ್ಲಿನ ಜನರ ಗ್ರಹಿಕೆ. ಈ ಪಾರಂಪರಿಕ ಗ್ರಹಿಕೆ-ನಂಬಿಕೆಗಳನ್ನು, ಆಧುನಿಕತೆ ತಂದುಕೊಟ್ಟ ತಿಳುವಳಿಕೆ ಹೊಸತನದ ಬಯಕೆಗಳು ಒಡೆದು ಹಾಕಿದವು. ಅಂದರೆ ಶ್ರೇಣೀಕೃತ ವ್ಯವಸ್ಥೆಯ ಭಾರತದಲ್ಲಿ, ಅದನ್ನು ಮೀರಿ ಎಲ್ಲ ಸಮುದಾಯಗಳಿಗೂ ಕಲಿಕೆಗೆ ಮುಕ್ತ ಅವಕಾಶವಾಯಿತೋ ಹಾಗೆ ಉಡುಪು, ಕ್ರಾಪು ಕೂಡ ಎಲ್ಲರೂ ಧರಿಸುವಂತಹ ರೂಢಿ ಬರತೊಡಗಿತು. ಅದನ್ನು ನೋಡುವ ಮತ್ತು ಸ್ವೀಕರಿಸುವ ಸಂದರ್ಭಗಳಲ್ಲಿ ಆದ ಸಂಘರ್ಷ ಸಹಜವಾದುದಾಗಿದೆ.

ಮಲೆನಾಡಿನಲ್ಲಿ ಕೇವಲ ಆಧುನಿಕತೆಯ ಬಾಹ್ಯ ಬದಲಾವಣೆಗಳಷ್ಟೇ ಅಲ್ಲದೆ ಶಿಕ್ಷಣದಿಂದ ಮಲೆನಾಡಿನ ಯುವಕರಲ್ಲಿ ಉಂಟಾಗುತ್ತಿದ್ದ ವೈಚಾರಿಕ ಚಿಂತನೆ, ವೈಜ್ಞಾನಿಕ ಆಲೋಚನೆ ಹಾಗೂ ತಾತ್ವಿಕ ಜಿಜ್ಞಾಸೆಗಳೂ ಕೂಡ ಗಮನಾರ್ಹವಾದವು. ಈ ಬದಲಾವಣೆಗೆ ಮುಖ್ಯ ಕಾರಣ ಆಧುನಿಕತೆಯ ಜೊತೆಯಲ್ಲೇ ಬಂದ ಆಧುನಿಕ ಶಿಕ್ಷಣ ಪದ್ಧತಿ ಇದು ಪಾರಂಪರಿಕತೆಗೆ ಸವಾಲು ಒಡ್ಡುವ, ಪ್ರಶ್ನಿಸುವ ಮನೋಭಾವ ಬೆಳವಣಿಗೆಗೆ ಕಾರಣವಾಯಿತು.

ವಸಾಹತುಶಾಹಿಯ ಪರಿಣಾಮವಾಗಿ ಈ ದೇಶವನ್ನು ಪ್ರವೇಶಿಸಿದ ಬೈಬಲ್ ಅಥವಾ ಕ್ರೈಸ್ತಮತ ಪ್ರಸಾರದ ಕ್ರಿಯೆಗೆ ಕುವೆಂಪು ಅವರು ತಮ್ಮ 'ನೆನಪಿನ ದೋಣಿ'ಯಲ್ಲಿ ಈ ರೀತಿ ಪ್ರತಿಕ್ರಿಯಿಸಿದ್ದಾರೆ.

"ಇಂಗ್ಲಿಷ್ ಶಿಕ್ಷಣ ಆಗಲೇ ಮಲೆನಾಡ ಪರಿಸರದಲ್ಲಿ ಪ್ರಾರಂಭವಾಗಿತ್ತು. ಆದರೆ ಭೂತ-ಪ್ರೇತ-ಜಕ್ಕಿಣಿ ಇತ್ಯಾದಿಗಳನ್ನು ಪೂಜಿಸುತ್ತಾ ಮಲೆನಾಡಿನ ಒಕ್ಕಲಿಗರು ಇತರ ಶೂದ್ರವರ್ಗದವಂತೆ ಬ್ರಾಹ್ಮಣರೊಡ್ಡಿದ ಮತಾಚಾರದ ಮೌಢ್ಯಸಂಕುಲಗಳ ಬೋನಿನೊಳಗೆ ಸಿಕ್ಕಿಬಿದ್ದ ಇಲಿಗಳಾಗಿದ್ದರು.

ಆ ಇಲಿಗಳನ್ನು ಬೋನಿನಿಂದ ಬಿಡಿಸಲು ಕ್ರೈಸ್ತ ಪಾದ್ರಿಗಳು ತಮ್ಮ ರೀತಿಯ ಪ್ರಯತ್ನಗಳನ್ನು ಮಾಡಿ, ಆ ಬೋನಿನಿಂದ ಹೊರಬಂದವುಗಳನ್ನು ಹಿಡಿದು ಹಾಕಿಕೊಳ್ಳಲು ತಮ್ಮದೇ ಆಗಿರುವ ಬೇರೆಯ ಬೋನುಗಳನ್ನು ಒಡ್ಡಿಕೊಂಡಿದ್ದರು. ಶೂದ್ರರು ಬ್ರಾಹ್ಮಣ್ಯ ಮೌಢ್ಯದ ಬೋನಿನಿಂದ ನೆಗೆದರೆ, ಕ್ರೈಸ್ತ ಮೌಢ್ಯದ ಬೋನಿಗೆ ಬೀಳಬೇಕಾಗಿತ್ತು ಎರಡೂ ಪುರೋಹಿತಶಾಹಿಗಳೇ! ಎರಡು ಪುರೋಹಿತಶಾಹಿಗಳು ಬೋನಿನೊಳಗೆ ಇಲಿಗಳನ್ನಾಕರ್ಷಿಸಲು ಇಡುತ್ತಿದ್ದ ತಿಂಡಿಗಳ ರೂಪದಲ್ಲಿ ಬೇರೆ ಬೇರೆಯಾಗಿದ್ದರೂ, ಸ್ವರೂಪದಲ್ಲಿ ಒಂದೇ ತರಹದ್ದಾಗಿದ್ದವು". (ಕುವೆಂಪು., ನೆನಪಿನ ದೋಣಿಯಲ್ಲಿ ೨, ೨೦೦೨, ಪುಟ ೭೪೪)

ಕ್ರೈಸ್ತ ಪಾದ್ರಿಗಳ ಮತ ಪ್ರಸಾರ ಮತ್ತು ಮತಾಂತರ ಕಾರ್ಯಗಳನ್ನು ಕುವೆಂಪು ಮೆಚ್ಚಿಕೊಳ್ಳದಿದ್ದರೂ ಕ್ರೈಸ್ತ ಧರ್ಮದ ಸಮಾಜ ಸುಧಾರಣಾವಾದಿ ಕಾರ್ಯಗಳನ್ನು ಮೆಚ್ಚಿಕೊಳ್ಳುತ್ತಾರೆ. ಇವರ ಜೊತೆ ಜೊತೆಗೆ ಬಂದ ಶಿಕ್ಷಣ, ಆಸ್ಪತ್ರೆ, ರಸ್ತೆ, ಇತ್ಯಾದಿಗಳು ಸಮಾಜದಲ್ಲಿ ಪರಿವರ್ತನೆಗೆ ಕಾರಣವಾದ್ದುದರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಇಂತಹ ಕ್ರೈಸ್ತಮಿಷನರಿಗಳ ಪ್ರಚೋದನೆ ಪ್ರೋತ್ಸಾಹದಿಂದ ಮಲೆನಾಡಿನ ಎಷ್ಟೋ ಹುಡುಗರು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಹೋಗಲು ಸಾಧ್ಯವಾಯಿತು ಎಂಬ ಅಂಶವನ್ನು ಗುರುತಿಸುತ್ತಾರೆ. ಅಲ್ಲದೆ, "ದೈಯ್ಯ, ಭೂತ, ಜಕ್ಕಿಣಿ, ಕಲ್ಲುಟಿಗೆ ಮೊದಲಾದ ಪಿಶಾಚಿಗಳನ್ನು ಕುರಿತ ಭೀಕರ ಕತೆಗಳು ಕಿವಿಯ ಮೇಲೆ ಬೀಳುವ ಪರಿಸರದಲ್ಲಿ ಹುಟ್ಟಿ ಬೆಳೆದ ಕುವೆಂಪು, ಅವರ ಬಾಲ್ಯದ ಬದುಕಿನಲ್ಲಿ ದೇವರು, ಜೀವಲೋಕ, ಪರಲೋಕ ಇತ್ಯಾದಿ ಕಲ್ಪನೆಗಳು ಅವರ ಪ್ರಜ್ಞೆಯನ್ನು ಪ್ರವೇಶಿಸಿದ್ದು, ಕುಪ್ಪಳ್ಳಿಯ ಉಪ್ಪರಿಗೆ ಶಾಲೆಗೆ ಉಪಾಧ್ಯಾಯರಾಗಿ ಬಂದ ಮೋಸೆಸ್ ಮೇಷ್ಟರು ಇವರ ಕೈಗೆ ಕೊಟ್ಟ ಕನ್ನಡದಲ್ಲಿ ಅಚ್ಚಾದ 'ಮಾರ್ಕನ ಸುವಾರ್ತೆ'ಯಿಂದ". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೨೩)

ಈ ಅಂಶಗಳನ್ನು ಗಮನಿಸಿದಾಗ ಆಧುನಿಕತೆಯ ಬಗೆಗೆ ಕುವೆಂಪು ಅವರಿಗೆ ಒಲವು ಇರುವುದು ಸ್ಪಷ್ಟವಾಗುತ್ತದೆ. ಅವರ ಕಾದಂಬರಿಗಳಲ್ಲೂ ಇದು

ವ್ಯಕ್ತವಾಗಿದೆ. ಮತಾಂತರ ಪ್ರಕ್ರಿಯೆಯ ನಿರಾಕರಣೆ ಮತ್ತು ಅದೇ ಸಂದರ್ಭದಲ್ಲಿ ಅದು ತಂದುಕೊಡುವ ಆಧುನಿಕತೆಯನ್ನು ಗೌರವದಿಂದಲೇ ಸ್ವಾಗತಿಸುವ ಮೂಲಕ ಸುಧಾರಣೆಯನ್ನು ಬಯಸುವ ಮನಸ್ಸನ್ನು, ಪ್ರತಿಕ್ರಿಯೆಯನ್ನು ಇವರ ಕೃತಿಗಳಲ್ಲಿ ಸ್ಪಷ್ಟವಾಗಿ ನೋಡಬಹುದು.

ಮಲೆನಾಡಿಗೆ ಆಧುನಿಕತೆ ಹಾಗೂ ಕ್ರೈಸ್ತ ಮಿಷನರಿಗಳ ಪ್ರವೇಶವಾಗಿ ಇಲ್ಲಿನಜನರ ಮನಸ್ಸನ್ನು ಪರಿವರ್ತನೆಗೊಳಿಸಿತು. ಹೋಟೆಲ್, ಸೈಕಲ್, ಆಸ್ಪತ್ರೆ, ಸಿಗರೇಟು ಮೊದಲಾದವು ಗಳಿಂದ ಜನರ ಮನಸ್ಸಿನ ಅನುಭವ, ಸಂವೇದನೆ ಭಿನ್ನರೀತಿಯಲ್ಲಿ ರೂಪುಗೊಂಡಿತು. ಜೊತೆಗೆ ರಾಮಯ್ಯ-ಹೂವಯ್ಯ ವಿಧ್ಯಾಭ್ಯಾಸಕ್ಕಾಗಿ ಮಲೆನಾಡನ್ನು ಬಿಟ್ಟು ಮೈಸೂರಿಗೆ ಬಂದದ್ದು ಅತ್ಯಂತ ಸ್ಥಿತ್ಯಂತರಗೊಂಡ ಸಮಾಜದ ಚಿತ್ರಣವಾಗಿದೆ. ಹೀಗೆ ಹಳ್ಳಿ ಮತ್ತು ನಗರ ಒಂದಾದ ಕಲ್ಪನೆ ಜನರಲ್ಲಿ ಮೂಡಿ, ಅವರ ಮನೋಭಾವಗಳಲ್ಲೂ ಬದಲಾವಣೆಗೊಳ್ಳಲು ಪ್ರಾರಂಭವಾಯಿತು.

ಈ ಹಿನ್ನೆಲೆಯಲ್ಲಿ ವೆಂಕಪ್ಪಯ್ಯ ಜೋಯಿಸರ ಮುಖ್ಯ ಉದ್ಯೋಗವಾಗಿರುವ 'ದೇವರ ಪೂಜೆ, ನಿಮಿತ್ತ ನೋಡುವುದು, ಭವಿಷ್ಯ ಹೇಳುವುದು, ಜಾತಕ ಬರೆಯುವುದು ಲಗ್ನಕ್ಕೆ ಮುಹೂರ್ತ ಇಡುವುದು, ಶೂದ್ರರ ಭೂತಾದಿಗಳಿಗೆ ರಕ್ತದ ಬಲಿಕೊಡುವ ಮೊದಲು ಹಣ್ಣುಕಾಯಿ ಮಾಡುವುದು, ಮಂತ್ರದಿಂದ ದೆವ್ವಗಳನ್ನು ಬಿಡಿಸುವುದು' – ಇವುಗಳಿಂದ ಇಲ್ಲಿನ ಜನರಿಗೆ ಅವರನ್ನು ಕಂಡರೆ ಭಯಭಕ್ತಿ. ಅಲ್ಲದೇ, ಶಿಕ್ಷಣ ಕಲಿಕೆಯ ಬಗೆಗೆ ವೆಂಕಪ್ಪಯ್ಯ ಜೋಯಿಸರ ಧೋರಣೆ 'ಈಗಿನ ವಿಧ್ಯಾಬ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ.

ಅಲ್ಲದೆ ದೇವರು ದಿಂಡರು ಭಕ್ತಿ ಗಿಕ್ತಿ ಎಲ್ಲವೂ ನಿರ್ನಾಮವಾಗುವುದರ ಜೊತೆಗೆ ನೂರಾರು ಹವ್ಯಾಸಗಳನ್ನು ಕಲಿತು ಮನೆ-ಜಮೀನೆಲ್ಲಾ ಹಾಳು ಮಾಡುತ್ತಾರೆ' ಎಂಬುದು.

ಆದರೆ ಆಧುನಿಕ ಶಿಕ್ಷಣ ಪಡೆದ ಹೂವಯ್ಯ ರಾಮಯ್ಯರ ಮನಸ್ಸುಗಳು ಮೌಢ್ಯವನ್ನು ಪ್ರತಿರೋಧಿಸುವ 'ವೈಚಾರಿಕ ನೆಲೆ'ಯಲ್ಲಿ ಸಮಾಜವನ್ನು ವಿಮರ್ಶಿಸತೊಡಗುತ್ತವೆ. ಅನಾರೋಗ್ಯಕ್ಕೆ ಔಷಧಿ ಮಾಡುವ ಬದಲು ಬರಿಯ ಬೂದಿ ವಿಭೂತಿಗಳನ್ನು ಹಚ್ಚುವಂತೆ ಹೇಳುವ ಜೋಯಿಸರಿಗೆ ಹೂವಯ್ಯ ಹೇಳುವ ಈ

ಕೇಳಕಂಡ ಮಾತುಗಳು, ಶಿಕ್ಷಣ ಪಡೆದ ಜನರು ಮೌಢ್ಯದಿಂದ ಕೂಡಿದ ಸಮಾಜವನ್ನು ಸುಧಾರಿಸಬೇಕಾದ ಅಗತ್ಯತೆ ಹಾಗೂ ಅನಿವಾರ್ಯತೆಗಳನ್ನು ತಿಳಿಸುತ್ತದೆ.

"ನೀವು ತಿಳಿದವರೆಂದುಕೊಂಡು ಹಳ್ಳಿಯವರಿಗೆ ಮೌಢ್ಯವನ್ನೇ ಉಪದೇಶಮಾಡಿ ನಿಮಿತ್ತ ಹೇಳುವುದು, ವಿಭೂತಿ ಕೊಡುವುದು, ಸತ್ಯನಾರಾಯಣ ವ್ರತ ಮಾಡಿಸುವುದು, ದೆವ್ವ ಪಿಶಾಚಿಗಳಿಗೆ ಬಲಿ ಕೊಡಿಸುವುದು ಇದರಿಂದ ಹೊಟ್ಟೆಹೊರೆದುಕೊಳ್ಳುತ್ತಿದ್ದೀರಿ. ಟ್ರಂಕು ತಗುಲಿ ಬೆನ್ನು ನೋವಾಗಿದ್ದರೆ ಔಷಧಿ ಮಾಡಿ ಎನ್ನುವ ಬದಲು, ಬೂದಿ ಕುಂಕುಮ ಹಚ್ಚಿ ಮಂತ್ರ ಹಾಕಿಸಿ ಎಂದು ಹೇಳುತ್ತಿದ್ದೀರಲ್ಲ ಇದು ಯಾವ ತತ್ವಶಾಸ್ತ್ರದಲ್ಲಿ ಹೇಳಿದೆ? ಹಾಗೆ ಹೇಳಿರುವ ಗ್ರಂಥಗಳಿದ್ದರೆ, ಅವು ಮನ್ನಣೆಗೆ ಯೋಗ್ಯವಿರುವುವೆ? ನಿಮ್ಮ ಬೋಧನೆಯಿಂದ ಎಷ್ಟು ಜನರು ರೋಗಕ್ಕೆ ಸರಿಯಾಗಿ ಮದ್ದು ಮಾಡದೆ, ಬರಿಯ ಬೂದಿ ಕುಂಕುಮ ಹಚ್ಚಿಕೊಂಡು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಜೋಯಿಸರೇ, ದಯವಿಟ್ಟು ಕ್ಷಮಿಸಿ ತಾನು ಮಾತನಾಡಿದ್ದು ನಿಮ್ಮ ಮೇಲೆ ಅಗೌರವದಿಂದಲ್ಲ. ನಿಮ್ಮ ತತ್ತ್ವಗಳಿಂದ ಜನರಿಗೆ ಎಷ್ಟು ಹಾನಿಯಾಗುತ್ತದೆ ಎಂದು ಹೇಳಿದೆನಷ್ಟೆ. ನಿಮ್ಮ ಮನಸ್ಸಿನಲ್ಲಿ ಕೃತ್ರಿಮತೆ ಇಲ್ಲವೆಂದ ಮಾತ್ರಕ್ಕೆ ನೀವು ಹೇಳುವುದೆಲ್ಲ ಸತ್ಯವಾಗಲಾರದು...." (ಕುವೆಂಪು., ಕಾನೂರು ಹೆಗ್ಗಡಿತಿ, ೨೦೦೭, ಪುಟ ೧೦೪)

ಹೀಗೆ ಆಧುನಿಕತೆಯು, ಇಂಗ್ಲಿಷ್ ಶಿಕ್ಷಣ ಪಡೆದ ವಿಚಾರವಂತಿಕೆ ರೂಢಿಸಿಕೊಂಡ ಪ್ರಜ್ಞಾವಂತ ಯುವಜನರ ಮೂಲಕ ಸಮಾಜವನ್ನು ವಿಮರ್ಶಿಸುವ, ಮೌಢ್ಯವನ್ನು ಪ್ರಶ್ನಿಸುವ, ಅಸ್ಪೃಶ್ಯತೆಯನ್ನು ಅಲ್ಲಗಳೆಯುವ 'ವೈಚಾರಿಕ ಜಾಗೃತಿ'ಗೆ ನಾಂದಿಯಾಗುತ್ತದೆ. ಈ ಅಂಶಗಳನ್ನು ಕುವೆಂಪು ಅವರ ಕಾದಂಬರಿಗಳಲ್ಲಿ ಕಾಣಬಹುದು.

'ಕಾನೂರು ಹೆಗ್ಗಡಿತಿ'ಯಲ್ಲಿ ಪುಟ್ಟಮ್ಮ ಹಾಗೂ ಚಿನ್ನಯ್ಯರ ಮಗುವಿಗೆ ಜೋಯಿಸರು 'ಕರಿಯ' ಎಂಬ ಹೆಸರನ್ನು ಸೂಚಿಸುತ್ತಾರೆ. ಕೋಪಗೊಂಡ ಚಿನ್ನಯ್ಯನು ಪುರೋಹಿತರನ್ನು ಟೀಕಿಸುವ ಈ ಮಾತುಗಳನ್ನು ಗಮನಿಸಬಹುದು.

"ಈ ಹಾರುವರ ದೆಸೆಯಿಂದ ಉಳಿಗಾಲವಿಲ್ಲ. ವಿದ್ಯೆ ಬುದ್ಧಿ ಚೆನ್ನಾಗಿ ಕೊಡಲಿಲ್ಲವಲ್ಲ ಹೋಗಲಿ. ಒಳ್ಳೊಳ್ಳೆ ಹೆಸರುಗಳನ್ನಾದರೂ ಇಟ್ಟುಕೊಡಬಾರದೇ

ಅದಕ್ಕೂ ಹೊಟ್ಟೆಕಿಚ್ಚು ಅಂತ ಕಾಣ್ತದೆ. ಕರಿಯ, ತಿಮ್ಮ, ಕಾಳ, ಬೋಳ ಇವೇ ನಮ್ಮ ಪಾಲಿಗೆ!" (ಕುವೆಂಪು, ಕಾನೂರು ಹೆಗ್ಗಡಿತಿ, ೧೯೯೮, ಪುಟ ೩೨೦)

ಇದು ನಿಜಕ್ಕೂ ಮಲೆನಾಡ ಸಮಾಜದಲ್ಲಿ ಪುರೋಹಿತಶಾಹಿಗಳ ಶೋಷಣೆಗೆ 'ಪ್ರತಿರೋಧದ ಅಲೆ' ಪ್ರಾರಂಭವಾಗಿರುವುದರ ಮುನ್ಸೂಚನೆ ಹಾಗೂ ಹೂವಯ್ಯನಂತಹ ಓದಿದವರ ಸಂಸರ್ಗದಿಂದ ಉಂಟಾಗಿರುವ ಬದಲಾವಣೆಯ ಮನೋಭಾವ ಎಂಬುದು ಕಾಣುತ್ತದೆ. ಹೂವಯ್ಯನ ಸಲಹೆಯ ಮೇರೆಗೆ ಆ ಮಗುವಿಗೆ ರಮೇಶ ಎಂದು ನಾಮಕರಣ ಮಾಡುವುದು, ಆಧುನೀಕರಣದ ಗಾಳಿಗೆ ಸಿಕ್ಕಿ ಶೂದ್ರರು ಸಂಸ್ಕೃತೀಕರಣಗೊಳ್ಳುತ್ತಿರುವುದಕ್ಕೆ ಸಾಕ್ಷಿಯಾಗಿದೆ.

ಈ ರೀತಿಯ ಪ್ರಶ್ನೆಗಳು ಕೂಲಿಮಠಕ್ಕೆ ಹೋಗುವ ಮಕ್ಕಳಾದ ತಿಮ್ಮ, ಧರ್ಮ, ಕಾಳ ಇವರಲ್ಲೂ ಹುಟ್ಟುವುದನ್ನು ಕಾಣಬಹುದು. ಇವರಿಗೂ ಪುರೋಹಿತ ವಿರೋಧಿ ಭಾವನೆ ಇದೆ. ಕಲ್ಲೂರು ಮಂಜಯ್ಯ ಭಟ್ಟರ ಮನೆಯ ಒಳಗೆ ಊಟ ಹಾಕದೆ ಹೊರಂಗಳದ ಮೂಲೆಯಲ್ಲಿ ಬಡಿಸಿದ್ದನ್ನು ತಂದೆ ಗೋಮಯ ಹಾಕಿದ್ದನ್ನು ನೆನಪುಮಾಡಿಕೊಳ್ಳುವ ಕಾಡು ಹೇಳುತ್ತಾನೆ.

'ನಂಗೆ ಇಸ್ಸೀ ಅನಿಸಿಬಿಟ್ಟಿತು. ಇನ್ನು ಎಂದೆಂದಿಗೂ ಅವರ ಮನೆಯಲ್ಲಿ ಊಟ ಮಾಡಬಾರ್ದು ಅಂತ ಮಾಡಿಬಿಟ್ಟೀನಿ' ಆಧುನಿಕ ಶಿಕ್ಷಣ ಪಡೆದು ಮರಳಿ ಮಲೆನಾಡು ಪ್ರವೇಶಿಸಿದ ಹೂವಯ್ಯನಂತಹ ಯುವಕರಲ್ಲಿ ಬಾಹ್ಯವಾಗಿ ಮತ್ತು ಆಂತರಿಕವಾಗಿ ಬದಲಾವಣೆಗಳು ಸಹಜವಾಗಿಯೇ ಗೋಚರಿಸುತ್ತವೆ. ಆಧುನಿಕ ಶಿಕ್ಷಣ ಪಡೆದು ವೈಚಾರಿಕ ಮತ್ತು ವೈಜ್ಞಾನಿಕ ಮನೋಭಾವ ಬೆಳೆಸಿಕೊಂಡ ಇವರು ತಮ್ಮದೇ ಪರಿಸರದ ಮೌಢ್ಯ, ಕಂದಾಚಾರ, ಜಾತೀಯತೆ ಮೊದಲಾದ ಸಂಗತಿಗಳ ಬಗ್ಗೆ ವಿರೋಧದ ನೆಲೆಯಲ್ಲಿ ದನಿ ಎತ್ತುವುದು ಸಹಜವೇ ಆಗಿದೆ. ಇವರು ಅಸಹಾಯಕರ, ದಲಿತರ ಪರವಾದ ದೃಷ್ಟಿಕೋನದಿಂದ ಸುಧಾರಣೆ ತರಲು ಪ್ರಯತ್ನಿಸುವರು. ಆದ ಕಾರಣ ಅವರು ತಮ್ಮ ಉಡುಪು ಸ್ವಚ್ಛತೆ ನಡವಳಿಕೆಗಳಿಂದ ಆ ಪರಿಸರದ ಮೇಲೆ ಪ್ರಭಾವ ಬೀರಬಲ್ಲವರಾಗಿದ್ದರು.

ಇವರ ದಿಸೆಯಿಂದ 'ಪರಿವರ್ತನೆಯ ನಿರೀಕ್ಷೆ' ಕುವೆಂಪು ಅವರ ಆಶಯವಾಗಿತ್ತು. ಅದಕ್ಕೆ ಪೂರಕವಾಗಿ, ಕಾನೂರು ಹೆಗ್ಗಡಿತಿ ಕಾದಂಬರಿಯ ಕೊನೆಯ ಭಾಗದಲ್ಲಿ ಸುಮಾರು ಹತ್ತು ವರ್ಷಗಳ ನಂತರ ಬದಲಾಗಿರುವ ಪರಿಸರವನ್ನು ಗುರುತಿಸಲಾಗಿದೆ. ಎರಡು ಊರುಗಳ ಮಧ್ಯೆಯಿದ್ದ ಕಳ್ಳಂಗಡಿ

ಕುಸಿದು ಬಿದ್ದಿತ್ತು. ಹೊಸದಾಗಿ ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು, ಅಂಗಡಿಗಳು ತಲೆಯೆತ್ತಿದ್ದವು. ಬಸ್ಸಿನ ಪ್ರವೇಶವಾಗಿತ್ತು. ವೃತ್ತಪತ್ರಿಕೆಗಳು ಬರುತ್ತಿದ್ದವು. ಕೆಲಸದ ಆಳುಗಳು ಚೊಕ್ಕಟವಾಗಿ ಬದುಕಲು ತೊಡಗಿದ್ದರು. ಅವರ ಮಕ್ಕಳು ಅಕ್ಷರಸ್ಥರಾಗತೊಡಗಿದರು ಮುಂತಾಗಿ ಆಧುನಿಕತೆ ಬಲವಾಗಿ ಹೆಜ್ಜೆಯೂರಿ ಹಲವು ಉತ್ತಮ ಬದಲಾವಣೆಗಳನ್ನು ತಂದಿದ್ದನ್ನು ಗುರುತಿಸಬಹುದು. ಮಲೆನಾಡಿನ ಬದುಕಿನಲ್ಲಿ ಹಲವಾರು ಸ್ಥಿತ್ಯಂತರಗಳಿಗೆ 'ಆಧುನಿಕತೆ' ಪ್ರಮುಖ ಕಾರಣ ಎಂಬುದನ್ನು ಕುವೆಂಪು ಕಾದಂಬರಿಗಳಲ್ಲಿ ಈ ರೀತಿ ಗುರುತಿಸಬಹುದಾಗಿದೆ.

ಕುವೆಂಪು ಅವರು ನವೋದಯ ಕಾಲದಲ್ಲಿ ಕೃತಿರಚನೆಗೆ ತೊಡಗಿದವರು. ಈ ಕಾಲಘಟ್ಟದಲ್ಲಿ ರಚನೆಯಾದ ಬಹುತೇಕ ಎಲ್ಲಾ ಕೃತಿಗಳಲ್ಲೂ 'ಆಧುನಿಕತೆ'ಯ ಬಗೆಗೆ ಧನಾತ್ಮಕ ಒಲವು ಹೆಚ್ಚಾಗಿರುವುದನ್ನೇ ಕಾಣಬಹುದಾಗಿದೆ. ಇದು ಸಹಜವೂ ಹೌದು. ಈ ಕಾಲಘಟ್ಟದ ನವೋದಯ ಮನಸ್ಥಿತಿಗಳು ಆಧುನಿಕತೆಯನ್ನು ಅಚ್ಚರಿ, ಸಂಭ್ರಮಗಳಿಂದಲೇ ಸ್ವಾಗತಿಸಿವೆ. ಅವರ ಕೃತಿಗಳಲ್ಲೂ ಪಾತ್ರಗಳಲ್ಲೂ ಈ ಅಂಶಗಳು ವ್ಯಕ್ತವಾಗಿರುವುದನ್ನು ಈಗಾಗಲೇ ಚರ್ಚಿಸಲಾಗಿದೆ. ತೇಜಸ್ವಿ ಅವರು ಅರವತ್ತರ ದಶಕದಲ್ಲಿ ಸಾಹಿತ್ಯ ರಚನೆ ಆರಂಭಿಸಿದವರು. ಕುವೆಂಪು ಕೃತಿಗಳಲ್ಲಿ ಆಧುನಿಕತೆಯ ಬಗೆಗೆ ಸಂಭ್ರಮ ಕಂಡರೆ, ತೇಜಸ್ವಿ ಕೃತಿಗಳಲ್ಲಿ ಆಧುನಿಕತೆ ಸೃಷ್ಟಿಸುವ ಅವಾಂತರಗಳ ಬಗೆಗೆ ಗಮನ ಕೇಂದ್ರೀಕರಿಸುವುದನ್ನು ಕಾಣುತ್ತೇವೆ. ಆಧುನಿಕತೆ ಎಂಬುದು ಸಾಂಪ್ರದಾಯಿಕ ಮನೋಭಾವವನ್ನು ಬದಲಾವಣೆ ಮಾಡುವ ಸಾಧನವಾಗಿದ್ದರೂ ಅದರಿಂದಾಗುವ ಅವಾಂತರಗಳು ಅನೇಕ. 'ಸಾಮಾಜಿಕ ಸ್ಥಿತ್ಯಂತರ'ಗಳು 'ಪರಿಸರ ನಾಶ', 'ಸಂಸ್ಕೃತಿ ನಾಶ'ದಂತಹ ಘಟನೆಗಳಿಗೆ ಆಧುನಿಕತೆಯೇ ಕಾರಣ ಎಂಬುದನ್ನು ತೇಜಸ್ವಿ, ತಮ್ಮ ಕಥೆ-ಕಾದಂಬರಿಗಳಲ್ಲಿ ವ್ಯಕ್ತಪಡಿಸಿದ್ದಾರೆ. ಅವರ 'ಅಬಚೂರಿನ ಪೋಸ್ಟಾಫೀಸು' 'ತುಕ್ಕೋಜಿ'ಯಂತಹ ಕತೆಗಳು ಹಾಗೂ 'ಕರ್ವಾಲೋ' 'ಜುಗಾರಿಕ್ರಾಸ್' 'ಮಾಯಾಲೋಕ' ಕಾದಂಬರಿಗಳಲ್ಲಿ 'ಆಧುನಿಕತೆಯ ಸಂಘರ್ಷ'ವನ್ನು ಕಾಣಬಹುದು.

'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ನೂರು ವರ್ಷಗಳ ಹಿಂದಿನ ಮಲೆನಾಡಿನ ಪರಿಸರಕ್ಕೆ 'ಆಧುನಿಕತೆ'ಯ ಹೆಸರಲ್ಲಿ ಆಗಮನವಾಗುವ ವಸ್ತುಗಳ ಬಗೆಗೆ ಸ್ವೀಕಾರ ಮನೋಭಾವ ಪ್ರಗತಿಯ ಸಂಕೇತ ಎಂಬ ಭಾವ ವ್ಯಕ್ತವಾಗಿರುವುದನ್ನು ಕಾಣಬಹುದು. ಆದರೆ ತೇಜಸ್ವಿ ಅವರು ತಮ್ಮ ಕೃತಿಗಳಲ್ಲಿ 'ಆಧುನಿಕತೆ'ಯು, ಸ್ಥಳೀಯ ಗುಡಿಕೈಗಾರಿಕೆಗಳು ಹಾಗೂ ಸ್ಥಳೀಯ ತಂತ್ರಜ್ಞಾನದ

ಮೇಲೆ ಮಾಡುತ್ತಿರುವ ಆಕ್ರಮಣವನ್ನು ವಿರೋಧಿಸುತ್ತಾರೆ. ಜಾಗತೀಕರಣದ ಪರಿಣಾಮದಿಂದಾಗಿ, ಕೃಷಿ ಹಾಗೂ ಗುಡಿ ಕೈಗಾರಿಕೆಗಳ ಮೇಲಾಗುತ್ತಿರುವ ದುಷ್ಪರಿಣಾಮಗಳ ಬಗೆಗೆ ಎಲ್ಲರ ಗಮನ ಸೆಳೆಯುತ್ತಾರೆ. 'ಜುಗಾರಿ ಕ್ರಾಸ್' ಕಾದಂಬರಿಯ 'ಮೇದರಳ್ಳಿಯ ಅವಸಾನ' ಎಂಬ ಅಧ್ಯಾಯ ಆಧುನಿಕತೆಯಿಂದ 'ಸಂಸ್ಕೃತಿ ನಾಶ' ಆಗುತ್ತಿರುವುದನ್ನು ಸಶಕ್ತವಾಗಿ ಚಿತ್ರಿಸಿದೆ.

"ಮೇದರಳ್ಳಿ ಅಲ್ಲಿ ಮೊಳಕೆಯೊಡೆದು ಚಿಗುರಿದ್ದಕ್ಕೆ ಕಾರಣ ಅದರ ಆಸುಪಾಸಿನಲ್ಲಿ ಸಾವಿರಾರು ಚದರ ಮೈಲಿ ಅಕ್ಷಯವಾಗಿ ಬೆಳೆದಿದ್ದ ಹೆಬ್ಬಿದರು, ವಾಟೆ ಬಿದಿರು, ಕಿರು ಬಿದಿರು ಇತ್ಯಾದಿಗಳು. ಅಲ್ಲಿನ ಬಿದಿರು ಎಷ್ಟು ಒಳ್ಳೆಯದೆಂದರೆ ತಲೆಯಿಂದ ಬುಡದವರೆಗೆ ತೆಳ್ಳಗೆ ದಾರದಂತೆ ಸೀಳಬಹುದಿತ್ತು. ಸಿಂಗಾಪುರದ ಬೆತ್ತದ ಹಾಗೆ ಬೆಳ್ಳಗೆ ಹೊಳೆಯುವ ಈ ಬಿದಿರು ಬೇಕಾದ ಆಕಾರಕ್ಕೆ ಬಗ್ಗಿಸಿದರೂ ಮುರಿಯದೆ ಸಿಬಿರೇಳದೆ ಹೇಳಿದ ಹಾಗೆ ಕೇಳುತ್ತಿತ್ತು. ಮೇದರಹಳ್ಳಿಯಲ್ಲಿ ಮಾಡಿದ ಭತ್ತದ ತಡಿಕೆಗಳೂ, ಬುಟ್ಟಿ, ಮೊರ, ಕೂಣಿಗಳೂ ಕರ್ನಾಟಕದಾದ್ಯಂತ ಹೆಸರು ವಾಸಿಯಾಗಿದ್ದವು. ಆದರೆ ಈ ಹಳ್ಳಿ ನಿಜಕ್ಕೂ ಪ್ರವರ್ಧಮಾನಕ್ಕೆ ಬಂದಿದ್ದು ಯುರೋಪಿಯನ್ನರ ಕಾಲದಲ್ಲಿ.

ಕಾಫಿ ತೋಟದ ದೊರೆಗಳಿಗೆ ಕಾಫಿ ಸಸಿಗಳನ್ನು ಬೆಳೆಸಲು ಬೇಕಾಗಿದ್ದ ಬಿದಿರಿನ ಚಿಕ್ಕ-ಚಿಕ್ಕ ಕುಕ್ಕೆಗಳು ಮೇದರ ಹಳ್ಳಿಯಿಂದಲೇ ಸರಬರಾಜಾಗುತ್ತಿದ್ದದು. ದೊಡ್ಡ ದೊಡ್ಡ ಯುರೋಪಿಯನ್ ದೊರೆಗಳೆಲ್ಲ ಮೇದರಹಳ್ಳಿಗೆ ಭೇಟಿ ಕೊಟ್ಟು ಮುಂಗಡ ಹಣ ಕೊಟ್ಟು ಲಕ್ಷಾಂತರ ಕಾಫಿ ಕುಕ್ಕೆಗಳಿಗೆ ಆರ್ಡರ್ ಬುಕ್ ಮಾಡುತ್ತಿದ್ದರು. ಕಾಫಿ ತೋಟಗಳು ವಿಸ್ತರಿಸುತ್ತಾ ಹೋದಂತೆ ಮೇದರಹಳ್ಳಿಯ ವ್ಯವಹಾರಗಳೂ ವಿಸ್ತರಿಸುತ್ತಾ ಹೋದವು. ಸ್ವಾತಂತ್ರ್ಯಾನಂತರ ಬ್ರಿಟಿಷರೆಲ್ಲಾ ಭಾರತದಿಂದ ನಿರ್ಗಮಿಸಿದ ಮೇಲೂ ಮೇದರಹಳ್ಳಿಯ ವಹಿವಾಟೇನು ಕಡಿಮೆಯಾಗಲಿಲ್ಲ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಜುಗಾರಿಕ್ರಾಸ್, ೨೦೦೯, ಪುಟ ೬)

ಹೀಗೆ ಬಿದರಿನ 'ಗುಡಿ ಕೈಗಾರಿಕೆ' ನಮ್ಮ ಪ್ರಾಚೀನ ಸಂಸ್ಕೃತಿಯಾಗಿದ್ದು, ಈ ಕೈಕಸುಬುಗಳಿಂದ ಇಡೀ ಗ್ರಾಮಕ್ಕೆ ಹೆಸರು ಬಂದಿದ್ದು, ಪ್ರಸಿದ್ಧಿಯಾಗಿರುವುದನ್ನು, ದೇಸೀ ಸಂಸ್ಕೃತಿಯ ಮಹತ್ವವನ್ನು ತೇಜಸ್ವಿ ಅವರು ಹೇಳಿದ್ದಾರೆ. ಜೊತೆಗೆ ಈ ಸುಧೀರ್ಘ ಪರಂಪರೆ ಹೊಂದಿದ್ದ, ದೇಸೀ ಕೈ-ಕಸುಬು ಕಣ್ಮರೆಯಾದ ದುರಂತವನ್ನು ಕೂಡ ಅಷ್ಟೇ ವಾಸ್ತವ ದೃಷ್ಟಿಕೋನದಲ್ಲಿ ಚಿತ್ರಿಸಿದ್ದಾರೆ.

ಹಾಗಾದರೆ ಏಕೆ ಈ ಹಳ್ಳಿ ಹಾಳೂರಾಯ್ತು? ಎಂಬುದಕ್ಕೆ ಅವರು ಕೊಡುವ ಕಾರಣ ನಿಜಕ್ಕೂ ಅಚ್ಚರಿ ಎನಿಸುತ್ತದೆ. "ನಾಗರಿಕತೆಯೊಳಗೆ ಪ್ಲಾಸ್ಟಿಕ್ ಕಾಲಿಟ್ಟಾಗ ಈ ತೆಳ್ಳನೆ ಪಾರದರ್ಶಕವಾಗಿ ಮಿಂಚುವ ಮೋಹಿನಿಯ ವಿಶ್ವರೂಪ ಯಾರಿಗೂ ಗೊತ್ತಿರಲಿಲ್ಲ. ಅನೇಕ ಹಳ್ಳಿ, ಮನೆತನ, ಬುಡಕಟ್ಟುಗಳ ನಿರ್ನಾಮಕ್ಕೆ ಇದು ಕಾರಣವಾದೀತೆಂದು ಯಾರೂ ಕನಸು ಮನಸಿನಲ್ಲೂ ಊಹಿಸಿರಲಿಲ್ಲ. ಖಾಲಿ ಜಾಗಗಳ ಸಂದುಗೊಂದು ಗಳೊಳಗೆಲ್ಲಾ ಹಬ್ಬಿ ಆಕ್ರಮಿಸುವ ಪಾರ್ಥೆನಿಯಮ್, ಯುಪಟೋರಿಯಮ್ ಕಳೆಗಳಂತೆ ಪ್ಲಾಸ್ಟಿಕ್ ಪಾಲಿಯುರಿಥೇನ್ ಪಾಲಿಎಥಲೀನ್, ಪಾಲಿಪೈಬರ್, ಪಾಲಿಮಾರ್ ಹೀಗೆ ನಾನಾ ಅವತಾರಗಳನ್ನೆತ್ತಿ ಮಾರುಕಟ್ಟೆಯ ಎಲ್ಲ ಕ್ಷೇತ್ರಗಳಿಗೆ, ಎಲ್ಲ ಅವಕಾಶಗಳಿಗೆ ಮುತ್ತಿಗೆ ಹಾಕಿತು.

ನಿಧಾನವಾಗಿ ಕಾಫಿ ಮೊಳಕೆಗಳನ್ನು ನೆಡುವ ಬಿದುರಿನ ಕುಕ್ಕೆಗಳ ಬದಲಾಗಿ ಪ್ಲಾಸ್ಟಿಕ್ ಚೀಲಗಳು ಬಂದವು. ಗಾಳಿ, ಮಳೆ, ಬಿಸಿಲು ಇವು ಯಾವುದಕ್ಕೂ ಜಗ್ಗದ ಈ ತೆಳ್ಳಗಿನ ಕಾಗದಂತಹ ಪ್ಲಾಸ್ಟಿಕ್ ಚೀಲಗಳು ಕಾಫಿ ಪ್ಲಾಂಟರುಗಳ ಮನ ಗೆಲ್ಲಲು ಕೆಲವೇ ವರ್ಷಗಳು ಸಾಕಾದವು. ಮೇದರ ಹಳ್ಳಿಯ ಬಿದುರಿನ ಕುಕ್ಕೆಗಳನ್ನಾದರೋ ಸಾವಿರಗಟ್ಟಲೆ ಸಾಗಿಸುವುದೇ ದೊಡ್ಡ ಗೋಳು. ಅವುಗಳನ್ನು ಪ್ಲಾಸ್ಟಿಕ್ ಚೀಲದಂತೆ ಮಡಚಿ ತುರುಕುವ ಹಾಗೂ ಇಲ್ಲ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಜುಗಾರಿಕ್ರಾಸ್, ೨೦೦೯, ಪುಟ ೧೦)

ಈ ಎಲ್ಲಾ ಕಾರಣಗಳಿಂದಾಗಿ ಮೇದರಹಳ್ಳಿಗೆ ಜನ ದುಂಬಾಲು ಬಿದ್ದು, ಗೋಗರೆದು ಕುಕ್ಕೆ ತೆಗೆದುಕೊಂಡು ಹೋಗುವುದು ತಪ್ಪಿತು. ಜೊತೆಗೆ ಬಿದುರಿಗೆ ನೆರೆ ಬಂದು, ಇಡೀ ಊರಿಗೆ ಊರೇ ತಮ್ಮ ಕಸುಬನ್ನು ಬಿಡಲೇಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ಅವರಿದ್ದ ಕಗ್ಗಾಡಿನಲ್ಲಿ ಬೇರಾವುದೇ ಉದ್ಯೋಗ ದೊರೆಯದ ಕಾರಣ ಹೊಟ್ಟೆಪಾಡಿಗಾಗಿ ಇಡೀ ಊರು ಅನೇಕ ಕಾಳದಂಧೆಗೆ ತೊಡಗಿದರು. ಹಲವರು ಊರು ಬಿಟ್ಟು ಹೋದರು. ಗಂಧದ ಕಳ್ಳ ಸಾಗಾಣಿಕೆ, ಕಳ್ಳಭಟ್ಟಿ ಇಳಿಸುವುದು, ಕುಳು ಮಾವಿನ ಚಕ್ಕೆ ತೆಗೆಯುವುದು. ಮಾದಕ ವಸ್ತು ಸಾಗಾಣಿಕೆ, ಗಾಂಜಾ ಉತ್ಪಾಧಿಸಿ ರವಾನಿಸುವುದು ಹೀಗೆ ಇಲ್ಲಿನ ಜನ ಇಂತಹ ಕುಕೃತ್ಯಗಳಿಗೆ ತೊಡಗಿ, ವಿಶ್ವಸಂಸ್ಥೆಯ ಮಾದಕವಸ್ತು ಜಾಲದ ಮ್ಯಾಪಿನಲ್ಲಿ ಗುರುತಿಸಲ್ಪಟ್ಟಿರುವ ಊರಾಗಿ ಮಾರ್ಪಾಡಾಗಿದೆ ಎಂದರೆ. ಅದು ಆಧುನಿಕತೆಯಂತಹ ಮಾರಿಯ ಪರಿಣಾಮ ಎಂಬುದನ್ನು ತೇಜಸ್ವಿ ವಿಷಾದದಿಂದ ನಿರೂಪಿಸಿದ್ದಾರೆ.

ಹಣದ ದುರಾಸೆಗೆ ಬಿದ್ದು ಕಾಳದಂಧೆಗೆ ತೊಡಗಿದ ಜನರ ದೌರ್ಬಲ್ಯವನ್ನು ಚಿತ್ರಿಸುವ ಜೊತೆಗೆ ದೇಶೀ ಸಂಸ್ಕೃತಿಯಾದ 'ಗುಡಿ ಕೈಗಾರಿಕೆಗಳ ಮಹತ್ವ'ವನ್ನು ತೇಜಸ್ವಿ ಹೇಳುತ್ತಾರೆ.

'ಏನೇ ಆದರೂ ಪ್ಲಾಸ್ಟಿಕ್ ಕುಕ್ಕೆಗಳಲ್ಲಿ ಬಿದಿರು ಬುಟ್ಟಿಯಲ್ಲಿ ಬಂದ ಹಾಗೆ ಗಿಡ ಬರುವುದಿಲ್ಲ. ಬಿದಿರು ಬುಟ್ಟಿಯಲ್ಲಿ ಗಾಳಿಯಾಡುವ ಹಾಗೆ ಪ್ಲಾಸ್ಟಿಕ್‌ನೊಳಗೆ ಗಾಳಿಯಾಡುವುದಿಲ್ಲ ಎಂದು ದುಬಾರಿಯಾದರೂ ಬಿದುರುಕುಕ್ಕೆ ಕೊಳ್ಳುತ್ತಿದ್ದರು ಕೆಲವು ಹಳಬರು' ಎನ್ನುವ ಮಾತಲ್ಲಿ ನೈಸರ್ಗಿಕವಾದ ವಸ್ತುಗಳು ಹೆಚ್ಚು ಬಲಿಷ್ಟ. 'ಪ್ಲಾಸ್ಟಿಕ್' ನಮ್ಮನ್ನು ಸುಲಭವಾಗಿ ಆಕರ್ಷಿಸಿದರೂ ಅದರಿಂದ ಉಂಟಾಗುವ ತೊಂದರೆಗಳೇ ಹೆಚ್ಚು ಎಂಬ ಅಂಶವನ್ನು ನಾವಿಲ್ಲಿ ಕಾಣಬಹುದು. ವರ್ತಮಾನದ ಸಂವೇದನೆಯೇ ತೇಜಸ್ವಿ ಕೃತಿಗಳ ಜೀವಾಳ. ಕುವೆಂಪು ಅವರಿಗಿಂತ ಹೆಚ್ಚು ಮುಖ್ಯವಾಗುವುದೇ ಈ ಕಾರಣದಿಂದ. ಯಾವುದೇ ಆಧುನೀಕರಣದ ವಸ್ತುಗಳು ಬರುವಾಗ ಆಕರ್ಷಣೀಯವಾಗಿ ಕಂಡರೂ ಅದರಿಂದಾಗುವ ಕೆಡಕು ಅಪಾರ. ಅದು ಮೋಹಿನಿಯಂತೆ ಆವರಿಸಿಕೊಂಡು ಆನಂತರ ತನ್ನ ವ್ಯತಿರಿಕ್ತ ಪ್ರಭಾವ ತೋರುತ್ತದೆ. ಇಂದು 'ಪ್ಲಾಸ್ಟಿಕ್ ತ್ಯಾಜ್ಯ' ಒಂದು ಜಾಗತಿಕ ಸಮಸ್ಯೆಯಾಗಿ ಉಲ್ಬಣವಾಗಿದೆ. ಇದರಿಂದ ಉಂಟಾಗುತ್ತಿರುವ ಪರಿಸರ ಮಾಲಿನ್ಯ ಸಹಿಸಲಾಗದಷ್ಟು. ತೇಜಸ್ವಿಯವರ ಈ ಬಗೆಯ ಚಿಂತನೆ ವರ್ತಮಾನದಲ್ಲಿ ಹೆಚ್ಚು ಪ್ರಸ್ತುತ.

ಇಡೀ 'ಸಂಸ್ಕೃತಿ'ಯ ನಾಶಕ್ಕೆ ಕಾರಣವಾದ ಪ್ಲಾಸ್ಟಿಕ್ ಬಳಕೆ ಬದಲು ದೇಶೀಯ ಉತ್ಪನ್ನಗಳು ಹಾಗೂ ನೈಸರ್ಗಿಕವಾದ ಪದಾರ್ಥಗಳನ್ನು ಉಪಯೋಗಿಸಬೇಕು. ದೇಶೀಯ ಸಂಸ್ಕೃತಿ, ಕೈಕಸುಬುಗಳನ್ನು ಉತ್ತೇಜಿಸಬೇಕು. ಆ ಮೂಲಕ 'ಪರಿಸರ ಜಾಗೃತಿ' ಮೂಡಿಸಬಹುದೆಂಬ ಆಶಯವನ್ನು ತೇಜಸ್ವಿ ಅವರ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಅಲ್ಲದೆ, ನಗರ ಸಂಸ್ಕೃತಿಯ ಪಿಡುಗುಗಳಾದ ಲಾಟರಿ, ಕಳ್ಳಸಾಗಾಣಿಕೆ, ಮಾದಕವಸ್ತು ಜಾಲ, ದಿಢೀರ್ ಶ್ರೀಮಂತಿಕೆಯ ಹಂಬಲ, ಹೀಗೆ ನಾನಾ ರೂಪಗಳಲ್ಲಿ 'ಆಧುನಿಕತೆ' ಮಲೆನಾಡಿನ ಮೂಲೆಯ ಜನಜೀವನದ ಮೇಲೆ ಮಾಡುವ ಅತಿಕ್ರಮಣವನ್ನು 'ಜುಗಾರಿಕ್ರಾಸ್' ಕಾದಂಬರಿಯಲ್ಲಿ ಕಲಾತ್ಮಕವಾಗಿ ವಿವರಣಾತ್ಮಕವಾಗಿ ತೆರೆದಿಡುವುದರ ಜೊತೆಗೆ ಒಂದು ಬಗೆಯ ವಿಷಾದವನ್ನು ಗುರುತಿಸಬಹುದು.

ಆಧುನಿಕ ನಾಗರಿಕತೆಯ ಸಂಕೇತವಾದ ಪೋಸ್ಟಾಫೀಸೊಂದು ಅಬಚೂರಿನಲ್ಲಿ ತಂದಿಡುವ ರಾದ್ಧಾಂತಗಳನ್ನು, ಅದಕ್ಕೆ ಬಲಿಪಶುಗಳಾಗುವವರ ದುರಂತವನ್ನು 'ಅಬಚೂರಿನ ಪೋಸ್ಟಾಫೀಸು' ಕಥೆಯಲ್ಲಿ ನೋಡಬಹುದು. ಅಬಚೂರಿಗೆ ಹೊಸದಾಗಿ ಬಂದ ಪೋಸ್ಟಾಫೀಸಿಗೆ ಹಂಗಾಮಿಯಾಗಿ ಪೋಸ್ಟ್‌ಮಾಸ್ಟರ್ ಆಗಿ ನೇಮಕವಾದ ಬೋಬಣ್ಣನ ನೆಮ್ಮದಿಯಾಗಿದ್ದ ಸಂಸಾರದಲ್ಲಿ, ಅಶಾಂತಿಯ ಅಲೆಗಳು ಹುಟ್ಟಿ, ಆತನನ್ನು ದುರಂತಕ್ಕೆ ಈಡಾಗುವಂತೆ ಮಾಡುವುದು ಈ ಆಧುನಿಕತೆ. ಪೋಸ್ಟಾಫೀಸಿನಿಂದ ಆಗುವ ಪರಿಣಾಮಗಳು ನಾಗರಿಕತೆಯಿಂದ ದೂರನಿಂತ ಸಮಾಜದಲ್ಲಿ ಗೊಂದಲಮಯ. ಬೇಲಾಯದವನಿಗೆ ಬಂದ ಪತ್ರದಿಂದಾಗುವ ಗೊಂದಲ ತನ್ನ ವಿರುದ್ಧವೇ ವಿಪರೀತ ಮಟ್ಟದಲ್ಲಿ ತಿರುಗಿದಾಗ, ಬೋಬಣ್ಣ ಆತ್ಮರಕ್ಷಣಾ ಕ್ರಮಕ್ಕೆ ಮುಂದಾಗುತ್ತಾನೆ. ಬೋಬಣ್ಣ ಊರನ್ನೇ ಬಿಟ್ಟು ಓಡಿಹೋಗುತ್ತಾನೆ.

ಮಾರನೇ ದಿನ ಪೋಸ್ಟಾಫೀಸು ವಿದ್ಯುಕ್ತವಾಗಿ ಮುಚ್ಚುವುದರೊಂದಿಗೆ ಕಥೆ ಮುಕ್ತಾಯವಾಗುತ್ತದೆ. 'ಪೋಸ್ಟಾಫೀಸು' ಬೋಬಣ್ಣನ ಸಾಂಸಾರಿಕ ಜೀವನದಲ್ಲಿ ಗೊಂದಲ ಸೃಷ್ಟಿಸುವುದರೊಂದಿಗೆ ಅಬಚೂರಿನ ಜನರೆದುರು ಅಪಹಾಸ್ಯಕ್ಕೀಡು ಮಾಡುವುದು ದುರಂತವೇ ಸರಿ. ಬೋಬಣ್ಣನನ್ನು ಪಶುಸಮಾನವಾಗಿ ನಡೆಸಿಕೊಳ್ಳುವ ಸಮಾಜದ ಬಗ್ಗೆ ತೀವ್ರವಾದ ವಿಷಾದ, ನಿಟ್ಟುಸಿರು ಕಥೆಯೊಳಗೇ ಮೌನವಾಗಿ ಹೆಪ್ಪುಗಟ್ಟುತ್ತದೆ. ಇದು ಜೀವನದ ಅಸಂಬದ್ಧತೆಯನ್ನು ಹೃದ್ಯವಾಗಿ ಶೋಧಿಸುತ್ತವೆ. ಹೀಗೆ ಹೊಸನಾಗರಿಕತೆಯ ಪ್ರವೇಶದಿಂದಾಗುವ ಅವಾಂತರವನ್ನು ತೇಜಸ್ವಿ ತಮ್ಮ ಕತೆಗಳಲ್ಲಿ ಚಿತ್ರಿಸಿದ್ದಾರೆ. ಅದು 'ತುಕ್ಕೋಜಿ'ಕಥೆಯಲ್ಲಿಯೂ ವ್ಯಕ್ತವಾಗಿರುವುದನ್ನು ಕಾಣಬಹುದು.

'ತುಕ್ಕೋಜಿ' ಎಂಬ ಕತೆಯಲ್ಲಿ 'ಗುರುಗಳ್ಳಿ'ಯು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪಲ್ಲಟಗಳಿಗೆ ಒಂದು ರೂಪಕವೇ ಆಗಿಬಿಡುತ್ತದೆ.

"ಗುರುಗಳ್ಳಿ ಒಂದು ಕಾಲಕ್ಕೆ ಹಳ್ಳಿಯಾಗಿದ್ದಿತಾದರೂ ಇಡೀ ಅಖಂಡ ಭಾರತದ ವಿಕಾಸದೊಂದಿಗೇ ನಿಧಾನವಾಗಿ ಬೆಳೆದು ಬೆಳೆದು ಸಣ್ಣ ಪೇಟೆಯಾಯ್ತು. ಆಸ್ಪತ್ರೆ, ಬಸ್ ನಿಲ್ದಾಣ, ಪೊಲೀಸ್ ಸ್ಟೇಷನ್ನು, ಪೋಸ್ಟಾಫೀಸು, ಒಂದು ಗುಡಾರದ ಸಿನೆಮಾ ಇತ್ಯಾದಿಗಳಲ್ಲಿ ಆದ ಧೂಳು ಗುಜು ಗುಜು ಗಲಾಟೆಗಳ ನಡುವೆಯೇ ಇನ್ನೂ ಒಂದು ಚರಿತ್ರಾರ್ಹ ಘಟನೆ ನಡೆಯಿತು.

ಹಾಸನ ಮಂಗಳೂರಿನ ರೈಲು ಮಾರ್ಗ ಗುರುಗಳ್ಳಿ ಮುಖಾಂತರವೇ ಹೋಗುವುದೆಂದು ನಿರ್ಣಯವಾಯ್ತು.... ಈ ಮುಖ್ಯವಾದವುಗಳ ನಡುವೆ ಈ ನಾಗರಿಕತೆಯ ವಿಕಾಸಕ್ಕೆ ಸದ್ದಿಲ್ಲದೆ ಶ್ರಮಿಸುವ ಅನೇಕರೂ ಇದ್ದರು. ವಿದ್ಯಾರ್ಥಿಭವನದ ಹೋಟೆಲು ತಿಮ್ಮಪ್ಪಯ್ಯ.... ಸ್ಟೂಡೆಂಟ್ ಹೇರ್ ಕಟಿಂಗ್ ಸೆಲೂನಿನ ಭಂಡಾರಿ ಕೃಷ್ಣ.... ಆದರೆ ಇವರೆಲ್ಲರಿಗಿಂತ ಮಿಗಿಲಾದ ಜವಾಬ್ದಾರಿ ಟೈಲರ್ ತುಕ್ಕೋಜಿಯದ್ದಾಗಿತೆಂಬುದನ್ನು ಯಾರೂ ನಿರ್ವಿವಾದವಾಗಿ ಒಪ್ಪಬೇಕಾದುದೆ. ಸಂತೆಯಲ್ಲಿ ವರುಷಕ್ಕೊಂದಾವರ್ತಿ ಚೀಟಿಬಟ್ಟೆಯ ರೆಡಿಮೇಡು ಉಡುಪುಗಳನ್ನು ಕೊಂಡು ಹಾಕಿಕೊಂಡು ಹೋಗುತ್ತಿದ್ದ ಹಳ್ಳಿಗರು ಉತ್ತಮವಾದ ಕಚ್ಚಾಬಟ್ಟೆಗಳನ್ನು ಅಂಗಡಿಗಳಲ್ಲಿ ಕೊಂಡು ಅದನ್ನು ತಮ್ಮ ಅಳತೆ ಅಭಿರುಚಿಗಳಿಗೆ ತಕ್ಕಂತೆ ಹೊಲಿಸಿಕೊಂಡು ಓಡಾಡುವ ಅಭಿರುಚಿಯನ್ನು, ಶಿಸ್ತನ್ನು ಕಲಿಸಬೇಕಾದರೆ ಅದೇನೂ ಸಾಮಾನ್ಯವಾದ ಕೆಲಸವಲ್ಲ. ಅವನಿಗೆ ಈ ಗುರುತರ ಕಾರ್ಯದಲ್ಲಿ ಈಚೆಗೆ ಆರಂಭವಾದ ಜೂನಿಯರ್ ಕಾಲೇಜು ಸಿನಿಮಾ ಇತ್ಯಾದಿಗಳೆಲ್ಲಾ ಸಹಾಯ ಮಾಡಿದವು ಎನ್ನುವುದೇನೋ ನಿಜ !". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ೨೦೦೯, ಪುಟ ೬೭)

ಸೂಕ್ಷ್ಮವಾಗಿ ನೋಡಿದರೆ ಆಧುನಿಕ ಕನ್ನಡ ಸಾಹಿತ್ಯದ ಒಂದು ಸಾಮಾನ್ಯ ಪ್ರಧಾನವಸ್ತು ಇಲ್ಲಿ ಬೇರೆ ವಿವರಗಳಲ್ಲಿ ನಿರ್ವಹಣೆಗೆ ಒಳಗಾಗುತ್ತಿರುವುದು ನಮ್ಮ ಕಣ್ಣುತಪ್ಪಿಸಿಕೊಳ್ಳುವುದಿಲ್ಲ. "ವಸಾಹತುಶಾಹಿ ಆಡಳಿತ, ಹೊಸ ಶಿಕ್ಷಣ ವ್ಯವಸ್ಥೆ, ಹೊಸ ಮೌಲ್ಯಗಳ, ಸಂಸ್ಥೆಗಳ, ವಸ್ತುಗಳ ಆಗಮನ, ಹಳತು ಹೊಸತುಗಳ ಮುಖಾಮುಖಿ ಇವೆಲ್ಲವುಗಳಿಂದಾಗಿ ಪಲ್ಲಟಗೊಂಡ 'ಜೀವನ ಕ್ರಮ'ಗಳನ್ನು ದಾಖಲಿಸುವುದು, ವಿಮರ್ಶಿಸಿ ವ್ಯಾಖ್ಯಾನಿಸುವುದು, ಇತಿಹಾಸದ ಪಯಣದ ಹೆಜ್ಜೆಗುರುತುಗಳನ್ನು ಗುರುತಿಸಿ ಭವಿಷ್ಯ ಎತ್ತ ಸಾಗಿದೆ ಎಂಬ ಮುನ್ನೋಟವನ್ನು ಹಾಯಿಸುವುದು ತೃತೀಯ ಜಗತ್ತಿನ ಆಧುನಿಕ ವಾಸ್ತವವಾದಿ ಸಾಹಿತ್ಯದ ಮುಖ್ಯ ಹಂಬಲವಷ್ಟೆ. ಮಾಸ್ತಿ, ಕಾರಂತ, ಕುವೆಂಪು, ಆಲನಹಳ್ಳಿ ಕೃಷ್ಣ, ದೇವನೂರು ಮಹಾದೇವ, ಲಂಕೇಶ, ಅನಂತಮೂರ್ತಿ ಯಾರ ಕೃತಿಗಳನ್ನು ಗಮನಿಸಿದರೂ ಈ ಅಂಶ ಎಲ್ಲರಲ್ಲೂ ಸಾಮಾನ್ಯವಾಗಿ ಕಾಣುವಂತಹದ್ದು. ದೇವನೂರರ 'ಡಾಂಬರು ಬಂದುದು' ವೈದೇಹಿ ಅವರ 'ಗುಲಾಬಿ ಟಾಕೀಸು' ಮತ್ತು 'ಸಣ್ಣ ಅಲೆಗಳು' ಆಲನಹಳ್ಳಿ ಕೃಷ್ಣರ 'ಪರಸಂಗದ ಗೆಂಡೆತಿಮ್ಮ' ಮುಂತಾದ ಹಲವು ಕತೆ ಕಾದಂಬರಿಗಳಂತೂ ಅಬಚೂರಿನ ಪೋಸ್ಟಾಪೀಸು ತುಕ್ಕೋಜಿಯಂತಹ

ಕತೆಗಳೊಂದಿಗೆ ನೇರ ಸಂಬಂಧವನ್ನೇ ಹೊಂದಿದಂತೆ ಕಾಣುತ್ತದೆ. ತೇಜಸ್ವಿ ಆಧುನಿಕ ಕನ್ನಡ ವಾಸ್ತವವಾದೀ ಮಾರ್ಗದ ಪ್ರಧಾನ ಧಾರೆಯೊಂದಿಗೆ ಸೇರಿಕೊಳ್ಳುವುದು ಹೀಗೆ". (ಅಶೋಕ ಟಿ.ಪಿ., ತೇಜಸ್ವಿ ಕಥನ. ೨೦೧೦. ಪುಟ ೫೪) ಎಂಬ ತೇಜಸ್ವಿ ಬಗೆಗಿನ ಪ್ರಸ್ತುತ ಹೇಳಿಕೆ ಅರ್ಥಪೂರ್ಣವಾಗಿದೆ.

ತುಕ್ಕೋಜಿಯ ಜೀವನದಲ್ಲಿ ಹೊಸ ಹೊಸ ಸಮಸ್ಯೆಗಳು ಏಳಲಾರಂಭಿಸುತ್ತವೆ. "ಕೆಲಸದ ಒತ್ತಡವೂ ಜಾಸ್ತಿಯಾಗುತ್ತದೆ. ಗಿರಾಕಿಗಳ ಅಪೇಕ್ಷೆಗಳು, ದೂರುಗಳು ಜಾಸ್ತಿಯಾಗ ತೊಡಗುತ್ತವೆ. ಊರು ದೊಡ್ಡದಾದಂತೆ ವ್ಯಾಪಾರ ವಹಿವಾಟುಗಳು ಜಾಸ್ತಿಯಾಗುತ್ತ ಹೋಗುತ್ತವೆ. ಹೊಸ ಅಂಗಡಿಗಳು ಹೊಸ ಫ್ಯಾಶನ್ನುಗಳು ಹೊಸ ಬೇಡಿಕೆಗಳು ಗುರುಗಳ್ಳಿಯನ್ನು ಪ್ರವೇಶಿಸುತ್ತವೆ. ತಮ್ಮ ಮನೆಯ ಎದುರೇ ರೈಲು ರಸ್ತೆ ಎಂಜಿನಿಯರಿಂಗ್ ಸಿಬ್ಬಂದಿಯವರು ಬಂದಿದ್ದರು ದಿನವೂ ಸಾಯಂಕಾಲ ಬಣ್ಣ ಬಣ್ಣದ ಬಟ್ಟೆಗಳನ್ನು ತೊಟ್ಟು ಜೋಡಿ ಜೋಡಿಯಾಗಿ ವಿರಾಮವಾಗಿ ವಾಕಿಂಗ್ ಹೋಗುವುದನ್ನು ತುಕ್ಕೋಜಿಯ ಹೆಂಡತಿ ಸರೋಜ ನೋಡಿದ್ದಳು. ಅವಳಿಗೆ ಈ ದುಡಿಯುವ ಬದುಕಿನ ಬಗ್ಗೆ ರೇಜಿಗೆಯಾಗತೊಡಗಿತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು. ೨೦೦೯. ಪುಟ ೭೪)

ತುಕ್ಕೋಜಿಯ ವೈಯಕ್ತಿಕ ಜೀವನದ ಸಿಕ್ಕುಗಳೂ ಅವನನ್ನು ದುರಂತದೆಡೆಗೆ ಒಯ್ಯುತ್ತಿದ್ದವು. ಇದರ ಪರಿಣಾಮವಾಗಿ ಅವನ ಚಿತ್ತಸ್ವಾಸ್ಥ್ಯ ಕೆಡಲು ಹೋಗಿ, ನಾಗರಿಕತೆಯ ಛಂದಸ್ಸನ್ನು ಆತ ಅರ್ಥಮಾಡಿಕೊಳ್ಳದೇ ಹಾಳು ಮಾಡತೊಡಗಿದ್ದ ಆಧುನಿಕತೆಯ ಕಾರಣದಿಂದ ಅವನ ವೃತ್ತಿ ಜೀವನಕ್ಕೆ ಸಂಚಕಾರ ಬಂದು ಟೈಲರ್ ವೃತ್ತಿ ನಿಲ್ಲಿಸುವುದೇ ಸೂಕ್ತ ಎಂಬ ಭಾವನೆ ಪ್ರಾಣ ಬಿಡುವಷ್ಟು ಸಂಕಟ ಉಂಟುಮಾಡುತ್ತದೆ.

'ಮಾಯಾಲೋಕ' ಕಾದಂಬರಿಯು ಆಧುನೀಕರಣದ ಕತೆಯನ್ನು ವಾಸ್ತವ ಶೈಲಿಯಲ್ಲೇ ಹೇಳುತ್ತದೆ. "ಮುಂದುವರೆದ ರಾಷ್ಟ್ರವಾಗಬೇಕೆಂಬ ನಾಗಲೋಟದ ಸ್ಪರ್ಧೆಗಳಲ್ಲಿರುವ ಭಾರತದಲ್ಲಿ ಹಳ್ಳಿಗಳು ನೋಡಲು ತಣ್ಣಗೆ ನಿದ್ರಿಸುತ್ತಿರುವಂತೆ ಕಂಡರೂ ಒಳಹೊಕ್ಕು ನೋಡಿದರೆ ಭಯಂಕರ ಅಲ್ಲೋಲ ಕಲ್ಲೋಲದ ಹೆದ್ದೆರೆಗಳ ಮೇಲೆ ತುಯ್ದಾಡುತ್ತಿರುವುದು ಕಾಣುತ್ತದೆ. ಮುಂದುವರಿಯುವುದಕ್ಕೂ ಹಳ್ಳಿಗರ ದಿನನಿತ್ಯದ ಘಟನಾವಳಿಗಳ ಮಹಾಪೂರಕ್ಕೆ ನೇರ ಸಂಬಂಧ ಕಾಣದಿದ್ದರೂ ಈ

ಬಗೆಯ ಅಗಾಧ ಚಟುವಟಿಕೆ, ಚಡಪಡಿಕೆಗಳಿಗೆ ಪರಂಪರಾಗತ ಜೀವನ ಶೈಲಿಯಿಂದ ವೇಗವಾಗಿ ಬದಲಾಗಲು ಹವಣಿಸುತ್ತಿರುವ ದೇಶವೇ ಪರೋಕ್ಷವಾಗಿ ಮತ್ತು ಅಂತರ್ಗಾಮಿಯಾಗಿ ಪ್ರೇರಣೆ ಎನ್ನಿಸುತ್ತದೆ. ಇಲ್ಲದಿದ್ದರೆ ನಿಮ್ಮೊಂದು ವಾರದ ದಿನಚರಿಯಲ್ಲಿ ಒಂದು ಬೃಹತ್ ಕಾದಂಬರಿಗಾಗುವಷ್ಟು ಘಟನಾವಳಿಗಳಲ್ಲಿ ಗೊಂದಲಗಳೂ ಕಿಕ್ಕಿರಿದಿರುವುದಕ್ಕೆ ನೀವು ಇನ್ನೇನು ತಾನೆ ವಿವರಣೆ ನೀಡಬಲ್ಲೀರಿ?" (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೧೬೧)

ಈ ಕಾರಣದಿಂದಾಗಿಯೇ ತೇಜಸ್ವಿ ಆ ಕಿಕ್ಕಿರಿದ ಘಟನಾವಳಿಗಳ ನಡುವೆ ನಿಬ್ಬೆರಗಾಗಿ ನಿಲ್ಲುತ್ತಾರೆ. ಆ ನಿಂತ ನಿಲುವೇ ಅವರಿಗೆ ಆಧುನೀಕರಣದ ಕಥೆಯನ್ನು ಕಾಲ ಸ್ಥಿರವಾದ ವ್ಯವಧಾನದಲ್ಲಿ ನೋಡಿ ಮಂಡಿಸುವ ಹೊಸಕ್ರಮವನ್ನು ಪ್ರದಾನ ಮಾಡುತ್ತದೆ. ಹೀಗಾಗಿ ಇಡೀ 'ಮಾಯಾಲೋಕ' ಕಾದಂಬರಿಯಲ್ಲಿ ಆಧುನೀಕರಣದ ಕಥೆಯು ಪುನರ್ ನಿರೂಪಣೆಯ ಕಥೆಯಾಗಿ ಮಾರ್ಪಟ್ಟು ತೇಜಸ್ವಿಯವರ ಬರವಣಿಗೆಯ ಗತಿ, ಲಯ, ಕಾಳಜಿ, ಹಾಗೂ ದೃಷ್ಟಿ ದಿಗಂತಗಳೇ ಮುಖ್ಯ ಸ್ಥಿತ್ಯಂತರವೊಂದಕ್ಕೆ ಒಳಗಾಗುವುದನ್ನು ಕಾಣಬಹುದು. ಈ ಕೃತಿಯಲ್ಲಿ ತೇಜಸ್ವಿ ಆಧುನೀಕರಣವನ್ನು ಅದರ ಪರಿಣಾಮಗಳ ನೆಲೆಯಲ್ಲಿ ಸೂಕ್ಷ್ಮ ಪರಿಶೀಲನೆಗೆ ಒಳಗುಮಾಡುತ್ತಾರೆ. ಆಧುನಿಕತೆಯ ವಿರುದ್ಧ ನಿಂತಲ್ಲ, ಅದರ ಆವೇಗದಲ್ಲಿ ಅಂತರ್ಗತವಾಗಿರುವ ಅದರ ಅಸಮ ಸಾಮಾಜಿಕ ಪರಿಣಾಮವನ್ನು ಅನಾವರಣಗೊಳಿಸುವ ಮೂಲಕ ನಮ್ಮ ದೇಶದ ಅಭಿವೃದ್ಧಿಯ ಮಾದರಿಯನ್ನು ಪ್ರಶ್ನಿಸುತ್ತಾರೆ. 'ಜುಗಾರಿಕ್ರಾಸ್', 'ಮಾಯಾಲೋಕ' ಕಾದಂಬರಿಗಳಲ್ಲಿ ಆಧುನಿಕ ಜಗತ್ತಿನ ಮೋಸದ ಜಾಲ ಅವುಗಳ ಹಿಂದೆ ನಡೆಯುವ ಷಡ್ಯಂತ್ರಗಳು ಅದಕ್ಕೆ ಬಲಿಪಶುಗಳಾಗುವ ಮಂದಿ ಇವುಗಳ ಅನಾವರಣವಿದೆ.

"ದೌಲತ್ ರಾಮ್ ಬೆಂಗಳೂರಿನ ನರ್ಸಿಂಗ್ ಹೋಂ ಒಂದರಲ್ಲಿ ವೈದ್ಯನಾಗಿ ಕೆಲಸ ಮಾಡಿಕೊಂಡಿದ್ದ ನಕಲಿ ಸರ್ಟಿಫಿಕೇಟ್ ಮೇಲೆ ಡಾಕ್ಟರ್ ಕೆಲಸ ಮಾಡುತ್ತಿದ್ದರೂ, ಅಸಲಿ ಸರ್ಟಿಫಿಕೇಟ್ ವೈದ್ಯರಿಗಿಂತ ಹೆಚ್ಚು ದುಡ್ಡು ಮಾಡಿದ್ದ. ಸುಳ್ಳು ದಾಖಲೆಗಳೊಂದಿಗೆ ವೈದ್ಯವೃತ್ತಿ ಮಾಡುತ್ತಿದ್ದ ಹಲವಾರು ಜನ ಸಿಕ್ಕಿಬಿದ್ದು ದೊಡ್ಡ ಗುಲ್ಲೆದ್ದು ಸರ್ಕಾರ ತನಿಖೆ ಶುರು ಮಾಡಿದಾಗ ದೌಲತ್‌ರಾಮ್ ಹೇಳದೆ ಕೇಳದೆ ತಲೆ ತಪ್ಪಿಸಿಕೊಳ್ಳಬೇಕಾಗಿದ್ದು ಅನಿವಾರ್ಯವಾಯ್ತು.

ದುಡ್ಡು ಸುಲಿಯಲು ಇಲ್ಲದ ಖಾಯಿಲೆಗಳನ್ನು ಸೃಜಿಸಿ ಬೆಂಗಳೂರಿಗೆ ಓದಲು ಬಂದಿದ್ದ ಇರಾನಿಗಳಿಗೆ ಸಾವೂದಿಗಳಿಗೆ ಸರಿಯಾಗಿ ಬೋಳಿಸಿದ್ದ. ದೌಲತ್ ರಾಮನಿಗೆ ಮಾದಕ ಔಷಧಗಳ ಭೂಗತಲೋಕ ಪರಿಚಯವಾಗಿದ್ದು ಇರಾನಿಗಳಿಂದಲೇ. ಅವನ ಮೇಲಿದ್ದ ನೂರೆಂಟು ಪುಕಾರುಗಳ ದೆಸೆಯಿಂದ ಅವನೇನಾದರೂ ನಕಲಿ ದಾಖಲೆಗಳ ಡಾಕ್ಟರೆಂದು ಸಿಕ್ಕಿಬಿದ್ದಿದ್ದರೆ ರೋಗಿಗಳು ಸತ್ತ ಕೇಸುಗಳೆಲ್ಲ ಖೂನಿ ಕೇಸುಗಳಾಗಿ ಅವನಿಗೆ ಮರಣದಂಡನೆಯೇ ಗತಿಯಾಗುತ್ತಿತ್ತು. ಹಾಗಾಗಿಯೇ ವೈದ್ಯರ ದಾಖಲೆಗಳ ತನಿಖೆ ಪ್ರಾರಂಭವಾಗುತ್ತಿದಂತೆಯೇ, ಅವನು ಭೂಗತವಾಗಿ ಕಳ್ಳ ಸಾಕಾಣಿಕೆ ಜಾಲ ಸೇರಿದ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೬೩)

ಹೀಗೆ ತೇಜಸ್ವಿ ಮತ್ತು ಕುವೆಂಪು ಅವರ ಕಥನ ಸಾಹಿತ್ಯದಲ್ಲಿ ಆಧುನಿಕತೆಯ ಅನುಸಂಧಾನ ನೆಲೆಗಳು ಹೆಚ್ಚು ಪ್ರಸ್ತುತ ಮತ್ತು ವಾಸ್ತವದ ನೆಲೆಗಟ್ಟಿನಲ್ಲಿ ವ್ಯಕ್ತವಾಗಿವೆ ಇಬ್ಬರೂ ಸಾಹಿತಿಗಳ ಕಥನಗಳ ಗ್ರಹಿಕೆಯ ನೆಲೆ ಒಂದೇ. ಅದು ಗ್ರಾಮೀಣ ಸಂಸ್ಕೃತಿಯ ಮೇಲೆ ನಡೆಸಿದ ನಾಗರಿಕತೆಯ ಧಾಳಿ ಮತ್ತು ಗ್ರಾಮೀಣ ಸಂಸ್ಕೃತಿಯ ವಿಘಟನೆಯ ದುರಂತದ ಸ್ವರೂಪವನ್ನು ಶೋಧಿಸುವುದೇ ಆಗಿದೆ. ಸ್ಥಳೀಯತೆ ಮತ್ತು ಜಾಗತೀಕರಣ ಇವೆರಡೂ ಒಂದಾದಂತಹ ಪರಿಸರ ಎಲ್ಲ ದೇಶಗಳಲ್ಲೂ ನಿರ್ಮಾಣವಾಗಿದೆ. ಸ್ಥಳೀಯತೆ ನಾಶವಾಗುತ್ತಿರುವ ಅಪಾಯಗಳು ಜಾಗತೀಕರಣದಿಂದ ಉಂಟಾಗುತ್ತಿರುವ 'ಆಧುನಿಕತೆ'ಯಿಂದಾಗಿ 'ಪಲ್ಲಟಗೊಂಡ ಜಗತ್ತು' ನಿರ್ಮಾಣವಾಗುತ್ತಿದೆ. ಆಧುನಿಕತೆಯ ಭ್ರಮೆಯಲ್ಲಿ ಎಲ್ಲರೂ ತೇಲಾಡುತ್ತಿದ್ದೇವೆ. ಹೀಗಾಗಿ ಅನೇಕ ಮೌಲ್ಯಗಳು ಅಧಃಪತನಗೊಳ್ಳುತ್ತಿವೆ. ನೈತಿಕತೆಯ ಪ್ರಶ್ನೆಗಳು ಪ್ರೀತಿ ಸಹಿಷ್ಣುತೆ ಎಲ್ಲವೂ ನಾಶವಾಗುತ್ತಿದ್ದು, ಆಧುನಿಕತೆಯನ್ನು ಆಡಂಬರವಾಗಿ ಆಚರಿಸದೆ ಅಗತ್ಯಕ್ಕೆ ತಕ್ಕಂತೆ ಅನುಸರಿಸಬೇಕು ಎಂಬ ಆಶಯಗಳು ಇಬ್ಬರ ಕಥನಗಳಲ್ಲೂ ಧ್ವನಿಸುತ್ತವೆ. ಕುವೆಂಪುರವರು ಆಧುನಿಕತೆ ಎಂಬುದು "ಸಾಮಾಜಿಕ ಸಮಸ್ಯೆಗಳಿಗೆ, ಜಾತಿ ವರ್ಗ ಎಂಬ ಕುರುಡು ನಂಬಿಕೆಗಳನ್ನು ಹೊಡೆದೋಡಿಸಲು ಹಾಗೂ ಮೌಢ್ಯಕ್ಕೆ ದೀವಿಗೆಯಾಗಬೇಕು" ಎಂಬ ಆಶಯ ವ್ಯಕ್ತಪಡಿಸುತ್ತಾರೆ ಹೀಗಾಗಿ ಕುವೆಂಪು ಮತ್ತು ತೇಜಸ್ವಿಯವರ ಆಧುನಿಕತೆಯ ಅನುಸಂಧಾನ ವರ್ತಮಾನಕ್ಕೆ ಹೆಚ್ಚು ಪ್ರಸ್ತುತವಾಗಿದೆ.

# ಅಧ್ಯಾಯ - ೩

# ಸಾಮಾಜಿಕ ಅನುಸಂಧಾನದ ನೆಲೆಗಳು

ಸಾಹಿತಿಯೊಬ್ಬ ಪರಿಸರದ ಕೂಸು. ನಿಸರ್ಗ ಮತ್ತು ಸಮಾಜಗಳು ಅವನನ್ನು ತೀಡಿ, ತಿದ್ದಿ, ರೂಪಿಸುವಲ್ಲಿ ಪ್ರಧಾನ ಪಾತ್ರವಹಿಸುತ್ತವೆ. ವ್ಯಕ್ತಿಯೊಬ್ಬನ ಬದುಕಿನ ಏರಿಳಿತಗಳಿಗೆ, ನೋವು-ನಲಿವುಗಳಿಗೆ ದುಃಖ ದುಮ್ಮಾನಗಳಿಗೆ ಸಮಾಜವೇ ಕಾರಣವಾಗುತ್ತದೆ. ಸಾಹಿತಿಯಾದವನಿಗೆ ಸಮಾಜದ ಆಗು-ಹೋಗುಗಳ ಬಗ್ಗೆ ಕಳಕಳಿ, ಕಳವಳ, ಕಾತರತೆಯಿದ್ದಷ್ಟೂ ಸಮಾಜದ ಬಗೆಗಿನ ಅವನ 'ಪ್ರಜ್ಞೆ' ಸಾಂದ್ರವಾಗುತ್ತದೆ. ಆ ಮೂಲಕ ಸಾಂದ್ರಗೊಂಡ ಅನುಭವಗಳ ಮೂಲಕ ಸಾಹಿತ್ಯಕೃಷಿ ಮಾಡಿ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆ. ತನ್ನ ಸುತ್ತಲ ಸಮಾಜದ ಒಳ್ಳೆಯ ಅಂಶಗಳನ್ನು ಹೇಳುವುದರ ಜೊತೆಗೆ ಅಲ್ಲಿನ ಕೆಡಕು, ದಾಷ್ಟ್ಯವನ್ನು ಪ್ರತಿರೋಧಿಸಿ ಅದನ್ನು ಸರಿಪಡಿಸುವ ಆಶಯವನ್ನು ವ್ಯಕ್ತಪಡಿಸುತ್ತಾನೆ.

ಈ ದೃಷ್ಟಿಯಿಂದ ಸಾಹಿತಿಯೊಬ್ಬನ ಸಾಮಾಜಿಕ ಹೊಣೆಗಾರಿಕೆ ಮಹತ್ತ್ವದ್ದಾಗಿದೆ. ಸಾಮಾಜಿಕ ಬದುಕಿನ ಚಿತ್ರಣ ಸಾಮಾನ್ಯವಾಗಿ ಎಲ್ಲಾ ಕಥೆ-ಕಾದಂಬರಿಗಳ 'ಪ್ರಧಾನ ಅಂಶ'ವೇ ಆದರೂ ಅದರ ಅಭಿವ್ಯಕ್ತಿಯಲ್ಲಿ ಭಿನ್ನತೆಯಿರುತ್ತದೆ. ಈ ನಿಟ್ಟಿನಲ್ಲಿ ತೇಜಸ್ವಿ ಹಾಗೂ ಕುವೆಂಪು ಅವರ ಸಾಮಾಜಿಕ ಚಿಂತನೆಗಳು ಅವರ ಕಥೆ-ಕಾದಂಬರಿಗಳಲ್ಲಿ ಅನನ್ಯವಾಗಿ ಅಭಿವ್ಯಕ್ತಗೊಂಡಿವೆ. ತೇಜಸ್ವಿ ಹಾಗೂ ಕುವೆಂಪು ಅವರಂತೆ, ಸಾಮಾಜಿಕ ಬದುಕನ್ನು ತಮ್ಮ ಕಾದಂಬರಿಗಳಲ್ಲಿ ಇಷ್ಟು ಸೂಕ್ಷ್ಮವಾಗಿ ದೇಸಿಸೊಗಡಿನಲ್ಲಿಯೇ ಅಭಿವ್ಯಕ್ತಿಸಿರುವ ಲೇಖಕರು ವಿರಳವೆಂದೇ ಹೇಳಬೇಕು. 'ಸಾಮಾಜಿಕತೆ' ಎಂದರೆ ಅದು ಕೇವಲ ಬದುಕಿನ ಚಿತ್ರಣವಲ್ಲ, ಬದುಕಿನ ಕಡೆಗೊಂದು ಮಾನವೀಯ ನೋಟ. ತಮ್ಮ ಸಾಹಿತ್ಯದಲ್ಲಿ ಸಮಾಜದಲ್ಲಿನ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನ. ಸಾಂಪ್ರಾದಾಯಿಕ ಬದುಕನ್ನು ವೈಜ್ಞಾನಿಕವಾಗಿ ಚಿಂತಿಸುವ, ಆ ಸಮಾಜದಲ್ಲಿನ ಆಚಾರ-ವಿಚಾರಗಳನ್ನು ಹೊಸ ದೃಷ್ಟಿಕೋನದಿಂದ ನೋಡುವ ಕ್ರಮ. ಸಂದರ್ಭಾನುಸಾರ ಸಮೂಹಕ್ಕೂ ವ್ಯಕ್ತಿತ್ವಕ್ಕೂ ಬೆಲೆ ನೀಡುವ ಔದಾರ್ಯ, ಧರ್ಮ,

ಜಾತಿ ಬಗೆಗಿನ ಲೇಖಕರ ಧೋರಣೆ ಎಲ್ಲವೂ ಒಳಗೊಂಡು ಅದು 'ಸಾಮಾಜಿಕತೆ' ಎನಿಸುವುದು.

ಇಂತಹ ಸಾಮಾಜಿಕತೆಯ ಅನುಸಂಧಾನವನ್ನು ಕುವೆಂಪು ಮತ್ತು ತೇಜಸ್ವಿ ಅವರ ಕಥೆ-ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ತೇಜಸ್ವಿ ಹಾಗೂ ಕುವೆಂಪು ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಸಾಮಾಜಿಕತೆ, ವರ್ಣ-ವರ್ಗ ಸಂಘರ್ಷ, ನಂಬಿಕೆ, ಆಚರಣೆಗಳು ಮಲೆನಾಡಿನ ಸಮಾಜದಲ್ಲಿ ಇವುಗಳ 'ಸ್ಥಾನ' ಇವುಗಳನ್ನು 'ಸಾಮಾಜಿಕ ಪ್ರಜ್ಞೆ'ಯ ನೆಲೆಗಟ್ಟಿನಲ್ಲಿ ವಿಶ್ಲೇಷಣೆ ಮಾಡಲಾಗುತ್ತದೆ.

ತೇಜಸ್ವಿ ಮತ್ತು ಕುವೆಂಪು ಅವರ ಸಾಹಿತ್ಯದುದ್ದಕ್ಕೂ ಅಪಾರವಾದ ಲೋಕಾನುಭವವನ್ನು ಕಾಣಬಹುದು. ಮಲೆನಾಡಿನ ಸಾಮಾಜಿಕ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸಿ, ನೈಜ ಅನುಭವ ಪಡೆದಿರುವ ಇಬ್ಬರೂ ತಮ್ಮ ಕೃತಿಗಳಲ್ಲಿ ಅಲ್ಲಿನ ಸಮಾಜದ ವಾಸ್ತವಿಕತೆಯನ್ನು ಸಶಕ್ತಗೊಳಿಸಿದ್ದಾರೆ ಇವರಿಬ್ಬರ ಸಾಹಿತ್ಯಕೃತಿಗಳಲ್ಲಿ ಬರುವ ಪಾತ್ರ ವೈವಿಧ್ಯಗಳ ಮೂಲಕ ಅಚ್ಚರಿಗೊಳಿಸುತ್ತಾರೆ. ಕುವೆಂಪು ಅವರ 'ಶ್ರೀ ಸಾಮಾನ್ಯ ತತ್ತ್ವ' ತೇಜಸ್ವಿಯನ್ನು ಪ್ರಭಾವಿಸಿರುವುದನ್ನು ಅವರ ಕೃತಿಗಳಲ್ಲಿ ಕಾಣಬಹುದು.

ಕುವೆಂಪು ಅವರ 'ಸಾಮಾಜಿಕ ಪ್ರಜ್ಞೆ'ಯನ್ನು ಕುರಿತು ದೇಜಗೌ ಅವರು ಹೀಗೆ ಹೇಳುತ್ತರೆ. "ಅವರ ದೃಷ್ಟಿಯಲ್ಲಿ ಸಮಾಜವೆಂದರೆ ಉತ್ತಮಕುಲದವರಿಗೆ ಮತ್ತು ಶ್ರೀಮಂತ ವರ್ಗಕ್ಕೆ ಮಾತ್ರ ಸೀಮಿತವಾದ ಪ್ರತಿಷ್ಠೆಯ ಕಿರುಪ್ರಪಂಚವಲ್ಲ; ಬಹುಸಂಖ್ಯೆಯ ಶ್ರಿಸಾಮಾನ್ಯರನ್ನೊಳಗೊಂಡ ಬೃಹತ್‌ಪ್ರಪಂಚ.

ಶ್ರೀಮಂತರಿಂದ ಬಡವರಿಗೆ, ಭೂ ಮಾಲೀಕರಿಂದ ಜೀತದವರಿಗೆ, ಬ್ರಾಹ್ಮಣರಿಂದ ಶೂದ್ರರಿಗೆ ಆಗುತ್ತಿರುವ ಅನ್ಯಾಯ ಕಿರುಕುಳ, ಕೋಟಲೆಗಳ ವಾಸ್ತವಚಿತ್ರ ಕುವೆಂಪು ಸಾಹಿತ್ಯದಲ್ಲಿ ಯಥೇಚ್ಛವಾಗಿ ದೊರೆಯುತ್ತದೆ. ಜೊತೆಗೆ ದೇವರ ಹೆಸರಿನಲ್ಲಿ, ಪವಿತ್ರ ಗ್ರಂಥಗಳ ಹೆಸರಿನಲ್ಲಿ, ತಂತ್ರ ಮಂತ್ರ ಪೂಜೆ ಪುರಸ್ಕಾರಾದಿ ಸಂಪ್ರದಾಯಗಳ ಹೆಸರಿನಲ್ಲಿ, ಮತಧರ್ಮಗಳ ಹೆಸರಿನಲ್ಲಿ ಪ್ರತಿನಿತ್ಯ ನಡೆಯುತ್ತಿರುವ ಶೋಷಣೆಯ ಯಥಾವತ್ತಾದ ಬಣ್ಣನೆ ಇಲ್ಲಿ ಹೇರಳವಾಗಿದೆ". (ದೇಜಗೌ., ಕುವೆಂಪು ದರ್ಶನ ಸಂಪುಟ ೨, ೨೦೦೩, ಪುಟ ೫೧೧) ಕುವೆಂಪು ಅವರು ಮಾನವನ ಸಾಮಾಜಿಕ ಬದುಕನ್ನು ಅದರ ಎಲ್ಲಾ ಆಯಾಮಗಳಲ್ಲಿ ಸುಸಂಸ್ಕೃತಗೊಳಿಸಲು, ಹಸನುಗೊಳಿಸಲು ಹಂಬಲಿಸಿದವರು. ಅವರ ಕೃತಿಗಳಲ್ಲಿ

ಸಾಮಾಜಿಕ ಕಳಕಳಿ ಜಾಗೃತವಾಗಿದ್ದು, ಸಾಮಾಜಿಕಮೌಲ್ಯ ಪ್ರತಿಪಾದನೆಯ ಮೂಲಕ ವೈಚಾರಿಕ ಕ್ರಾಂತಿ ಉಂಟುಮಾಡಿದರು.

ವಸಾಹತುಶಾಹಿ ಕಾಲಘಟ್ಟದಲ್ಲಿ ಬರವಣಿಗೆ ಶುರು ಮಾಡಿದ ಕುವೆಂಪು ಇಪ್ಪತ್ತನೆಯ ಶತಮಾನದ ಆರಂಭದ ವಸಾಹತುಶಾಹಿ ಕಾಲಘಟ್ಟದ ವಸ್ತುವನ್ನು ಹೊಂದಿದ್ದು, ಮಲೆನಾಡಿನ ಕೌಟುಂಬಿಕ ಹಾಗೂ ಸಾಮಾಜಿಕ ಜೀವನದ ಚಿತ್ರಣವನ್ನು ಕಟ್ಟಿಕೊಡುತ್ತವೆ. 'ಕಾನೂರು ಹೆಗ್ಗಡಿತಿ' ವಸಾಹತುಶಾಹಿ ಆರಂಭದ ಕಾಲಘಟ್ಟದ ಕಥಾವಸ್ತುವನ್ನು ಹೊಂದಿದ್ದರೆ, ಅದರ ನಂತರ ರಚಿತವಾದ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗದಲ್ಲಿ ಸಾಮಾಜಿಕ ಜೀವನ ಕ್ರಮಗಳನ್ನು ಹಾಗೂ ಭೂಮಾಲೀಕ ವ್ಯವಸ್ಥೆಯ ವಿನ್ಯಾಸಗಳನ್ನು ಚಿತ್ರಿಸುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ನವ್ಯ, ಬಂಡಾಯದ ಕಾಲಘಟ್ಟದಲ್ಲಿ ರಚಿತವಾದ ತೇಜಸ್ವಿ ಕೃತಿಗಳಲ್ಲಿ ಬಿಂಬಿತವಾಗಿರುವ 'ಸಾಮಾಜಿಕ ಚಿತ್ರಣ' ಕುವೆಂಪು ಅವರ ಮುಂದುವರೆದ ರೂಪದಂತೆ ಇವೆ. ಕಾಲದ ದೃಷ್ಟಿಯಿಂದ ಇಬ್ಬರೂ ಲೇಖಕರ ಕಥೆ-ಕಾದಂಬರಿಗಳಲ್ಲಿ ಚಿತ್ರಿತವಾಗಿರುವ 'ಸಾಮಾಜಿಕತೆ' ಭಿನ್ನ ಭಿನ್ನ ರೂಪಗಳಲ್ಲಿ ಚಿತ್ರಿತವಾಗಿವೆ. ಇಬ್ಬರ ಕೃತಿಗಳಲ್ಲೂ ಸಾಮಾಜಿಕ ಆಶಯಗಳು, ಸಾಮಾಜಿಕ ಕಳಕಳಿ, ಸಾಮಾಜಿಕ ಪ್ರಜ್ಞೆ ಸಾಂದ್ರಗೊಂಡಿವೆ.

ಸೋಮಶೇಖರಗೌಡ ಅವರು ಹೇಳುವಂತೆ, "ಕುವೆಂಪು ಅವರ ಹೆಗಲ ಮೇಲಿದ್ದ ಮೊದಲ ಸಾಮಾಜಿಕ ಜವಾಬ್ದಾರಿಯೇ ವೈಚಾರಿಕ ಮನೋಭಿತ್ತಿ ನಿರ್ಮಾಣ. ಇದನ್ನು ನಿರ್ವಹಿಸಲು ಮೊದಲು ತಾನು ಬೆಳೆಯಬೇಕಾದ ತುರ್ತು ಅವರಿಗೆ ತಿಳಿದಿತ್ತು. ಅದಕ್ಕಾಗಿ ಕರ್ನಾಟಕದ, ಅಷ್ಟೇಕೆ ಭಾರತದ, ಇನ್ನೂ ಮುಂದುವರಿದು ವಿಶ್ವದ ಜಾಗತಿಕ ಇತಿಹಾಸವನ್ನು ಅವರು ಅರಗಿಸಿಕೊಂಡರು. ವಿಶೇಷವಾಗಿ ಭಾರತದ ಚಾರಿತ್ರಿಕ ಸ್ಥಿತ್ಯಂತರಗಳನ್ನು ಕೂಲಂಕಷವಾಗಿ ಗ್ರಹಿಸಿಕೊಂಡು ತನ್ಮೂಲಕ ತಮ್ಮ ನಿಲುವನ್ನು, ದಾರಿಯನ್ನು ಖಚಿತಪಡಿಸಿ ಕೊಂಡರು. ಜೊತೆಗೆ ವೇದ, ಉಪನಿಷತ್ತು, ಪುರಾಣ, ಹಳೆಯ ಹೊಸ ಸಾಹಿತ್ಯದ ಬೇರುಗಳನ್ನು ಸೋಸಿದರು. ಅವುಗಳ ನ್ಯೂನ್ಯತೆಗಳನ್ನು ಮನದಟ್ಟು ಮಾಡಿಕೊಂಡರು. ಆಮೇಲೆ ತಮ್ಮ ಬರವಣಿಗೆ ವಸ್ತು ತಂತ್ರಗಳನ್ನು ರೂಪಿಸಿ ಕೊಂಡರು. ಜೊತೆಗೆ ಇವೆಲ್ಲ ಸಮಾಜಮುಖಿಯಾಗುವಂತೆ ನೋಡಿಕೊಂಡರು". (ಚಕ್ಕೆರೆ ಶಿವಶಂಕರ್ (ಸಂ.), ಸಹ್ಯಾದ್ರಿಯ ಸೂರ್ಯ, ೨೦೦೪, ಪುಟ ೩೭೭)

"ಕುವೆಂಪು ನಿಸರ್ಗ ಹಾಗೂ ದಾರ್ಶನಿಕ ಕವಿ ಮಾತ್ರವಲ್ಲ, ಸಾಮಾಜಿಕ ಪ್ರಜ್ಞೆಯ ಮಹತ್ವ ಪೂರ್ಣರಾದ ಕವಿಯೂ ಅಹುದು. ನಿಸರ್ಗೋಪಾಸನೆಯ ಮತ್ತು ಅಧ್ಯಾತ್ಮ ಸಾಧನೆಯ ಪ್ರಖರ ಪ್ರಭಾವ ಅವರ ಸಾಹಿತ್ಯದಲ್ಲಿ ಉದ್ದಕ್ಕೂ ಎದ್ದು ಕಾಣುವುದಾದರೂ, ಸಮಾಜದ ಸೂಕ್ಷ್ಮವೀಕ್ಷಣೆಯಿಂದ ಸಂಲಬ್ಧವಾಗುವ ಲೋಕಾನುಭವದ ಶ್ರೀಮಂತತೆಯನ್ನು ಸಹ ಸಮಪ್ರಮಾಣದಲ್ಲಿ ಗುರುತಿಸಬಹುದು. ಅವರ ದೃಷ್ಟಿಯಲ್ಲಿ ಸಮಾಜವೆಂದರೆ, ಉತ್ತಮ ಕುಲದವರಿಗೆ ಮತ್ತು ಶ್ರೀಮಂತ ವರ್ಗಕ್ಕೆ ಮಾತ್ರ ಸೀಮಿತವಾದ ಕಿರು ಪ್ರಪಂಚವಲ್ಲ. ಬಹುಸಂಖ್ಯೆಯ ಶ್ರೀಸಾಮಾನ್ಯರನ್ನೊಳಗೊಂಡ ಬೃಹತ್ ಪ್ರಪಂಚ.

ಶ್ರೀಮಂತರಿಂದ ಬಡವರಿಗೆ, ಭೂಮಾಲೀಕರಿದಂದ ಜೀತದವರಿಗೆ, ಬ್ರಾಹ್ಮಣದರಿಂದ ಶೂದ್ರರಿಗೆ ಆಗುತ್ತಿರುವ ಅನ್ಯಾಯ, ಕಿರುಕುಳ, ಕೊಟಲೆಗಳ ವಾಸ್ತವ ಚಿತ್ರ ಕುವೆಂಪು ಸಾಹಿತ್ಯದಲ್ಲಿ ಯಥೇಚ್ಛವಾಗಿ ದೊರೆಯುತ್ತದೆ. ಜತೆಗೆ ದೇವರ ಹೆಸರಿನಲ್ಲಿ, ಪವಿತ್ರ ಗ್ರಂಥಗಳ ಹೆಸರಿನಲ್ಲಿ, ತಂತ್ರ ಮಂತ್ರ ಪೂಜೆ ಪುನಸ್ಕಾರಾದಿ ಸಂಪ್ರದಾಯಗಳ ಹೆಸರಿನಲ್ಲಿ, ತಂತ್ರಮಂತ್ರ ಮತಧರ್ಮಗಳ ಹೆಸರಿನಲ್ಲಿ ಪ್ರತಿನಿತ್ಯ ನಡೆಯುತ್ತಿರುವ ಶೋಷಣೆಯ ಯಥವತ್ತಾದ ಬಣ್ಣನೆ ಇಲ್ಲಿ ಹೇರಳವಾಗಿದೆ.

ಅಕೃತಕವೂ ನಿರಾಡಂಬರವೂ ಅನಾಮಧೇಯವೂ ಅದ ರಿಕ್ತಸ್ಥಿತಿಯ ಸಾಮಾನ್ಯ ಜೀವನದ ಸಮಗ್ರಚಿತ್ರ ರಾಶಿರಾಶಿಯಾಗಿ ದೊರೆಯುತ್ತದೆ. ಅಜ್ಞಾನ ದಾರಿದ್ರ್ಯ ಮೌಢ್ಯಗಳಿಂದ ಕುಸಿದು ಕುಗ್ಗಿ ಕಂಗಾಲಾಗಿರುವ ರೈತರ, ಜೀತಗಾರರ ಹಾಗೂ ಪಂಚಮರ ದಾರುಣ ಜೀವನದ ಹೃದಯವಿದ್ರಾವಕ ಚಿತ್ರವಂತು ಕಣ್ಣಿಗೆ ಕಟ್ಟಿದಂತೆ ವರ್ಣಿತವಾಗಿದೆ. ಅಂತೆಯೇ ಪುರುಷನ ಹಿಂದೆ ಕ್ರೌರ್ಯ ಲಂಪಟತನಗಳಿಗೊಳಗಾದ ಅಬಲೆಯರ ಸಂಕಟಮಯ ಭೀಕರ ಪರಿಸ್ಥಿತಿಯ ವರ್ಣನೆಯೂ ಮಡುಗಟ್ಟಿದೆ. ಬ್ರಾಹ್ಮಣರು, ಗೌಡರು, ಕ್ರಿಶ್ಚಿಯನ್ನರು, ಮುಸಲ್ಮಾನರು, ಪಂಚಮರು, ಹಳೇಪೈಕದವರು, ಸೇರೆಗಾರರು, ಬೇಲರು, ಕಮ್ಮಾರರು, ಆಬಾಲವೃದ್ಧರು, ಸಮಸ್ತ ಗ್ರಾಮ ಜೀವನವನ್ನು ಪ್ರತಿನಿಧಿಸುವ ಎಲ್ಲ ವರ್ಗಗಳ ಎಲ್ಲ ವೃತ್ತಿಗಳ ಜನರು ಕಾದಂಬರೀ ವೇದಿಕೆಯ ಮೇಲೆ ಸುಳಿಯುತ್ತಾರೆ". (ದೇಜಗೌ., ಕುವೆಂಪು ದರ್ಶನ ಸಂಪುಟ ೨, ೨೦೦೬, ಪುಟ ೫೧೧)

ಈ ಮಾತುಗಳು ಕುವೆಂಪು ಕಥನದ 'ಸಾಮಾಜಿಕ ಪ್ರಜ್ಞೆ'ಯ ವಾಸ್ತವತೆಗೆ ಕೈಗನ್ನಡಿ ಹಿಡಿದಂತಿವೆ. ಅಲ್ಲದೆ ಈ ಕಥನಗಳ ಮೂಲಕ ಸಮಾಜವನ್ನು ಎಚ್ಚರಿಸುವ ನಿರುಂಕುಶಮತಿ ತತ್ವ, ವೈಚಾರಿಕ ಬುದ್ಧಿ, ವೈಜ್ಞಾನಿಕ ಮನೋಧರ್ಮವನ್ನು ಜಾಗೃತಿಗೊಳಿಸುವ ಆಶಯ ಇವರೆಲ್ಲಾ ಕತೆಗಳು ಕಾದಂಬರಿಗಳು ಹಾಗೂ ಒಟ್ಟಾರೆ ಸಾಹಿತ್ಯದ ಪ್ರಧಾನ ಭಿತ್ತಿ ಆಗಿದೆ. ತೇಜಸ್ವಿ ಅವರು ಕುವೆಂಪು ನೀಡುವ ಈ ಬಗೆಯ ಕರೆಯನ್ನು ತಮ್ಮ ಕತೆ ಕಾದಂಬರಿಗಳಲ್ಲಿ ಮುಂದುವರೆಸಿದ್ದಾರೆ.

ತೇಜಸ್ವಿ ಅವರ 'ಚಿದಂಬರ ರಹಸ್ಯ' 'ಮಾಯಾಲೋಕ' 'ಕರ್ವಾಲೋ' ಕಾದಂಬರಿಗಳಲ್ಲಿ, ಭಾರತದಲ್ಲಿ ಬೇರೂರಿರುವ ಜಾತಿಪದ್ಧತಿ, ಅಸ್ಪೃಶ್ಯತೆ, ಅಸಮಾನತೆಯ ಅಂಶಗಳನ್ನು ಭಿನ್ನವಾದ ಸಂವೇದನೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಅಲ್ಲದೆ, 'ಅವನತಿ' ಮತ್ತು 'ಕುಬಿ ಮತ್ತು ಇಯಾಲ' ಕತೆಗಳು, ಮೌಢ್ಯದ ಕರಾಳ ದರ್ಶನ ಮಾಡಿಸುದರ ಜೊತೆಗೆ ಸಾಮಾಜಿಕ ವ್ಯವಸ್ಥೆಯ ಅಧಃಪಥನಕ್ಕೆ ಪ್ರತೀಕವಾಗುತ್ತವೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥನ ಸಾಹಿತ್ಯದುದ್ದಕ್ಕೂ 'ಧರ್ಮನಿರಪೇಕ್ಷ ಪ್ರಜ್ಞೆ' 'ಶೋಷಣೆ ವಿರೋಧಿ ಪ್ರಜ್ಞೆ' 'ವೈಚಾರಿಕ ಪ್ರಜ್ಞೆ'ಗಳನ್ನೊಳಗೊಂಡ ಸಾಮಾಜಿಕ ಚಿಂತನೆಯನ್ನು ಕಾಣಬಹುದು.

ಕುವೆಂಪು ಸಾಹಿತ್ಯದಲ್ಲಿರುವಂತೆ ತೇಜಸ್ವಿ ಅವರ ಕತೆ ಕಾದಂಬರಿಗಳಲ್ಲೂ ಒಕ್ಕಲಿಗರು, ಬಿಲ್ಲವರು, ಹರಿಜನರು, ಮುಸ್ಲೀಮರು, ಕ್ರಿಶ್ಚಿಯನ್ನರು ಎಲ್ಲಾ ಜಾತಿ ಧರ್ಮದ ವಿಭಿನ್ನ ಕಸುಬುಗಳನ್ನಾಧರಿಸಿ ಬದುಕುವ ಜನರು ಬರುತ್ತಾರೆ. ಕುವೆಂಪು ಅವರ 'ಶ್ರೀ ಸಾಮಾನ್ಯತೆ ತತ್ತ್ವ' ತೇಜಸ್ವಿಯವರಲ್ಲಿ ಮುಂದುವರೆದಿದೆ. ಹಾಗೂ ಈ ಭಿನ್ನ ಸಮುದಾಯದ ಜನರು ತಮ್ಮ ಪರಿಸರದಲ್ಲಿ ಮುಗ್ಧತೆ ಹಾಗೂ ಮುಕ್ತತೆಯಿಂದ ಆ ಜಾತಿಪದ್ಧತಿಯನ್ನೆಲ್ಲಾ ಮೀರಿ ಬದುಕುವ 'ದರ್ಶನ' ತೇಜಸ್ವಿ ಕಥನದ ವೈಶಿಷ್ಟ್ಯ.

ಜಾತಿ ವಿನಾಶಕ ಸಮ್ಮೇಳನ, ಸಮಾಜವಾದಿ ಚಳುವಳಿ, ರೈತ ಚಳುವಳಿ, ಸಮಕಾಲೀನ ಶಿಕ್ಷಣದ ಪ್ರಭಾವ ಇವೆಲ್ಲ ತೇಜಸ್ವಿ ಅವರ ಕತೆ, ಕಾದಂಬರಿಗಳಲ್ಲಿ ಹಲವು ಸನ್ನಿವೇಶಗಳಲ್ಲಿ ಕಾಣಿಸಿಕೊಂಡಿವೆ.

"ಹಿಂದೊಮ್ಮೆ ಜಾತಿ ವಿನಾಶ ಕಾರ್ಯಕ್ರಮ ಹಾಕಿ ಅಂತರ್ಜಾತೀಯ ವಿವಾಹವಾಗಬೇಕು, ಜಾತಿಗಳನ್ನು ಕಂದಾಚಾರವನ್ನೂ ಮೂಢನಂಬಿಕೆಗಳನ್ನೂ ತಿರಸ್ಕರಿಸಬೇಕು ಎಂದೆಲ್ಲಾ ತೀರ್ಮಾನ ತಗೊಂಡಾಗಲೂ ಅವರಿಗೆ

ತಾತ್ಕಾಲಿಕವಾಗಿಯಾದರೂ, ಹೀಗೆ ನೆಮ್ಮದಿಯಾಗಿತ್ತು. ಅದರೇನು ಮಾಡುವುದು ! ಈ ತೀರ್ಮಾನ ತೆಗೆದುಕೊಂಡ ಆ ಯುವ ಸಮುದಾಯದಲ್ಲಿ ಯಾವ ಯುವತಿಯೂ ಇರಲಿಲ್ಲ. ಇವರಲ್ಲಿ ಹೊತ್ತಿ ಉರಿಯುತ್ತಿದ್ದ ಪ್ರೀತಿಯ ದಾವಾಗ್ನಿಯನ್ನು ಕಂಡರೇ ಹುಡುಗಿಯರು ದಿಗಿಲುಬಿದ್ದು ಹತ್ತಿರ ಬರುತ್ತಿರಲಿಲ್ಲ. ಹುಡುಗಿಯರೂ ಇವರಂತೆಯೇ ಏಕಕಾಲದಲ್ಲಿ ತೀರ್ಮಾನ ತಗೊಳ್ಳದ ಕಾರಣ ಈ ಹುಡುಗರು ತಮ್ಮ ತೀರ್ಮಾನಗಳನ್ನು ಜಾರಿಗೆ ತರಲು ಸಾಧ್ಯವೇ ಆಗಲಿಲ್ಲ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೯, ಪುಟ ೨)

ಚಿದಂಬರ ರಹಸ್ಯ ಕಾದಂಬರಿಯ ಈ ಸಾಲುಗಳು ತೇಜಸ್ವಿಯವರಿಗೆ ಜಾತಿವ್ಯವಸ್ಥೆ, ಕಂದಾಚಾರ, ಮೂಢನಂಬಿಕೆಗಳ ಬಗೆಗಿರುವ ತಿರಸ್ಕಾರವನ್ನು ವ್ಯಕ್ತಪಡಿಸುತ್ತವೆ. ಅಲ್ಲದೇ ಇವುಗಳೆಲ್ಲವನ್ನು ಮೀರಿ ಬೆಳೆಯಲು 'ಕ್ರಾಂತಿ'ಯ ಅಗತ್ಯವಿದೆ ಎಂಬುದನ್ನು ತಿಳಿಸುತ್ತವೆ. ತೇಜಸ್ವಿ ಅವರ ಒಟ್ಟಾರೆ ಸಾಹಿತ್ಯದ ಆಶಯ ಇದೇ ಆಗಿದೆ.

ಚಿದಂಬರ ರಹಸ್ಯದ 'ಕೆಸರೂರು' ಸ್ಥಳೀಯ ರಾಜಕೀಯದ ಕಾರಣದಿಂದ ಜಾತಿ ವೈಶಮ್ಯ, ಕಾಡಿನ ಸಂಪನ್ಮೂಲಗಳ ಕಳ್ಳಸಾಗಾಣಿಕೆಗಳಿಂದ ಅವಸಾನದ ಹಾದಿ ಹಿಡಿದಿದೆ. ಈ ರೋಗಗ್ರಸ್ತ ಸಮಾಜಕ್ಕೆ ಪರಿಹಾರವೆಂದರೆ 'ಧರ್ಮನಿರಪೇಕ್ಷ ಪ್ರಜ್ಞೆ'. ಜಯಂತಿ ಮತ್ತು ರಫೀ ಅವರು ಕೆಸರೂರಿನ ಕಾಡಿನ ಬೆಂಕಿಯಿಂದ ತಪ್ಪಿಸಿಕೊಂಡು ಹೋಗುವುದು. ಕೆಸರೂರಿನ ಜಾತಿರಾಜಕೀಯವನ್ನು ಮೀರಿ ಹೊಸ ಬದುಕನ್ನು ಕಟ್ಟಿಕೊಳ್ಳುವುದು ಈ ದಿಸೆಯಲ್ಲಿ ಧ್ವನಿಪೂರ್ಣವಾಗಿದೆ. ಕಾದಂಬರಿಯ ಕೊನೆಯಲ್ಲಿ ಜಯಂತಿ, "ನೋಡು ಜೇನು ಕಲ್ಲು ಗುಡ್ಡದ ತುದಿ ಚೆನ್ನಾಗಿ ಕಾಣ್ತಿದೆ ಕೆಸರೂರಿನ ಜನ ಈಗಲೂ ಎಲ್ಲಾ ಅಲ್ಲಿಗೆ ಓಡಿದರೆ. ಬೆಂಕಿಯಿಂದ ತಪ್ಪಿಸಿಕೊಳ್ಳಬಹುದು ಎಂದಳು. ಆಗ ರಫೀ ನಮಗೆ ಕಾಣ್ತದೆ ಅವರಿಗೆ ಕಾಣ್ತದ? ಈ ಹೋಗೇಲಿ" (ಪೂರ್ಣಚಂದ್ರತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೯, ಪುಟ ೨೧೭)ಎನ್ನುವ ಮಾತುಗಳು ಕೆಸರೂರಿನ ಜನಕ್ಕೆ ಧರ್ಮನಿರಪೇಕ್ಷ ಭಾವನೆಯೊಂದಿಗೆ ಬದುಕುವ ವಿಶಾಲ ಬುದ್ಧಿ ಇಲ್ಲದಿರುವ ಬಗೆಗಿನ ವಿಷಾದ ಹಾಗೂ ಹತಾಶೆಯಿಂದ ಬಂದವುಗಳಾಗಿವೆ. ಈ ಜಾತಿ ಧರ್ಮ ಎಂಬ ನಾವು ಮಾಡಿಕೊಂಡಿರುವ ಕಟ್ಟುಪಾಡುಗಳಿಗಿಂತ 'ಜೀವನ' ದೊಡ್ಡದು. ನಮ್ಮ ಬದುಕಿನ ವಾಸ್ತವತೆಗಿಂತ ಈ ಕಟ್ಟುಪಾಡುಗಳು ದೊಡ್ಡದಲ್ಲ. ಇದಕ್ಕೆ 'ಮಾಯಾಲೋಕ' ಕಾದಂಬರಿಯ ಬಜ್ಜಿ ಹಾಕುವ 'ಫಾತಿಮಾ' ಉತ್ತಮ ನಿದರ್ಶನ.

"ಬಜ್ಜಿ ಫಾತಿಮಾ ಕೊಂಚ ಜಗಳಗಂಟಿ ಹೆಂಗಸು! ಬುರುಕಾ ಹಾಕಿಕೊಂಡು ವ್ಯಾಪಾರ ಮಾಡಬೇಕು ಎಂದು ಹೇಳಿದ್ದಕ್ಕೆ ಜಮಾತೆಯವರಿಗೆ ಹೀನಾಮಾನಾ ಬಯ್ದಿದ್ದಳಂತೆ. ಹಿಂದುಗಳೇ ಬಹುಸಂಖ್ಯಾತರಾಗಿರುವ ಗೊಂದಲಗೇರಿಯಲ್ಲಿ, ತಾನು ಬುರ್ಖಾ ತೊಟ್ಟುಕೊಂಡು ಜಾತಿಯನ್ನೇ ಮುಂದೆ ಮಾಡಿದರೆ ವ್ಯಾಪಾರಕ್ಕೆ ಕಲ್ಲು ಬೀಳುತ್ತದೆ ಎಂದು ಅವಳಿಗೆ ಸೂಕ್ಷ್ಮವಾಗಿ ಅನ್ನಿಸಿದ್ದರಿಂದಲೇ ಅವಳು ಸೀರೆ ಸುತ್ತಿಕೊಂಡು ವ್ಯಾಪಾರಕ್ಕೆ ಕುಳಿತಿದ್ದು, ಒಮ್ಮೊಮ್ಮೆ ಕುಂಕುಮ ಸಹ ಇಟ್ಟುಕೊಂಡು ಬರುತ್ತಿದ್ದಳು. ಶರಿಯತ್ ಕಾನೂನು ಅವಳ ಮೇಲೆ ಚಲಾಯಿಸಲು ಹೋದ ಜಮಾತೆಯವರು ಅವಳು ಹಲ್ಲುಕಡಿಯುತ್ತಾ ತಿರುಗಿ ಬಿದ್ದಿದ್ದು ನೋಡಿ ಅವಸರದಲ್ಲಿ ಜಾಗ ಖಾಲಿ ಮಾಡಿದ್ದರು". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೨೯)

ಹೀಗೆ ಜಾತಿ, ಧರ್ಮ ಎಂಬ ಕಟ್ಟು ಪಾಡುಗಳಿಗಿಂತ ಜೀವನಧರ್ಮ ಮುಖ್ಯ ಎಂಬ ಹೊಸ ಕಾಣ್ಕೆ ತೇಜಸ್ವಿಯವರ 'ಧರ್ಮನಿರಪೇಕ್ಷ ಪ್ರಜ್ಞೆ'ಗೆ ಸಾಕ್ಷೀಭೂತವಾಗಿದೆ. ತೇಜಸ್ವಿಯವರ ಈ ಬಗೆಯ ಚಿಂತನೆ, ಕುವೆಂಪು ಅವರ ವಿಶ್ವಮಾನವತಾವಾದದ ಸ್ಫೂರ್ತಿಯಿಂದ ಮೂಡಿ ಬಂದದ್ದಾಗಿದೆ. ಅಲ್ಲದೇ ಕುವೆಂಪು ಅವರ ಪೂರ್ಣದೃಷ್ಟಿ ತೇಜಸ್ವಿಯವರಲ್ಲಿ ಈ ರೀತಿ ಸಾಕಾರಗೊಂಡಿದೆ. ಈ ಬಗೆಯ ಹೊಸ ಸಾಧ್ಯತೆಗಳ ಹಲವಾರು ನಿದರ್ಶನಗಳನ್ನು ತೇಜಸ್ವಿ ಅವರ ಕೃತಿಗಳಲ್ಲಿ ಕಾಣಬಹುದು. ಅಲ್ಲದೆ ಸಂಪ್ರದಾಯವೇ ಮುಖ್ಯ ಎಂಬ ಭಾರತೀಯ ಮನಸ್ಸುಗಳು ಈ ಬಗೆಯ ಸುಧಾರಣೆಯನ್ನು ಒಪ್ಪುವುದು ಸುಲಭವಾದ ಮಾತಲ್ಲ ಎಂಬುದು ಅವರ 'ಕಾಡು ಮತ್ತು ಕ್ರೌರ್ಯ' ಕಾದಂಬರಿಯ ಈ ಸಾಲುಗಳನ್ನು ನೋಡಿದಾಗ ಅರ್ಥವಾಗುತ್ತದೆ.

"ಗೌಡರೋನು ಮಗ್ಗದೋಳ ಜೊತೆ ಕುಶಾಲು ಮಾಡ್ತಾ ಓಡಾಡ್ತಾನೆ. ಮದಿವಿ ಆತಾನಂತೆ. ಗೋಪಾಲ ಭಟ್ಟನಂಥಾವ. ಉಡುಪಿ ಮಠದ ಬ್ರಾಮಣನೇ ಜಾತೀಯಿಂದ ಹೊರ ಹಾಕ್ತಾರಂತ ಲಂಬಾಣೇರ ಹುಡುಗೀನ ಒಕ್ಕಲ ರಂಗನಿಗೆ ಮದುವೆ ಮಾಡ್ಸಿ ಕದ್ದು ಕೂಡಿದ. ಇನ್ನು ಪುಂಡಪೋಕರಿ. ನಾಕಕ್ಷರ ಕಲ್ತಿದ್ದಕ್ಕೆ ಅನಾಚಾರನ ಆಚಾರ ಮಾಡ್ತಾನೇನು?". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಕಾಡು ಮತ್ತು ಕ್ರೌರ್ಯ, ೨೦೧೨, ಪುಟ ೪೦)

"ಅವಳ ಸಮಾಜಸುಧಾರಕಿ ದೊಡ್ಡಮ್ಮನಿಂದ ಹಬ್ಬಿದ ರೋಗ ಅದು. ಮಕ್ಕಳು ಮರಿ ಇಲ್ಲದೆ ಖಾಲಿ ತೆಕ್ಕೆಯ ಗಾಳಿಯನ್ನೇ ತಬ್ಬಿ ಮುಕ್ಕಾಲು ಬಾಳು

ಕಳೆದಲ್ಲಪ್ಪಾ ! ಯಾವಳೋ ಒಬ್ಬಳು ಬೊಮ್ಮನ್ ಹುಡುಗಿಗೆ ಯಾವನೋ ಹೊಲೆಯನ್ನ ಕಟ್ಟಿ ಜೀವನ ಉದ್ಧಾರವಾಯ್ತು ಅನ್ನುಕೋತಾಳೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಕಾಡು ಮತ್ತು ಕ್ರೌರ್ಯ, ೨೦೧೨, ಪುಟ ೧೮)

ಭಾರತ ನಿಜವಾಗಲೂ ಉದ್ಧಾರವಾಗುವುದು ಜಾತಿಪದ್ಧತಿ ನಾಶವಾದಗಲೇ. ಆದರೆ ಸಂಪ್ರದಾಯ ಮನಸ್ಸುಗಳು ಇದಕ್ಕೆ ತಾತ್ಸಾರದೃಷ್ಟಿ ಬೀರುವುದು ಸರ್ವೇ ಸಾಮಾನ್ಯ. ಈ ತಾತ್ಸಾರ, ಅಸಹನೆ, ರೇಜಿಗೆಗಳನ್ನು ಮೀರಿದಾಗ ಮಾತ್ರ ಸಮಾಜಕ್ಕೆ ಅಂಟಿರುವ ಈ ಕೊಳೆಯನ್ನು ತೆಗೆಯಲು ಸಾಧ್ಯ. ಅಕ್ಷರ ಕಲಿತ ಯುವ ಪೀಳಿಗೆ ಇದನ್ನು ಅರ್ಥಮಾಡಿಕೊಂಡು ಮುನ್ನುಗುವ ಅಗತ್ಯ, ಅನಿವಾರ್ಯತೆ ಇದೆ ಎಂಬುದನ್ನು ತೇಜಸ್ವಿ ಅವರ ಈ ಸಾಲುಗಳು ಹೇಳುತ್ತವೆ. ವರ್ತಮಾನದ ಸಾಮಾಜಿಕ ಪರಿಸ್ಥಿತಿಯಲ್ಲಿ ಇದು ನಿಜವೂ ಹೌದು. ಕುವೆಂಪು ಅವರ ಕೃತಿಗಳಲ್ಲೂ ಈ ಆಶಯ ಪ್ರಧಾನವಾಗಿದೆ.

ಇಬ್ಬರ ಚಿಂತನೆಗಳ ಸಾದೃಶ್ಯ ಅಂಶವೆಂದರೆ, 'ವರ್ತಮಾನದ ಸಾಮಾಜಿಕ ಕಳಕಳಿ'. ತೇಜಸ್ವಿ ಅವರು "ಇಂಡಿಯಾ ಜಾತೀನ ಮೀರಬೇಕು ಅಂತಿದ್ರು. ನಾವು ಯಾರನ್ನೂ ಕನ್‌ವರ್ಟ್ ಮಾಡೋಕೆ ಹೋಗೊಲ್ಲ ಅಂತೀವಲ್ಲ ನಾವು. ಉದಾಹರಣೆಗೆ ಕ್ರಿಶ್ಚಿಯನ್ನರು ಕನ್‌ವರ್ಟ್ ಮಾಡ್ತಾರೆ. ಮುಸ್ಲೀಮರು ಮಾಡ್ತಾರೆ.... ಹಾಗೆ. ಅದಕ್ಕೆ ತೇಜಸ್ವಿ 'ನಾವು ಕನ್‌ವರ್ಟ್ ಮಾಡೋಕಾಗಲ್ಲ ಯಾವ ಜಾತಿಗೆ ಮಾಡ್ತೀರಿ ?' ಅಂತಿದ್ರು ಈ ರೀತಿ ನೋಡೋನು ಕಮ್ಯುನಲ್ ಆಗೋದು ಸಾಧ್ಯವಿಲ್ಲ. ಇಲ್ಲಿ ಜಾತಿವ್ಯವಸ್ಥೆ ಹೋಗಬೇಕಾದ್ರೆ ಅಂತರ್‌ಜಾತಿಯ ವಿವಾಹ ಆಗ್ಬೇಕು. ಅವರಿಗೆ ಮೀಸಲಾತಿ ನೀಡಬೇಕು ಎಂದೂ ಅವರು ಹೇಳುತ್ತಿದ್ದರು". (ಚಂದ್ರೇಗೌಡ ಬಿ. (ಸಂ.). ತೇಜಸ್ವಿ ನೆನಪು. ೨೦೦೭. ಪುಟ ೬) ಎಂಬ ಯು.ಆರ್. ಅನಂತಮೂರ್ತಿ ಅವರ ಮಾತುಗಳು ಉಲ್ಲೇಖಾರ್ಹ.

"ಈ ಪ್ರಪಂಚದಲ್ಲಿ ದೇವರು ಇದ್ದಾರೆ ಅಂತ ತಿಳಿದಾಗ ಎಂತಹ ವಿಸ್ಮಯ ಹುಟ್ಟಬಹುದೋ ಅದೇ ದೇವರು ಇಲ್ಲ ಅಂತ ತಿಳಿದಾಗಲೂ ಪ್ರಪಂಚದ ವಿದ್ಯಮಾನಗಳೆಲ್ಲಾ ಅಷ್ಟೇ ವಿಸ್ಮಯಕಾರಿಯಾಗಬಹುದು'ಅಂತ ಅವರು ಈಶ್ವರವಾದಿಯೂ ಅಲ್ಲ. ನಿರೀಶ್ವರವಾದಿಯೂ ಅಲ್ಲ. ಈ ಪ್ರಪಂಚದ ವಿಸ್ಮಯಗಳಿಗೆ ತೆರೆದುಕೊಂಡವರು ಯಾವ ಜಾತಿ. ಧರ್ಮವನ್ನೂ ಪಾಲಿಸುವುದಿಲ್ಲ. ಅವರು ನಿಧಾನವಾಗಿ ಕುವೆಂಪುರವರ ವಿಶ್ವಮಾನವತೆ ಕಡೆ ಚಲಿಸ್ತಾ ಇದ್ದರು. ಅವರಲ್ಲಿದ್ದ ಈ

ಬಂಡಾಯ, ರಾಜಕಾರಣ ಎಲ್ಲವೂ ಈ ಚಲನೆಗೆ ಅಡ್ಡ ಮಾಡುವ ಮನುಷ್ಯನ ಸಣ್ಣತನ, ಅಡ್ಡದಾರಿಗಳು ಇದರ ಬಗ್ಗೆ ಅವರಲ್ಲಿ ಅಸಹನೆ ಇತ್ತು". (ಚಂದ್ರೇಗೌಡ ಬಿ. (ಸಂ.), ತೇಜಸ್ವಿ ನೆನಪು, ೨೦೦೭, ಪುಟ ೭೦) ಎಂಬ ಯು.ಆರ್ ಅನಂತಮೂರ್ತಿ ಅವರ ಮಾತುಗಳು ತೇಜಸ್ವಿ ಅವರ 'ಧರ್ಮನಿರಪೇಕ್ಷ ಪ್ರಜ್ಞೆ'ಗೆ ಕನ್ನಡಿ ಹಿಡಿದಂತಿವೆ. ಅಲ್ಲದೆ, ರಹಮತ್ ತರೀಕೆರೆ ಅವರ ಮಾತುಗಳು ಈ ಅಂಶಗಳನ್ನು ಇನ್ನೂ ಸ್ಪಷ್ಟಪಡಿಸುತ್ತವೆ.

"ತೇಜಸ್ವಿ ಸಾಹಿತ್ಯದಲ್ಲಿ ಒಂದು ಶಕ್ತಿಯಾಗಿ ಇರುವ 'ವೈಚಾರಿಕತೆ' ಹಾಗೂ 'ಸಂಪ್ರದಾಯ ವಿರೋಧ'ವನ್ನು ಇಲ್ಲಿಯೇ ಅರ್ಥಮಾಡಿಕೊಳ್ಳಬೇಕು. ಅವರಿಗೆ ಸಾಂಪ್ರಾದಾಯಿಕ ಜಾತಿ ಮತ್ತು ಧರ್ಮಗಳ ಬಗ್ಗೆ ಆಕ್ರೋಶವಿತ್ತು. ಅವು ಸೃಜನಶೀಲವಾದದನ್ನು ಹುಟ್ಟಿಸಲಾರವು ಮಾತ್ರವಲ್ಲ, ಸೃಜನಶೀಲ ವ್ಯಕ್ತಿಗಳು ಯಾವುದೇ ಹೊಸ ಪ್ರಯೋಗ ಮಾಡುವುದನ್ನು ನಿರ್ಬಂಧಿಸುವ ಕೆಲಸ ಮಾಡುತ್ತವೆ ಎಂದು ಬಲವಾಗಿ ನಂಬಿದ್ದರು.

ನಾಗರಿಕ ಸಮಾಜವು ಸೃಷ್ಟಿಸಿಕೊಂಡಿರುವ ಶಿಷ್ಟಾಚಾರಗಳು ಹಾಗೂ ಯಾಂತ್ರಿಕ ಶಿಸ್ತುಗಳು ಕೂಡ ಈ ಸಂಪ್ರದಾಯಗಳ ಇನ್ನೊಂದು ಭಾಗ ಎಂತಲೇ ಉದ್ದೇಶಪೂರ್ವಕವಾಗಿ ಅವರು ಶಿಷ್ಟಾಚಾರಗಳನ್ನು ಒರಟಾಗಿ ವಿರೋಧಿಸುತ್ತಿದ್ದರು. ಜಾತಿ ಧರ್ಮಗಳು ಹಾಕುವ ಕಟ್ಟುಪಾಡು ಉಲ್ಲಂಘಿಸುವುದೇ ಸೃಜನಶೀಲತೆ ಪ್ರಕಟಿಸುವ ವಿಧಾನ ಎಂದು ಭಾವಿಸಿದ್ದರು....

ಸಾಹಿತ್ಯ ಪರಂಪರೆಯಿಂದ ಮತ್ತೊಬ್ಬ ಲೇಖಕ ಪ್ರೇರಣೆ ಪಡೆಯುವಂತೆ ಜಾತ್ಯಾತೀತವಾಗಿ ಬದುಕುವ, ಸಮಾಜ ಹಾಕುವ ಪ್ರತಿಬಂಧಗಳಾಚೆ ಸ್ವತಂತ್ರವಾಗಿ ಚಿಂತಿಸುವ ಗುಣವನ್ನು ಅವರು ಕುವೆಂಪು ಅವರಿಂದ ಪಡೆದರು. ಕುವೆಂಪು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿ'ಗಳಾಗಿ ಎಂಬ ಕರೆಯನ್ನು ತೇಜಸ್ವಿಯವರು ತಮ್ಮದೇ ಆದ ರೀತಿಯಲ್ಲಿ ಅನುವಾದ ಮಾಡಿಕೊಂಡು ಬದುಕಿದವರು ಮತ್ತು ಬರೆದರು. ಕುವೆಂಪು ಸತ್ತ್ವವು ಬೇರೆ ಬೇರೆ ರೂಪಾಂತರಗಳಲ್ಲಿ ಸುಪ್ತವಾಗಿ ತೇಜಸ್ವಿಯವರಲ್ಲಿ ಮುಂದುವರೆಯಿತು". (ಚಂದ್ರೇಗೌಡ ಬಿ. (ಸಂ.), ತೇಜಸ್ವಿ ನೆನಪು, ೨೦೦೭, ಪುಟ ೭೪)

ಕುವೆಂಪು ಹಾಗೂ ತೇಜಸ್ವಿ ಕಥನಗಳಲ್ಲಿ ಬಹುಮುಖ್ಯವಾಗಿ ಗಮನಸೆಳೆಯುವ ಮತ್ತೊಂದು ಅಂಶವೆಂದರೆ 'ಶೋಷಣೆ ವಿರೋಧಿ ಪ್ರಜ್ಞೆ' ಸನಾತನ

ಕಾಲದಿಂದಲೂ ಶೋಷಣೆ ಎಂಬುದು ವಿವಿಧ ರೂಪಗಳಲ್ಲಿ ಸಾಮಾಜಿಕ ಬದುಕಿನ ಜೊತೆ-ಜೊತೆಗೆ ಸಾಗುತ್ತಾ ಬಂದಿದೆ. ಇದನ್ನು ಮೀರುವ ಪ್ರಜ್ಞೆಯೊಂದರ ಆಶಯವನ್ನು ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥನಗಳಲ್ಲಿ ಕಾಣಬಹುದಾಗಿದೆ.

ಸಾಮಾನ್ಯವಾಗಿ 'ಶೋಷಣೆ' ಎಂಬುದು ಹಲವಾರು ರೀತಿ ವ್ಯಕ್ತವಾಗಿರುವುದನ್ನು ನಾವಿಲ್ಲಿ ಗಮನಿಸಬೇಕು. ಜಮೀನ್ದಾರರಿಂದ ಜೀತದಾಳುಗಳು ಹಾಗೂ ದಲಿತರ ಮೇಲೆ ಆಗುತ್ತಿರುವ ಶೋಷಣೆ, ಶಾಸ್ತ್ರಗಳು ಧರ್ಮದ ಹೆಸರಿನಲ್ಲಿ ಅವಿದ್ಯಾವಂತ ಮುಗ್ಧ ಗ್ರಾಮೀಣ ಜನರ ಮೇಲಾಗುತ್ತಿರುವ ಶೋಷಣೆ ಹಾಗೂ ಸರ್ಕಾರದ ನೀತಿಗಳು, ಕಾಯ್ದೆಗಳು, ಸ್ವಾರ್ಥ ರಾಜಕೀಯ, ಭ್ರಷ್ಟಾಚಾರಗಳಿಂದ ಅಮಾಯಕ ರೈತರು, ಕೂಲಿಕಾರರು, ಸಾಮಾನ್ಯ ಜನರ ಮೇಲಾಗುತ್ತಿರುವ ಶೋಷಣೆ, ಈ ರೀತಿ ಭಿನ್ನ ರೂಪಗಳ ಶೋಷಣೆಯ ನಾನಾಮುಖಗಳನ್ನು ಇಬ್ಬರು ಲೇಖಕರ ಕೃತಿಗಳಲ್ಲೂ ಕಾಣಬಹುದು.

ಕುವೆಂಪು ಅವರ 'ಧನ್ವಂತರಿಯ ಚಿಕಿತ್ಸೆ' 'ಸಾಲದ ಮಗು' ಕತೆಗಳು ಹಾಗೂ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಭಾರತೀಯ ಶ್ರೇಣೀಕರಣ ವ್ಯವಸ್ಥೆಯಲ್ಲಿ ವರ್ಣ-ವರ್ಗ ಸಂಘರ್ಷದ ಸ್ವರೂಪವನ್ನು ಗುರುತಿಸಬಹುದು. ಅಲ್ಲದೇ ತೇಜಸ್ವಿ ಅವರ 'ಚಿದಂಬರ ರಹಸ್ಯ', 'ಮಾಯಾಲೋಕ', 'ಜುಗಾರಿಕ್ರಾಸ್' ಕಾದಂಬರಿಗಳಲ್ಲಿ, 'ಕೃಷ್ಣೇಗೌಡರ ಆನೆ' 'ತಬರನ ಕತೆ'ಗಳಲ್ಲಿ ವ್ಯವಸ್ಥೆಯ ಭ್ರಷ್ಟತೆಯಿಂದಾಗಿ ಸಾಮಾನ್ಯ ಜನರಿಗೆ ಒದಗುವ ಸಂಕಷ್ಟಗಳು, ಶೋಷಣೆ ಸ್ವರೂಪವನ್ನು ವರ್ತಮಾನ ಸಂವೇದಿ ನೆಲೆಯಲ್ಲಿ ಮೂರ್ತಗೊಳಿಸಿರುವುದನ್ನು ಗುರ್ತಿಸಬಹುದು.

ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳಲ್ಲಿ ವರ್ಣಧರ್ಮದ ತಾರತಮ್ಯವಿಲ್ಲದ, ಸ್ವಚ್ಛಂದ ಪರಿಸರ ನಿರ್ಮಾಣದ ಆಶಯ ಪ್ರಧಾನವಾಗಿದೆ. ಶೂದ್ರರು, ದಲಿತರು, ಜಮೀನ್ದಾರರು ಹಾಗೂ ಬ್ರಾಹ್ಮಣರಿಂದ ಶೋಷಿತರಾಗುವ ಸ್ತರವನ್ನು ಕಾದಂಬರಿಗಳು ದಾಖಲು ಮಾಡುತ್ತವೆ. ಒಕ್ಕಲಿಗರು ಹಾಗೂ ಹಳೇಪೈಕದವರಿಗೂ ಇದ್ದ ಘರ್ಷಣೆಯ ಸ್ವರೂಪವನ್ನು ಗಮನಿಸುವುದು ಔಚಿತ್ಯ ಪೂರ್ಣವಾಗಿದೆ.

"ಲಕ್ಕುಂದದ ಜಮೀನಿನಲ್ಲಿ ಮುಕ್ಕಾಲು ಪಾಲು ಸಿಂಬಾವಿ ಭರಮೈ ಹೆಗ್ಗಡೆಯವರಿಗೆ ಸೇರಿತ್ತು. ಇನ್ನುಳಿದ ಕಾಲುಪಾಲು ಹಳೆಪೈಕದ ಸೇಸನಾಯ್ಕನ

ಸ್ವಂತದ್ದಾಗಿತ್ತು. ಸಾಧಾರಣವಾಗಿ ಒಕ್ಕಲಿಗ ಒಡೆಯರ ಒಕ್ಕಲುಗಳಾಗಿದ್ದುಕೊಂಡು ಬಗನಿಯ ಮರದಿಂದ ಕಳ್ಳು ಇಳಿಯಸಿ, ಕುಡಿದು, ಮಾರಿ, ಜೀವನ ಮಾಡುವ ಹಳೆ ಪೈಕದವರಿಗೆ ಸ್ವಂತ ಜಮೀನಿರುವುದು ಬಹಳ ಅಪೂರ್ವ; ಮಹಾ ಅನಾಚಾರವೆಂದೂ ಅನೇಕರ ಮನಸ್ಸು. ವೇದ ಕಲಿಯುವುದು ಶೂದ್ರರಿಗೆ ಹೇಗೆ ನಿಷಿದ್ಧವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೇಪೈಕದವರಿಗೆ ನಿಷಿದ್ಧ ಎಂದು ಒಕ್ಕಲಿಗರಾಗಿದ್ದ ಹೆಗ್ಗಡೆ, ಗೌಡ, ನಾಯಕರುಗಳೆಲ್ಲ ಸೇರಿ ತೀರ್ಮಾನ ಮಾಡಿದ್ದರು. ಅಷ್ಟೇ ಅಲ್ಲದೆ, ಮದುವೆ ಮೊದಲಾದ ಸಂಭ್ರಮಗಳಲ್ಲಿ ಹಳೆಪೈಕದವರು ಒಕ್ಕಲಿಗರನ್ನು ಯಾವ ವಿಧದಲ್ಲಿಯೂ ಅನುಸರಿಸಕೂಡದೆಂದೂ ಮಾಮೂಲು ಕಟ್ಟಾಗಿತ್ತು. ದಿಬ್ಬಣದಲ್ಲಿ ಮದುವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡಬಾರದು; ದಂಡಿಗೆಯ ಮೇಲೆ ಕೂತರಂತೂ ಮದುಮಕ್ಕಳಿಗೂ ದಿಬ್ಬಣದವರಿಗೂ ಉಳಿಗತಿಯಿರಲಿಲ್ಲ. ಈ ಚರ್ಚೆ ಸರ್ಕಾರದವರೆಗೂ ಹೋಗಿ ಅದೂ ಒಕ್ಕಲಿಗರ ಪರವಾಗಿಯೇ ತೀರ್ಮಾನ ಕೊಟ್ಟಿದ್ದರಿಂದ ಮಾಮೂಲಿಗೂ ಮಾತ್ಸರ್ಯಕ್ಕೂ ಕಾನೂನಿನ ಮುದ್ರೆ ಬೇರೆ ಬಿದ್ದಿತ್ತು". (ಕುವೆಂಪು, ಮಲೆಗಳಲ್ಲಿ ಮದುಮಗಳು, ೧೯೯೮, ಪುಟ ೮)

ಸರ್ಕಾರದ ಇತ್ಯರ್ಥ ನ್ಯಾಯ ಪರವಾಗಿಲ್ಲದೆ ಉಳ್ಳವರ ಪಕ್ಷಪಾತವಾಗಿರುವುದು ವ್ಯವಸ್ಥೆಯ ಭ್ರಷ್ಟತೆಗೆ ಸಾಕ್ಷಿಯಾಗಿದೆ. ಸಾಮಾಜಿಕ ವ್ಯವಸ್ಥೆಯ ಅಧಃಪತನ ಆಗುತ್ತಿರುವ ಸೂಕ್ಷ್ಮ ಗ್ರಹಿಕೆ ಇಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ, ಒಕ್ಕಲಿಗ ಜಮೀನಾರ್ದರಿಂದ ದಲಿತರು ಶೋಷಣೆ ಒಳಗಾಗುತ್ತಿದ್ದ ವಿವರಗಳನ್ನು 'ಮಲೆಗಳಲ್ಲಿ ಮದುಮಗಳು' ದಾಖಲಿಸುತ್ತದೆ. ಜಮೀನ್ದಾರರ ಜೀತದಾಳುಗಳಾಗಿದ್ದ 'ದಲಿತರ'ಮೇಲಿನ ಶೋಷಣೆ 'ಹೊನ್ನಾಳಿ ಹೊಡ್ತ'ದ ಸಂದರ್ಭದಲ್ಲಿ ದಾರುಣವಾಗಿ ಚಿತ್ರಿತವಾಗಿದೆ.

"ಇಜಾರದ ಸಾಬು ತನ್ನ ಕೈಯಿಂದ ಉಗ್ರ ಸನ್ನೆ ಮಾಡಿ ತಲೆಯಾಡಿಸಿ ಕರೆದೊಡನೆಯೆ, ಗಾಡಿಯ ನೊಗಕ್ಕೆ ಹೆಗಲು ಕೊಟ್ಟು ಕೊಟ್ಟು ಅಭ್ಯಾಸವಿದ್ದ ಗಾಡಿಯೆತ್ತು ಗಾಡಿ ಹೊಡೆಯುವವನು ಮೂರೆಗೆ ಕೈ ಹಾಕಿ ಎತ್ತಿ ಲೋಚಗುಟ್ಟಿದೊಡನೆಯ ನೊಗಕ್ಕೆ ವಿಧೇಯತೆಯಿಂದ ಹೆಗಲು ಕೊಡುವಂತೆ, ಸಣ್ಣಬೀರ ನಡುನಡುಗುತ್ತಲೆ, ನಾಲಗೆ ಬಿದ್ದು ಹೋಗಿ ಮಾತು ಸತ್ತವನಂತೆ ಮೂಕ ಪಶುವಿನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನೂ ಒಮ್ಮೆ ದುಃಖದೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನು ನೋಡುತ್ತಾ ಶಿಕ್ಷಾಸ್ತಂಭದ ಕಡೆ ಮುಂದುವರಿದನು. ಅವನು ಹೋದ ರೀತಿ ಆ ಕಂಬವನ್ನು ತಬ್ಬಿ ಆ

ಯೂಪಸ್ತಂಭಕ್ಕೆ ಬಲಿ ಕಟ್ಟಿಸಿಕೊಳ್ಳುವ ಯಜ್ಞವಿಧಾನ ಅವನಿಗೆ ಪೂರ್ವ ಪರಿಚಿತವಾದದ್ದು ಎಂಬುದು ಚೆನ್ನಾಗಿ ಗೊತ್ತಾಗುವಂತಿತ್ತು.

ತಾನು ಮಾತ್ರವೆ ಅಲ್ಲದೆ ಇತರ ಅಪರಾಧಿಗಳೂ ಗೌಡರ ಕ್ರೋಧಕ್ಕೆ ಪಾತ್ರರಾಗಿ ಆ ಯೂಪಸ್ತಂಭಕ್ಕೆ ಯಜ್ಞಪಶುಗಳಾಗಿದ್ದುದನ್ನು ಅವನು ಹಿಂದೆ ಎಷ್ಟೋ ಸಾರಿ ಕಂಡೂ ಇದ್ದನು, ಅನುಭವಿಸಿಯೂ ಇದ್ದನು. ಆಜ್ಞೆಯಾದೊಡನೆಯೆ ಹೋಗಿ, ನೊಗಕ್ಕೆ ಹೆಗಲು ಕೊಡುವಂತೆ ಕಂಬವನ್ನು ತಬ್ಬಿ ನಿಂತು ಕೈ ಕಟ್ಟಿಸಿಕೊಳ್ಳಲು ಒಪ್ಪದೆ ಪ್ರತಿಭಟಿಸಿದವರಿಗೆ ಏನು ಯಮಶಿಕ್ಷೆ ಒದಗುತ್ತಿತ್ತು ಎಂಬುದೂ ಅವನಿಗೆ ಗೊತ್ತಿದ್ದ ವಿಷಯವೇ ಆಗಿತ್ತು". (ಕುವೆಂಪು, ಮಲೆಗಳಲ್ಲಿ ಮದುಮಗಳು, ೧೯೬೭, ಪುಟ ೩೩೫)

ಈ ಬಗೆಯ 'ಶೋಷಣೆ' ಎಂತಹವರ ಮನದಲ್ಲೂ ಕರುಣೆ ಉಕ್ಕಿಸುತ್ತದೆ. ತಾನು ಮಾಡದ ತಪ್ಪಿಗೆ ನಿಷ್ಕಾರಣವಾಗಿ, ದಾರುಣವಾಗಿ ಹುಣಿಸೆಬರಲುಗಳಲ್ಲಿ ಬೆತ್ತಲೆ ಬೆನ್ನ ಮೇಲೆ ಚರ್ಮ ಸುಲಿದು ಬರುವಂತೆ ಹೊಡೆತ ಅನುಭವಿಸುವುದು ದುರಂತ. ಮೊದಲ ಬಾರಿಯ ಹೊಡೆತಕ್ಕೇ ಬಾಸುಂಡೆಗಳೆದಿದ್ದ ಬೆನ್ನು ಎರಡನೆಯ ಪೆಟ್ಟುಗಳಿಗೆ ಇದಕ್ಕಿದ್ದ ಹಾಗೆಯೆ ಕೆಂಪಾಗಿ ರಕ್ತ ಚಿಮ್ಮಿ, ಅವನ ಉಟ್ಟಿದ ಪಂಚೆಗೆ ಮೂತ್ರಮಾಡಿಕೊಂಡು ನೆಲ ತೊಯ್ದು, ಬಟ್ಟೆಯೆಲ್ಲಾ ರಕ್ತದಿಂದ ಕೆಂಪಾಯಿತು. ಅಲ್ಲದೆ, ಅವನ ಕರುಣಾಪೂರಿತ ಕೂಗು ಒಮ್ಮೆಗೆ ನಿಂತು ಹೋಗಿ, ತಲೆ ಕತ್ತಿನ ಮೇಲೆ ನಿಲ್ಲದೆ ಜೋಲಿತು.

ಈ ಬಗೆಯ ಶೋಷಣೆಯ ಚಿತ್ರವನ್ನು ಬಹುಷಃ ಕುವೆಂಪು ಅವರಷ್ಟು ನೈಜವಾಗಿ ಯಾವ ಲೇಖಕರು ಕಟ್ಟಿಕೊಡಲು ಸಾಧ್ಯವಾಗಿಲ್ಲ. ದೊಡ್ಡಬೀರನ ಅಂಗಲಾಚುವಿಕೆ ಅಸಹಾಯಕ ನೋಟ, ದಲಿತರ ಅಸಹಾಯಕ ಬದುಕು ಅಂದಿನ ಮಲೆನಾಡಿನ ಸಮಾಜದಲ್ಲಿ ನಿಕೃಷ್ಟವಾಗಿತ್ತು ಎಂಬುದರ ಕಲ್ಪನೆಯನ್ನು ಕಟ್ಟಿಕೊಡುತ್ತದೆ. ಇದೇ ರೀತಿ ಅವರ 'ಸಾಲದ ಮಗು' ಕತೆಯಲ್ಲಿ ಗೌಡರ ದಾಷ್ಟ್ಯಕ್ಕೆ ಗುರಿಯಾಗಿ 'ಸುಬ್ಬ' ಎಂಬ ಮಗು ಸಾವನ್ನಪ್ಪುವ ಚಿತ್ರವೂ, ಶೋಷಣೆಯ ಕರಾಳಮುಖವನ್ನು ಪರಿಚಯಿಸುತ್ತದೆ.

"ಮಳೆ ಸುರಿಯುತ್ತಲೆ ಇತ್ತು. ಗಾಳಿ ಮಿಂಚು, ಗುಡುಗುಗಳೂ ನಿಂತಿರಲಿಲ್ಲ. ಕತ್ತಲೆ ಕ್ರೂರವಾಗಿತ್ತು. ಹಾದಿಯ ತುಂಬಾ ಕೆಸರು. ಸುಬ್ಬನು ಕಾಲಿಟ್ಟಂತೆಲ್ಲಾ ಪಿಚಪಿಚನೆ ಹಾರುತ್ತಿತ್ತು. ಲಾಟೀನಿಗೆ ಕೆಸರಾದರೆ, ಗೌಡರು ಮತ್ತೆ ಎಲ್ಲಿ ಹೊಡೆಯುತ್ತಾರೆಯೋ ಎಂದು ಹೆದರಿ ಅದನ್ನು ಶಕ್ತಿ ಮೀರಿ ಎತ್ತಿ ಹಿಡಿದುಕೊಂಡು

ನಡೆದನು. ಕೂಣಿ ಇದ್ದ ಸ್ಥಳ ಎಂಟು ಹತ್ತು ಪರ್ಲಾಂಗುಗಳಷ್ಟು ದೂರವಾಗಿತ್ತು. ಸುಬ್ಬ ನಡೆದನು.

ರುದ್ರಪ್ರಕೃತಿಯ ಹೊರತು ಮತ್ತೊಂದು ಜೀವಜಂತು ಹೊರಗಿರಲಿಲ್ಲ. ಹೋಗುತ್ತಾ ಸುಬ್ಬನು ಒಂದು ಗದ್ದೆ ಅಂಚಿನಿಂದ ಮತ್ತೊಂದು ಗದ್ದೆ ಅಂಚಿಗೆ ಹಾರುತ್ತಿದ್ದಾಗ ಕೆಸರಿನಲ್ಲಿ ಜಾರಿ ಬಿದ್ದು ಲಾಟೀನು ಒಡೆದು ಹೋಯಿತು. ದೀಪ ನಂದಿತು. ಸುಬ್ಬ ಕಗ್ಗತ್ತಲಲ್ಲಿ ಮುಳುಗಿ ಕರಗಿಯೆ ಹೊದಂತಾಯಿತು. ಗದ್ದೆಯಂಚಿನ ಮೇಲೆ ಕುಳಿತು ಅತ್ತನು. ಲಾಟೀನು ಒಡೆದುದಕ್ಕಾಗಿ. ಅತ್ತು ಅತ್ತು, ಮನೆಗೆ ಮೀನು ತಾರದೆ ಹಿಂದಿರುಗಿದರೆ ಏನು ಗತಿಯಾಗುವುದೋ ಎಂದು ಹೆದರಿ. ಮತ್ತೆ ಆ ಕತ್ತಲಲ್ಲಿಯೇ ಆ ಮಳೆಗಾಳಿಗಳ ಪ್ರಚಂಡಪ್ರಲಯದಲ್ಲಿ ಮುಂಬರಿದನು". (ಕುವೆಂಪು., ನನ್ನ ದೇವರು ಮತ್ತು ಇತರ ಕಥೆಗಳು, ೨೦೦೫, ಪುಟ ೧೩)

ತನ್ನ ತಂದೆ ಮಾಡಿದ ಸಾಲಕ್ಕಾಗಿ ಜೀತಕ್ಕಿರುವ ಸುಬ್ಬನ ನಿಕೃಷ್ಟ ಸ್ಥಿತಿ. ದಾರುಣವಾಗಿದೆ. ಕೂಣಿಯ ಬಳಿ ಸೇರಿಕೊಂಡಿದ್ದ ಕೃಷ್ಣಸರ್ಪ ಸುಬ್ಬನನ್ನು ಕಚ್ಚಿ ಸಾವನ್ನಪ್ಪುತ್ತಾನೆ. ಅವನನ್ನು ಹುಡುಕಿಕೊಂಡು ಹೊರಟಾಗ ಬಿದ್ದಿದ್ದ ಲಾಟೀನನ್ನು ನೋಡಿ ಗೌಡನು, 'ಅವನು ಸಿಕ್ಕಲಿ ಎಲುಬು ಮುರಿಯುತ್ತೇನೆ !' ಎನ್ನುವುದು. ಸುಬ್ಬನ ನಿಮಿರಿ ನಿಂತ ಹೆಣವನ್ನು ನೋಡಿ ಬಹಳ ವ್ಯಸನಪಟ್ಟುಕೊಂಡು 'ಅಂತೂ ಮೂನ್ನೂರು ರೂಪಾಯಿ ಮನೆಗೆ ಬಂತು !' ಎಂದು ನಿಟ್ಟುಸಿರು ಬಿಡುವುದು ನಿಜಕ್ಕೂ ಕ್ರೂರ ಜಮೀನ್ದಾರಿ ಮನಸ್ಥಿತಿ ಎನ್ನಬಹುದು. 'ಸುಬ್ಬ'ನ ಜೀವಕ್ಕೆ ಸಂದ ಬೆಲೆ ಶೂನ್ಯ ಮಾತ್ರ. ಸಾಲದ ಹಣ ಕೈತಪ್ಪಿ ಹೋಯಿತು ಎಂದು ವ್ಯಸನ ಪಡುವ ಗೌಡನ ಮನಸ್ಸು ಪಾಪದ ಹುಡುಗನ ಸಾವಿಗೆ ಲವಾಲೇಶವೂ ಚಿಂತಿಸುವುದಿಲ್ಲ ಎಂದಾಗ ಜಮೀನ್ದಾರರ ಶೋಷಣೆಯ ತೀವ್ರತೆ ಅರಿವಾಗುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ತಮ್ಮ ಪೈಕಿಯ ಜೀತದಾಳು ಬೇರೆ ಹುಡುಗನನ್ನು ಮದುವೆಯಾದರೆ ದುಡಿಯುವ ಆಳೊಂದು ಕೈತಪ್ಪಿ ಹೊಗುತ್ತದೆ ಎಂಬ ಕಾರಣಕ್ಕಾಗಿ ಸಣ್ಣಬೈರನಿಗೆ ಹೊನ್ನಾಳಿ ಹೊಡೆತ ಕೊಡುವುದು, ಅಂದಿನ ಸಾಮಾಜಿಕ ಬದುಕಿನ ಭರ್ಬರತೆಯನ್ನು ಚಿತ್ರಿಸುತ್ತದೆ. ಈ ಜೀತಪದ್ಧತಿಯನ್ನು ಧಿಕ್ಕರಿಸಿ ನಿಲ್ಲಬೇಕು ಎಂಬ ಆಶಯ ಕುವೆಂಪು ಅವರ ಕೃತಿಗಳಲ್ಲಿದೆ.

ಕುವೆಂಪು ಅವರ ಆದರ್ಶವಾದೀ ಧೋರಣೆ ಇಂತಹ ವ್ಯವಸ್ಥೆ ಕುರಿತು ಯಾವ ನಿಲುವು ತೆಗೆದುಕೊಳ್ಳುತ್ತದೆ ಎಂಬುದು ಊಹಿಸಬಹುದಾದದ್ದೇ. ಈ ವ್ಯವಸ್ಥೆಯಲ್ಲಿನ ಅಮಾನವೀಯತೆಯನ್ನು ಅವರು ಗ್ರಹಿಸುತ್ತಾರೆ. ಅಲ್ಲದೇ ಈ ಜೀತ ವ್ಯವಸ್ಥೆಯನ್ನು ಧಿಕ್ಕರಿಸಿ ಗುತ್ತಿ-ತಿಮ್ಮಿ ಒಂದಾಗುತ್ತಾರೆ. ಸೇಸಿಯ 'ಮಾತೃತ್ವ' ಈ ವ್ಯವಸ್ಥೆಯನ್ನು ಪ್ರತಿಭಟಿಸುತ್ತದೆ.

"ತನ್ನ ಗಂಡನಿಗೂ ಮಗನಿಗೂ ಏನು ಗತಿಯಾಗುತ್ತದೆಯೇ ಎಂದು ಹೆದರಿ ಬಿಡಾರದಿಂದ ಓಡೋಡಿ ಬಂದು, ಬಚ್ಚನೊಡನೆ ದೂರದಲ್ಲಿ ಮರೆಯಾಗಿ ನಿಂತಿದ್ದ ಸೇಸಿ ಎದೆ ಎದೆ ಬಡಿದುಕೊಳ್ಳುತ್ತಾ ಬಂದು, ಇಜಾರದ ಸಾಬಿಯ ಕೈಲಿದ್ದ ಹುಣಸೆಯ ಬರಲನ್ನು ಕಸಿದೆಸೆದು ಅವನನ್ನು ತಳ್ಳಿ ತಲೆ ಜೋಲುತ್ತಿದ್ದ ತನ್ನ ಮಗನನ್ನು ಆತುಕೊಳ್ಳುತ್ತಾಳೆ.

ದಾಂಡಿಗನೂ ಬಲಿಷ್ಟನೂ ಕ್ರೂರಿಯೂ ಆಗಿ, ಇಂತಹ ಧೂರ್ತಕರ್ಮಗಳಲ್ಲಿ ನುರಿತು ನಿಷ್ಠುರನಾಗಿದ್ದ ಇಜಾರದ ಸಾಬಿಗೆ ಅದೇನಾಯಿತೋ ಏನೋ? ಇದಕ್ಕಿಂತಂತೆ ಸತ್ತ್ವಹೀನ ನಾದವನಂತೆ ನಿರ್ಬಲವಾಗಿ ಸೇಸಿ ದುಃಖಾರ್ತೆಯಾಗಿ ಓಡಿಬಂದು ಎಳೆದೊಡನೆ, ಅವನ ಕೈಲಿದ್ದ ಹುಣಸೆ ಬರಲು ತನಗೆ ತಾನೆ ಕೈಬಿಟ್ಟು ಹೊಗುತ್ತದೆ. ಅವಳು ತಳ್ಳಿದೊಡನೆ ಒಂದಲ್ಲ, ಎರಡು ಮೂರು ಹೆಜ್ಜೆ ಹಿಂಜರಿದು ಸ್ತಂಭೀಭೂತನಾದವದಂತೆ ನಿಂತುಬಿಡುತ್ತಾನೆ. ಹೊಲೆಯಳಾದರೂ, ಬಡವಳಾದರೂ ಯಾವ ವಿಧವಾದ ವ್ಯಕ್ತಿತ್ವ ವಿಶೇಷವೂ ಲಾವಲೇಶವೂ ಇಲ್ಲದವಳಾದರೂ, ಸಂಕಟತಪ್ತ ತಾಯ್ತನ ಎಂತಹ ಅಲ್ಪ ಸ್ತ್ರೀಯನ್ನಾದರೂ ಭೂಮಪಟ್ಟಕ್ಕೇರಿಸಿ ಬಿಡುತ್ತದೆಯೋ ಏನೋ ಎಂಬಂತೆ ಅವಳ ಮಾತೃದುಃಖಜನ್ಯ ಕ್ರೋಧದ ಸಾನ್ನಿಧ್ಯಭೀಷಣೆ ಕ್ಷಣಮಾತ್ರ ಭೀತಚೇತನನಾದನು ಇಜಾರದ ಸಾಬಿ.

ಗೌಡರ ಆಜ್ಞೆಯನ್ನು ಮರೆತು, ಸೇಸಿಯ ಮಾತಿಲ್ಲದ ಆಣತಿಗೆ ಒಳಗಾದವನಂತೆ ಬೇಗ ಬೇಗನೆ ಸಣ್ಣಬೀರನನ್ನು ಬಿಗಿದಿದ್ದ ಹಗ್ಗದ ಕಟ್ಟುಗಳನ್ನೆಲ್ಲ ಬಿಚ್ಚಿಹಾಕುತ್ತಾನೆ. ಪ್ರಜ್ಞೆ ತಪ್ಪಿದ್ದ ಪ್ರಾಯದ ಮಗನ ಭಾರವನ್ನು ಆತೂ ಆನಲಾರದೆ ನೆಲದ ಮೇಲೆ ಮಲಗಿಸುತ್ತಾಳೆ ಸೇಸಿ". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೬೮, ಪುಟ ೩೪೧)

'ಸೇಸಿ'ಯ ಈ ಪ್ರತಿಭಟನೆ ಎಂತಹ ಬಲಿಷ್ಟನಾದರೂ ಇಜಾರದ ಸಾಬಿಯನ್ನು ಒಂದು ಕ್ಷಣ ಅಲುಗಾಡುವಂತೆ ಮಾಡುತ್ತದೆ. ಕಲ್ಲಯ್ಯಗೌಡರನ್ನು

ಕಲ್ಲಂತೆ ಕುಳಿತುಕೊಳ್ಳುವಂತೆ ಮಾಡುತ್ತದೆ. ಈ ಬಗೆಯ 'ಪ್ರತಿಭಟನೆ' ಎದುರಾದಾಗ ಮಾತ್ರ, ಶೋಷಣೆಯನ್ನು ಮೆಟ್ಟಿ ನಿಲ್ಲಬಹುದು. ಸಮಾಜದ ವಿವಿಧ ಸ್ತರಗಳಲ್ಲಿ ನಡೆಯುತ್ತಿರುವ ಅಸ್ಪೃಶ್ಯತೆಯನ್ನು ಮೆಟ್ಟಿ ನಿಲ್ಲುವುದಕ್ಕೆ ಸಾಧ್ಯ.

ಸಮಾನತೆಯ ಸಾಮಾಜಿಕ ಪರಿಸರಕ್ಕೆ ಈ ಬಗೆಯ ಪ್ರತಿಭಟನೆ ಅನಿವಾರ್ಯವೂ, ಅಗತ್ಯವೂ ಆಗಿದೆ ಎಂಬುದನ್ನು ಈ ಘಟನೆ ಧ್ವನಿಸುತ್ತದೆ. ಸೇಸಿಯ ಮನಸ್ಸಿನಲ್ಲಾಗುವ ಜಿಜ್ಞಾಸೆ, ಹತಾಶೆ, ಅಸಹಾಯಕತೆಯ ನಡುವೆಯೂ ವ್ಯಕ್ತವಾಗುವ 'ಶೋಷಣೆಯ ವಿರೋಧಿಪ್ರಜ್ಞೆ'ಯ ಅಂಶಗಳನ್ನು ಇಲ್ಲಿ ಉಲ್ಲೇಖಿಸಬಹುದು.

"ಆಗಲೇ ಅವಳು ಮನಸು ಮಾಡಿದ್ದು, ಕಟ್ಟಾಳಾಗಿದ್ದ ತರುಣ ಗುತ್ತಿಯನ್ನು ನೋಡಿ, ತನ್ನ ಮಗಳು ತಿಮ್ಮಿಯನ್ನು ಏನೇ ಆಗಲಿ ಅವನಿಗೇ ಕೊಟ್ಟು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು. ಆದರೆ ಜೀತುದಾಳುಗಳಿಗೆ ಆ ಹಕ್ಕು ಎಲ್ಲಿಂದ ಬರಬೇಕು? ಒಡೆಯರ ಆಸ್ತಿಯಾಗಿದ್ದ ಅವರನ್ನು ಯಾರಿಗೆ ಕೊಡಬೇಕು ? ಎಲ್ಲಿಗೆ ಕೊಡಬೇಕು? ಎಂಬುದನ್ನು ತಂದೆ ತಾಯಿಗಳು ನಿರ್ಧರಿಸಲು ಸಾಧ್ಯವೆ ? ತಮ್ಮ ಜಾನುವಾರುಗಳನ್ನು ಬಿಕರಿ ಮಾಡುವ ಹಕ್ಕು ಎಂತೋ ಅಂತೆ ಬೇಲರು, ಹೊಲೆಯರು, ಮಾದಿಗರು ಮೊದಲಾದ ತಮ್ಮ ಹೆಣ್ಣು ಗಂಡುಗಳನ್ನು ಇಡುವ ಕೊಡುವ ಬಿಡುವ ಹಕ್ಕು ಅವರದ್ದೇ ತಾನೆ? ವಸ್ತುತಃ ಹಾಗಿದ್ದರೂ ಸೇಸಿ ಎಷ್ಟಾದರೂ ಮನುಷ್ಯ ವರ್ಗಕ್ಕೆ ಸೇರಿದವಳಲ್ಲವೆ ? ಅವಳೇನು ದನ ಅಲ್ಲವಲ್ಲ !

ಮಾನವ ವರ್ಗಕ್ಕೆ ಸಹಜವಾದ ಸ್ವಾತಂತ್ರ್ಯ, ಇಚ್ಛೆ, ಆಶೆ ಅಪೇಕ್ಷೆಗಳು ಕೈಗೂಡಲಿ ಬಿಡಲಿ, ಪ್ರಯತ್ನ ಮಾಡುವುದರಿಂದ ತಪ್ಪಿಸಿಕೊಳ್ಳಲಾದೀತೆ? ಅದರಿಂದ ಎಂತಹ ಹಾನಿಯೆ ಒದಗಲಿ, ಸರ್ವನಾಶವೆ ಬೇಕಾದರೂ ಆಗಲಿ, ಮಾನವತ್ವವನ್ನು ತಲುಪಿದ ಚೇತನ ಕಲ್ಲುಮಣ್ಣುಗಳಂತೆ ತಟಸ್ಥವಾಗಿ ಬಿದ್ದಿರಲು ಸಾಧ್ಯವಿಲ್ಲ. "ಆದ್ದರಿಂದಲೇ ಸೇಸಿಯ ಚೇತನ, ಅದು ಪ್ರಾಣಿ ಸಮೀಪವೇ ಆಗಿದ್ದರೂ ತನ್ನ ಮನುಷ್ಯ ಸಹಜವಾಗಿದ್ದ ಹಕ್ಕನ್ನು ಸ್ಥಾಪಿಸಿಕೊಳ್ಳಲು ಭಯಂಕರವಾಗಿದ್ದ ಕ್ರೂರವಾದ ದುರ್ದಮ್ಯವಾದ ಪ್ರತಿಭಟನೆ ಮತ್ತು ಪ್ರತೀಕಾರಗಳ ಮೃತ್ಯುಭೀಕರ ರೌರವ ನರಕವೆ ತನ್ನಿದಿರೇ ಆ ಎಂದು ಬಾಯಿ ತೆರೆಯುವ ಸಂಭವವಿದ್ದರೂ ಅಂಜುತ್ತಂಜುತ್ತಲೆ ಬದ್ಧ ಕಂಕಣವಾದಂತೆ ಯತ್ನಶೀಲವಾಗಿತ್ತು". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೬೮, ಪುಟ ೩೪೪)

ವ್ಯವಸ್ಥೆಯ ಪ್ರತಿಬಂಧಕಗಳಿಂದ ಆಚೆಗೆ ಪ್ರಯತ್ನಶೀಲವಾಗಬೇಕೆಂಬ ಈ ಬಗೆಯ ಊರ್ಧ್ವಮುಖಿ ಚಿಂತನೆ ಕುವೆಂಪು ಅವರ ಕೃತಿಗಳ ಪ್ರಧಾನ ಭಿತ್ತಿ ಆಗಿದೆ. ಕುವೆಂಪು ಅವರ ಕೃತಿಗಳಲ್ಲಿ ವ್ಯಕ್ತವಾಗಿರುವ ಜಾತಿವ್ಯವಸ್ಥೆಯ ಬಗ್ಗೆ ಹಲವಾರು ಲೇಖಕರು ವಿಶ್ಲೇಷಣೆ ಮಾಡಿದ್ದಾರೆ. ತೇಜಸ್ವಿ ಕೃತಿಗಳಲ್ಲಿ ವರ್ಣವ್ಯವಸ್ಥೆಯ ಬಗೆಗೆ ವಿವರಗಳು ಕ್ವಚಿತ್ ಆಗಿದ್ದರೂ ಕುವೆಂಪು ಅವರ ಸರ್ವೋದಯ ಸಮಾನತೆಯ ಅಂಶಗಳನ್ನು ಕಾಣಬಹುದು.

'ಜಾತಿಯ ಕಲ್ಪನೆ' ಜನರ ಮನಸ್ಸುಗಳಲ್ಲಿ ಎಷ್ಟು ಆಳವಾಗಿ ಬೇರೂರಿದೆ ಎನ್ನುವುದಕ್ಕೆ ಜಿ.ಎಸ್ ಆಮೂರ ಅವರು ಗುರುತಿಸಿರುವಂತೆ ಈ ನಿದರ್ಶನಗಳನ್ನು ಕಾಣಬಹುದು. ಕಲ್ಲೂರು ದೇವಸ್ಥಾನದ ಬ್ರಾಹ್ಮಣರು ಎತ್ತಿ ಹಿಡಿಯುವ 'ಜಾತಿವ್ಯವಸ್ಥೆ' ಬಾಲ್ಯದಿಂದಲೇ ಹೇಗೆ ಮನಸ್ಸುಗಳ ಮೇಲೆ ಆಘಾತ ಮಾಡುತ್ತವೆಯನ್ನುವುದಕ್ಕೆ ತಿಮ್ಮು, ಧರ್ಮ, ಕಾಡು, ಬ್ರಾಹ್ಮಣ ವಿಧವೆಯೊಬ್ಬಳಿಗೆ ತೋರುವ ಪ್ರತಿಕ್ರಿಯೆ ಉದಾಹರಣೆಯಾಗಿದೆ.

"ಕಾಡಣ್ಣಯ್ಯ ನಮ್ಮಲ್ಲಿಯೂ ಹೀಗೆ ಮಾಡ್ತಾರೇನೋ, ಗಂಡ ಸತ್ತರೂ ? ಥೂ ಥೂ ಥೂ! ಎಂಥ ಮಾತಾಡ್ತಿಯೋ ನಮ್ಮಲ್ಲಿ ಯಾರೂ ಹೀಂಗೆ ಮಾಡಾದಿಲ್ಲೋ !. ಬಾಂಬ್ರ ಜಾತೀಲೆ ಮಾತ್ರ ಹಂಗೆ ಮಾಡಾದೂ.

ಸದ್ಯ ನಾನೂ ನನ್ನವ್ವನೂ ಬಿರಾಂಬ್ರ ಜಾತೀಲಿ ಹುಟ್ಟದೆ ಗೌಡರ ಜಾತೀಲಿ ಹುಟ್ಟಿದ್ದೀವಲ್ಲಾ' ಮನಸ್ಸಿನಲ್ಲಿಯೇ ಅಂದುಕೊಂಡು ಧರ್ಮು ಹೊಳೆಯ ಅಂಚಿನ ತಳಕ್ಕೆ ನೀರಿಗಿಳಿದನು". (ಆಮೂರ ಜಿ.ಎಸ್., ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಸಂಸ್ಕೃತಿ, ಪುಟ ೭೫)

ಬಾಲಕರು ಜಾತಿ ವ್ಯವಸ್ಥೆಯ ದುರಂತಗಳನ್ನು ಗ್ರಹಿಸುವ ರೀತಿ ನಿಜಕ್ಕೂ ಅಚ್ಚರಿ ಎನಿಸುತ್ತದೆ. 'ಕಾನೂರು ಹೆಗ್ಗಡಿತಿ'ಯಲ್ಲಿ ಬೈರ–ಸಿದ್ದರು ಏಡಿಷಿಕಾರಿ ಮಾಡುವಾಗ ಅವರ ಸಂಭಾಷಣೆಯಲ್ಲಿ ಇಡೀ ಕಾನೂರಿನ ಮನೆತನದ ಸಾಮಾಜಿಕ ಮೌಲ್ಯಗಳು ಮತ್ತು ತಮ್ಮ ಸಮಾಜದ ಸರಳ ನಂಬಿಕೆಗಳ ಮುಖಾಮುಖಿ ನಡೆಯುವುದನ್ನೂ ಗಮನಿಸಬಹುದು. "ರಾಮಯ್ಯ ಎರಡನೇ ಮದುವೆಗೆ ಒಪ್ಪದಿರುವುದು 'ಈ ದೊಡ್ಡೋರ ಮಕ್ಕಳಿಗೆ ಏನಾಗಿದೆಯೆಪ್ಪಾ ಮದ್ವೇ ಮಾಡಿಕೊಂಡ್ರೇ' ಎಂಬುದು ಸಿದ್ದನಿಗೆ ಅರ್ಥವಾಗದ ಸಮಸ್ಯೆ. ಜಾತಕ ಕೂಡಿ ಬರದಿದ್ದರೆ ಮದುವೆಯಾಗದ ಉತ್ತಮ ಜಾತಿಯ ರಿವಾಜುಗಳ ಬಗೆಗೂ ಥೂ ನಂಗೆ ಬೇರೆ ಅರ್ಥಾ ಆಗಾದಿಲ್ಲಪ್ಪ ಈ ದೊಡ್ಡೋರ ಪಂಚಾಯ್ತಿ ! ನಮ್ಮ ಜಾತಿಯಲ್ಲಾದ್ರೆ

ಎಲ್ಲಾ ಸಲೀಸು!" ಎಂದು ಪ್ರತಿಕ್ರಿಯಿಸುತ್ತಾರೆ. ಒಂದು ಸಮಾಜದ ರೀತಿ - ರಿವಾಜುಗಳು ಹಾಗೂ ಅಲ್ಲಿ ಬದುಕುತ್ತಿರುವ ವಿವಿಧ ಸ್ತರದ ಜನರ ಬದುಕು ಅವರ ನಂಬಿಕೆಗಳ ವ್ಯಾಖ್ಯಾನ್ಯ ಈ ನಿದರ್ಶನಗಳಿಂದ ತಿಳಿಯುತ್ತದೆ.

ಮೌಢ್ಯಗಳನ್ನು ಬಿತ್ತಿ ಮುಗ್ಧ ಜನರನ್ನು ತಮ್ಮ ತಾಳಕ್ಕೆ ತಕ್ಕಂತೆ ಕುಣಿಸುವ ಮೇಲ್ಜಾತಿಯ ಬ್ರಾಹ್ಮಣರು, ಶೂದ್ರರನ್ನು ಶೋಷಣೆಗೆ ಒಳಗುಮಾಡುವುದನ್ನು ಕುವೆಂಪು ವಿಭಿನ್ನ ಸನ್ನಿವೇಶಗಳಲ್ಲಿ ಚಿತ್ರಿಸಿದ್ದಾರೆ. ಎರಡೂ ಕಾದಂಬರಿಗಳಲ್ಲಿ ಕುವೆಂಪು ಅವರು ಶ್ರೇಣಿಕೃತ ಜಾತಿವ್ಯವಸ್ಥೆಯನ್ನು ಮತ್ತು ಸಾಮಾಜಿಕ ವ್ಯವಸ್ಥೆಯ ಕಟ್ಟಳೆಗಳಲ್ಲಿರುವ ಮೌಢ್ಯಗಳ ವಿಕಾರ ರೂಪಗಳನ್ನು ಅನಾವರಣ ಗೊಳಿಸುತ್ತಾರೆ. ಕಾದಂಬರಿಗಳುದ್ದಕ್ಕೂ ಈ ಮತಧರ್ಮದ ಕಟ್ಟಳೆಗಳು, ಜಾತಿ ವ್ಯವಸ್ಥೆಯ ಕುರೂಪಗಳು ಮನುಷ್ಯರನ್ನು ಅಮಾನುಷಗೊಳಿಸುವ ಕ್ರಿಯೆಗಳಾಗಿ ಒಡಮೂಡಿವೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಈ ಭಾಗಗಳನ್ನು ನೋಡಿದರೆ ಅದು ಸ್ಪಷ್ಟವಾಗುತ್ತದೆ.

"ವಾಸು ದಾರಿಯಲ್ಲಿ ಬೇಲರವನನ್ನು ಮುಟ್ಟಿದ್ದಕ್ಕೆ ಪ್ರಾಯಶ್ಚಿತ ರೂಪವಾಗಿ ಹಟ್ಟಿಗೆ ಹೋಗಿ ಸೆಗಣಿಯಲ್ಲಿ ಮೆಟ್ಟಿ, ಹಿತ್ತಲು ಕಡೆಯ ಬಾಗಿಲಿನಿಂದ ಮಧ್ಯೆ ಪ್ರವೇಶಿಸಿದನು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೭)

ಆಧುನಿಕ ವಿದ್ಯಾಭ್ಯಾಸಕ್ರಮ ಹುಡುಗರನ್ನು ಹಾಳು ಮಾಡಿಬಿಡುತ್ತವೆ ಎಂಬ ವೆಂಕಪ್ಪ ಜೋಯಿಸರ ಉಪದೇಶಕ್ಕೆ ಚಂದ್ರಯ್ಯನವರ ಅಭಿಪ್ರಾಯ "ಆ ಹೂವಯ್ಯ ಅವನ ದೆಸೆಯಿಂದ ರಾಮಯ್ಯ ಇಬ್ಬರೂ ಸೇರಿ ದೈಯ್ಯ ದ್ಯಾವರು ಭೂತ ಗೀತ ಜಕ್ಕಣಿ ಒಂದೂ ಬ್ಯಾಡ ಅಂತ ಬೊಯ್ಯೋಕೆ ಶುರುಮಾಡಿದ್ದಾರೆ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೭೭)

ಬಗನಿಕಟ್ಟೆ ಕಳ್ಳು ಇಳಿಸುವುದು "ತಿಮ್ಮ ಅವನ ಜಾತಿಯ ಗುಟ್ಟಾಗಿತ್ತು. ಬೇಲರು, ಕುಂಬಾರರು, ಮರಾಟಿಗರು, ಸೆಟ್ಟರು, ಒಕ್ಕಲಿಗಳು ಇವರು ಯಾರಿಗೂ ಜಾತಿಪದ್ಧತಿಯಂತೆ ಬಗನಿ ಕಟ್ಟುವ ಹಕ್ಕಿಲ್ಲ.... ಬೇರೆ ಯಾರಾದರೂ ಕೈ ಹಾಕಿದರೆ ಕೂಡಲೇ ಜಾತಿ ಬಹಿಷ್ಕೃತರಾಗುತ್ತಿದ್ದರು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೯೭)

"ಜೋಯಿಸರು ಗಾಡಿ ಹೊಡೆಯುತ್ತಿದ್ದವನು ಹೊಲೆಯನಲ್ಲವೆಂದು ತಿಳಿದ ಮೇಲೆ ಗಾಡಿಹತ್ತಿದರು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೦೫)

"ಹೂವಯ್ಯ ತನ್ನ ಕನಸಿನಲ್ಲಿ ಬ್ರಾಹ್ಮಣರ ಮನೆಯಲ್ಲಿ ನೀರು ತುಂಬಿದ ಹಂಡೆ ಮುಟ್ಟಿದ್ದಕ್ಕಾಗಿ ಬೆಚ್ಚಿಬೀಳುತ್ತಾನೆ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೧೭) ಶುಷ್ಕ ವ್ರತಾಚರಣೆ, ಮಲೆನಾಡಿನ ಬದುಕಲ್ಲಿ ಮಿಳಿತವಾಗಿರುವುದನ್ನು ಕುವೆಂಪು ಈ ರೀತಿ ಚಿತ್ರಿಸಿದ್ದಾರೆ.

"ಸೀತೆ ಅಂಗಳದಲ್ಲಿದ್ದು ತುಳಸಿ ದೇವರಿಗೆ ಇತರರು ಮಾಡುತ್ತಿದ್ದಂತೆ ಆಗಾಗ ಕೈ ಮುಗಿದು ಅಡ್ಡ ಬೀಳುತ್ತಿದ್ದಳು.

ಅದು ಬರಿಯ ಅನುಕರಣವಾಗಿದ್ದಿತೆ ಹೊರತು ಭಾವವಾಗಿರಲಿಲ್ಲ. ಸಮೀಪದ ಬನದಲ್ಲಿ ಕುರಿ ಕೋಳಿಗಳನ್ನು ಬಲಿಕೊಡುತ್ತಿದ್ದ ಭೂತಗಳಿಗೆ ಎಲ್ಲರಂತೆ ಕೈ ಮುಗಿಯುತ್ತಿದ್ದಳು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೩೦)

"ತಂದೆ ತಾಯಿಗಳಿಬ್ಬರೂ ತಮ್ಮ ಕೈಲಾದ ಮಟ್ಟಿಗೆ ಮಗಳ ರೋಗ ನಿವಾರಣೆಗೆ ಮಾಡುವ ಕಾರ್ಯಗಳನ್ನೆಲ್ಲ ಮಾಡಿದ್ದಳು. ವೈದ್ಯರಿಂದ ಔಷಧಿ ಕೊಡಿಸಿದ್ದರು. ಜೋಯಿಸರಿಂದ ಮಂತ್ರ ಹಾಕಿಸಿದ್ದರು. ಗಣಮಗನನ್ನು ಕೇಳಿ ಭೂತಕ್ಕೆ ರಕ್ತ ಬಲಿ ಹಾಕಿಸಿದ್ದರು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೨೩೮)

"ಸುಬ್ಬಮ್ಮ ತನ್ನ ಹೆಗ್ಗಡಿತನದಲ್ಲಿ ಪಾಳುಬಿದ್ದಿದ್ದ ಹಳೆಯ ದೈಯ್ಯ, ಜಕ್ಕಣಿ, ಪಂಜ್ರೊಳ್ಳಿ ಮೊದಲಾದ ಅಂತರ ಬೆಂತರಗಳನ್ನೆಲ್ಲ ವೆಂಕಪ್ಪಯ್ಯನವರ ಕೈಯಿಂದಲೇ ಮರಳಿ ಸ್ಥಾಪಿಸಿ, ಜೀರ್ಣೋದ್ಧಾರ ಮಾಡಿದ್ದಳು. ಚಂದ್ರಯ್ಯಗೌಡರ ಕಡೆಗಾಲದಲ್ಲಿ ಇನ್ನೂ ಬದುಕಿದ್ದ ಭೂತ ರಣಾದಿಗಳಿಗೆ ಹರಕೆಯ ಕಂದಾಯವನ್ನು ಹೆಚ್ಚು ಮಾಡಿ ಒಂದು ಕುರಿ 'ಆಯಾರ' ಕೊಡುತ್ತಿದ್ದಲ್ಲಿ ಎರಡು ಕುರಿಗಳನ್ನು, ಒಂದು ಕೋಳಿ ಕೊಡುತ್ತಿದ್ದಲ್ಲಿ ಎರಡು ಕೋಳಿಗಳನ್ನು ಕೊಡತೊಡಗಿದ್ದರು. ಕಾನೂರಿಗೆ ಬಂದೊದಗಿದ್ದ ಕಷ್ಟಗಳಿಗೆಲ್ಲಾ ಭೂತಾದಿಗಳಿಗೆ ಸರಿಯಾದ 'ಆಯಾರ' ಕೊಡದಿದ್ದುದ್ದೆ ಮುಖ್ಯ ಕಾರಣವೆಂದು ತಿಳಿದಿದ್ದ ಆಕೆಯ ಮೌಢ್ಯಕ್ಕೆ, ವೆಂಕಪ್ಪಯ್ಯ ಜೋಯಿಸರು ತಮ್ಮ ಮಹಾಜ್ಞಾನದ ಆಧಾರವನ್ನು ದಯಪಾಲಿಸಿದ್ದರು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೫೫೨)

ಹೀಗೆ 'ಕಾನೂರು ಹೆಗ್ಗಡಿತಿ'ಯ ಇಡೀ ಸಾಮಾಜಿಕ ಕಟ್ಟಳೆಗಳು, ಮತಧರ್ಮದ ನಿಯಮಗಳಿಗೆ ವಶವಾಗಿದ್ದು, ಅಂತಿಮವಾಗಿ ರಾಮಯ್ಯಂತಹ ವಿದ್ಯಾವಂತನೂ 'ತಾಯಿತ'ದ ಮೊರೆ ಹೋಗುತ್ತಾನೆ. ಈ ಧಾರ್ಮಿಕ ಕಟ್ಟಳೆಗಳು, ಮೌಢ್ಯದ ಪ್ರಭಾವ ಎಷ್ಟೆಂದರೆ, ಹೂವಯ್ಯನಿಂದಾಗಿ ಬಲಿಯಾಗುವುದನ್ನು

ತಪ್ಪಿಸಿಕೊಂಡ 'ಬಲೀಂದ್ರ' ಕೊನೆಗೆ ಮೌಢ್ಯಕ್ಕೆ ಬಲಿಯಾಗುತ್ತದೆ. ಈ ಬಗೆಯ ಮೌಢ್ಯವು ಒಂದು ಬಗೆಯ ಶೋಷಣೆ. ಹೂವಯ್ಯನಂತಹ ಪ್ರಜ್ಞಾವಂತರಿಂದ ಇದನ್ನು ತೊಡೆದು ಹಾಕಲು ಪ್ರಯತ್ನಿಸಿರುವುದು ಕುವೆಂಪು ಅವರ 'ಶೋಷಣೆ ವಿರೋಧಿ ಪ್ರಜ್ಞೆ'ಯ ಫಲಿತವಾಗಿದೆ.

ಭಾರತೀಯರ ಆಚರಣೆಗಳಲ್ಲಿ ಅಂದಿನ ಸನ್ನಿವೇಶಕ್ಕೆ ಹಾಗೂ ವಿದ್ಯಾವಂತರ ಮನೋಧರ್ಮಕ್ಕೆ 'ಮೌಢ್ಯ' ಎನ್ನಿಸುವ ಈ ಬಗೆಯ ಆಚರಣೆಗಳನ್ನು, ನಂಬಿಕೆಗಳನ್ನು, ತ್ಯಜಿಸುವ ಅಗತ್ಯತೆಯನ್ನು ಕುವೆಂಪು ಗ್ರಹಿಸಿದ್ದರು. ಹಾಗಾಗಿ, ಅವರು ಈ ವರ್ಣಭೇದ ಹಾಗೂ ಮೌಢ್ಯಗಳಿಂದ ನೂತನ 'ವೈಚಾರಿಕತೆ'ಯನ್ನು ಪ್ರತಿಪಾದಿಸಿದರು. ವಿಚಾರ ಕ್ರಾಂತಿಗೆ ಆಹ್ವಾನ ನೀಡಿದರು. ಕುವೆಂಪು ಅವರ ಈ ಬಗೆಯ ಚಿಂತನೆಗಳು ವಿವೇಕಾನಂದರ ಚಿಂತನೆಗಳ ಸ್ಫೂರ್ತಿಯಾಗಿದ್ದವು. ಕುವೆಂಪು ಅವರ ಈ ಬಗೆಯ ಧೋರಣೆಯನ್ನು ಹಲವಾರು ವಿಮರ್ಶಕರು ಚರ್ಚಿಸುವಂತೆ 'ಬ್ರಾಹ್ಮಣ ಹಾಗೂ ಪುರೋಹಿತಶಾಹಿಯ ವಿರೋಧಿ', ಮತ ಮೌಢ್ಯಗಳ ಬಗೆಗಿನ ಅವರ ಖಂಡನೆಯನ್ನು 'ಬಂಡಾಯಗಾರ ಮನಸ್ಥಿತಿ' ನೊಂದವರ ಹಾಗೂ 'ದಲಿತರ ಬಗೆಗಿನ ಅವರ ಧೋರಣೆ ಕಟು'ವಾಗಿದೆ. ಒಕ್ಕಲಿಗರ ಪರವಾದ 'ಮೃದುಧೋರಣೆ' ವ್ಯಕ್ತವಾಗಿದೆ ಎಂಬೆಲ್ಲಾ ಅಂಶಗಳನ್ನು ಗಮನಿಸಿದರೆ, ಕುವೆಂಪು ಅವರನ್ನು ಇಂದಿನ ವಿಮರ್ಶಕರು ಸರಿಯಾಗಿ ಗ್ರಹಿಸಿಲ್ಲ ಎಂಬುದೇ ಸತ್ಯವಾಗುತ್ತದೆ.

ಕುವೆಂಪು ಅವರಕಾಲದ ಚಿಂತನೆಗಳಿಗಿಂತ ನಮ್ಮ ಚಿಂತನೆಗಳು ಇಂದು ಬೇರೆಯಾಗಿವೆ. ಕುವೆಂಪು ಅವರಿಗೂ ನಮಗೂ ಒಂದು ಅಂತರ ಇದೆ ಅನ್ನಿಸುತ್ತದೆ. ಈ ಅಂತರವನ್ನು ಅರ್ಥ ಮಾಡಿಕೊಂಡಾಗ ಮಾತ್ರ ನಮಗೆ ಅವರ ಆಶಯಗಳು ಸರಿಯಾಗಿ ಅರ್ಥವಾಗುತ್ತದೆ. ಆಗ ಮಾತ್ರ ಅವರ 'ಧರ್ಮನಿರಪೇಕ್ಷ ಪ್ರಜ್ಞೆ', 'ಶೋಷಣೆ ವಿರೋಧಿಪ್ರಜ್ಞೆ', 'ವೈಚಾರಿಕ ಪ್ರಜ್ಞೆ'ಗಳನ್ನು ಗುರುತಿಸಬಹುದು. ಏಕೆಂದರೆ "ಕುವೆಂಪು ಅವರ ಸ್ಫೂರ್ತಿಗಳು, ಚಾರಿತ್ರಿಕ ಪ್ರೇರಣೆಗಳು ರೂಪುಗೊಂಡಿದ್ದೇ ಬೇರೆ ರೀತಿಯಲ್ಲಿ, ಅವರು ಒಂದು ಸಾಂಸ್ಕೃತಿಕ ರಾಷ್ಟ್ರ ಕಲ್ಪನೆಯ ಜೊತೆ ಜೊತೆಗೇ ಶೂದ್ರರ ಸಾಂಸ್ಕೃತಿಕ ಬಿಡುಗಡೆ, ಬ್ರಾಹ್ಮಣ ಪುರೋಹಿತ ಶಾಹಿಯ ವಿಮರ್ಶೆ, ವರ್ಣಧರ್ಮದ ಖಂಡನೆ ಇವನ್ನೆಲ್ಲಾ ಸಾಧಿಸುತ್ತಾರೆ" (ರಾಜಾರಾಮಹೆಗ್ಗಡೆ, ಗತ ಕಥನ, ೨೦೦೫, ಪುಟ ೧೦೭) ತೇಜಸ್ವಿ ಇದಕ್ಕೆ ಹೊರತಲ್ಲ. ಕುವೆಂಪು ಅವರ ಆಶಯ

ಧೋರಣೆಗಳು ಎಲ್ಲಕ್ಕಿಂತ ಹೆಚ್ಚಾಗಿ, 'ಶ್ರೀಸಾಮಾನ್ಯತಾ ತತ್ತ್ವ' ತೇಜಸ್ವಿಯಲ್ಲಿ ಮುಂದುವರೆದಿರುವುದನ್ನು ಅವರ ಕೃತಿಗಳಲ್ಲಿ ಗುರುತಿಸಬಹುದು.

ಜ್ಞಾನ ಹೇಗೆ ಅಜ್ಞಾನವನ್ನು ಹೊತ್ತುಕೊಂಡು ಹೋಗುತ್ತದೆ ಎಂಬುದನ್ನು 'ಕುಬಿ ಮತ್ತು ಇಯಾಲ' ಕತೆ ಬಿಂಬಿಸುತ್ತದೆ. ಸಮಾಜದ ಪ್ರಗತಿ ಹಾಗೂ ಅನವತಿಗಳನ್ನು ಕಥಾಹಂದರದಲ್ಲಿ ಮುಖಾಮುಖಿಯಾಗಿಸಿ ನಮ್ಮನ್ನು ಚಿಂತನೆಗೀಡುಮಾಡುತ್ತದೆ. ವಿಜ್ಞಾನವು ಮೂಢನಂಬಿಕೆ ಎದುರು ತತ್ತರಿಸಿ ಹೋಗುವ ವಿಪರ್ಯಾಸವನ್ನು ಈ ಕಥೆ ಧ್ವನಿಸುತ್ತದೆ. ಮೂಢನಂಬಿಕೆಗಳ ಆಗರವಾಗಿರುವ ಭೈರಾಪುರಕ್ಕೆ ವರ್ಗವಾಗಿ ಬರುವ ಡಾ. ಕುಬೇರನಾಥ ಹಳ್ಳಿಗರಿಗೆ ವೈದ್ಯಕೀಯ ನೆರವು ನೀಡುವುದರ ಜೊತೆಗೆ, ಅವರ ಅಜ್ಞಾನದ ವಿರುದ್ಧವೂ ಹೋರಾಡಬೇಕಾಗುತ್ತದೆ.

ಡಾ. ಕುಬಿಯ ಅಜ್ಞಾನ ನಿವಾರಣೆಯ ಪ್ರಯತ್ನ ಹೆಚ್ಚಿದಂತೆಲ್ಲಾ ಭೈರಾಪುರದ ಜನರ ಮೂಢನಂಬಿಕೆ, ಅಜ್ಞಾನಗಳು ಹೆಚ್ಚಾಗುತ್ತಾ ಹೋಗುತ್ತವೆ. ಆಸ್ಪತ್ರೆಯಲ್ಲಿ ಕಾಂಪೌಂಡರನಾಗಿ ಕೆಲಸ ಮಾಡುವ ರಾಮರಾಯನೂ ಜನಗಳಿಗೆ ಯಾವ್ಯಾವುದೋ ಔಷಧಿ ಕೊಟ್ಟು ಜನರ ಪ್ರಾಣಾಪಾಯಕ್ಕೆ ಕಾರಣನಾಗುತ್ತಾನೆ. ಆಸ್ಪತ್ರೆಯ ಒಳಗೂ ಹೊರಗೂ ಡಾ.ಕುಬಿ ಹೋರಾಡಬೇಕಾಗುತ್ತದೆ. ಅಜ್ಞಾನ, ಮೌಢ್ಯ, ಬಡತನ, ಕೊಳಕು, ಸ್ವಾರ್ಥರಾಜಕೀಯಗಳ ಕೊಂಪೆಯಾದ ಭೈರಾಪುರ, ಇಯಾಲಳ ಕೊಲೆಯ ಸುತ್ತ ತನ್ನನ್ನು ಸುತ್ತಿಕೊಳ್ಳತೊಡಗುತ್ತದೆ. ಕೊಲೆಯಾದ ಇಯಾಲಳನ್ನು ಮುಂದು ಮಾಡಿಕೊಂಡು ಸ್ವಾರ್ಥ ಮತ್ತು ರಾಜಕೀಯ, ಜಾತಿ ದ್ವೇಷಗಳನ್ನು ಬಿಂಬಿಸುವ ಊರಿನ ಮುಖಂಡರು, ವ್ಯವಸ್ಥೆಯ ಹಾಗೂ ಭ್ರಷ್ಟತೆಯ 'ವರ್ತಮಾನ ದೃಷ್ಟಿ'ಗೆ ಸಾಕ್ಷಿಯಾಗುತ್ತಾರೆ.

"ನೋಡಿ, ಸೂಳೇ ಮಕ್ಕಳು ನಮ್ಮ ಎದುರ ಪಾರ್ಟಿಯವರು ನನಗೂ ಬಾಯಮ್ಮನ ಮಗಳಿಗೂ ಏನೋ ಸಂಬಂಧ ಇತ್ತೆಂದೂ, ಅದು ಹೊರ ಬರಬಾರದು ಅಂತ ನಾನು ಖೂನಿ ಮಾಡಿಸಿದೆ ಅಂತಲೂ ಓಬ್ರಿನ್ ಹತ್ತಿರ ಕಂಪ್ಲೇಟು ಕೊಡಿಸಲು ಓಡಾಡುತ್ತಿದ್ದಾರೆ. ಹಸುಗೂಸಿನ ಹತ್ತಿರ ಚಕ್ಕಂದ ಆಡೋದಕ್ಕೆ ನಾನು ಮನುಷ್ಯ ಅಲ್ಲವೇ? ಹುಡುಗಿ ದೊಡ್ಡವಳಾಗಿರಲಿ ಬಿಡಲಿ, ನೀವು ಅವಳನ್ನೂ ದೊಡ್ಡೋಳೆ ಆಗಿರಲಿಲ್ಲ ಅಂತ ರಿಪೋರ್ಟ್ ಮಾಡಿಬಿಡಿ ಮಿಕ್ಕಿದ್ದನ್ನು ನಾನು ನೋಡಿಕೋತೇನೆ.

ಈವತ್ತು ನಮ್ಮ ಎಂ.ಎಲ್.ಎ ಕರಕೊಂಡು ಐ.ಜಿ.ಪಿ ಹತ್ತಿರ ಹೊಗಲಿಕ್ಕೆ ನೋಡ್ತೇನೆ".
(ಪೂರ್ಣಚಂದ್ರತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ೨೦೦೯, ಪುಟ ೫೩)

ರಾಮಣ್ಣ ಗೌಡರು ಡಾ.ಕುಬಿಯ ಹತ್ತಿರ ಮಾತನಾಡುವ ಈ ಮಾತುಗಳು ಜನರ ಸ್ವಾರ್ಥ, ಕೀಳು ರಾಜಕೀಯ ಮತ್ತು ಜಾತಿಯ ವಿಷವರ್ತುಲದಲ್ಲಿ ಸಿಕ್ಕಿ ನಲುಗುವ ವಿಚಿತ್ರ ಸ್ಥಿತಿಯನ್ನು ಸೂಚಿಸುತ್ತದೆ. ಅದೇ ತಾನೆ ಋತುಮತಿಯಾದ ಇಯಾಳನ್ನು ಸಂಭೋಗಿಸುವುದರಿಂದ ತನಗಿರುವ ಲೈಂಗಿಕ ರೋಗ ವಾಸಿಯಾಗುತ್ತದೆ. ಎಂಬ ಅವೈಜ್ಞಾನಿಕ ಮೂಢನಂಬಿಕೆಯಿಂದ ಲೋರಿ ಇಯಾಳನ್ನು ಅತ್ಯಾಚಾರ ಮಾಡಿ ಸಾಯಿಸುವುದು, ನಾಗರಿಕ ಜಗತ್ತು ಬೆಚ್ಚಿ ಬೀಳುವ ಸಂಗತಿಯಾಗಿದೆ. ಹೀಗೆ ಮೌಢ್ಯದ ಮೀರಬೇಕಾದ ಅಗತ್ಯತೆಯನ್ನು ತೇಜಸ್ವಿ ಗುರುತಿಸುತ್ತಾರೆ. ಸಾಮಾಜಿಕ, ರಾಜಕೀಯ ಜಿಜ್ಞಾಸೆ ತೇಜಸ್ವಿಯವರಲ್ಲಿ ಭಿನ್ನರೂಪದಲ್ಲಿ ವ್ಯಕ್ತವಾಗುವುದು ಅವರ ವೈಶಿಷ್ಟ. ಡಾ.ಕುಬಿಯ ಹಾಗೆ, ಚಿದಂಬರ ರಹಸ್ಯದ ಪಾಟೀಲರು ಕೂಡ ಊರವರ ದೃಷ್ಟಿಯಲ್ಲಿ ಸಮಸ್ಯಾತ್ಮಕ ವ್ಯಕ್ತಿಯಾಗುವುದು ಸಾಮಾಜಿಕ ವ್ಯವಸ್ಥೆ ಅಪಹಾಸ್ಯಕ್ಕೆ ಸಾಕ್ಷಿಯಾಗಿದೆ.

"ಡಾಕ್ಟರ್ ಪಾಟೀಲರು ಚೇಳಿಗೆ ಮಂತ್ರ ಚಿಕಿತ್ಸೆ ಮಾಡ್ತಾರಂತೆ. ಒಂದು ಕಡ್ಡಿ ತಗೊಂಡು ಚೇಳು ಕಚ್ಚಿ ನೋವಾಗುತ್ತಿರೋವರಿಗೆ ಎಲ್ಲಿ ನೋವಾಗುತ್ತೋ ಅಲ್ಲಿ ಹ ಆಕಾರದಲ್ಲಿ ಕಡ್ಡಿಯಿಂದ ಬರೀತಾರಂತೆ. ನೋವು ಅಲ್ಲಿಂದ ಹಾಗೇ ಕಾಲಿನವರೆಗೆ ಇಳಿಯುತ್ತಾ ಬರುತ್ತೆ. ಇವರೂ ಕಡ್ಡಿಯಲ್ಲಿ ಅದು ಇಳಿದಂತೆಲ್ಲಾ ಬರೀತಾ ಬರ್ತಾರೆ. ಕೊನೆಗೆ ಅದು ಬೆರಳತುದಿಯಿಂದ ಹೊರಟುಹೊಗ್ತದಂತೆ. ಅದರ ಬಗ್ಗೆ ಅವರಿಗೆ ನಂಬಿಕೇನೂ ಇಲ್ಲ, ಶ್ರದ್ಧೇನೂ ಇಲ್ಲ. ಅವರೂರಿನಲ್ಲಿ ಯಾವನೋ ಮಾಂತ್ರಿಕ ಹೀಗೆ ಮಾಡ್ತಿದ್ದನಂತೆ. ಅದೊಂದು ಮೂಢನಂಬಿಕೆ ಅಂತ ಸಾಧಿಸೋದಕ್ಕೆ ಇವರೂ ಹಾಗೆ ಮಾಡಿದರಂತೆ ಅದು ಪರಿಣಾಮಕಾರಿ ಆಗೇ ಬಿಡ್ತು !

ಈ ಚಿಕಿತ್ಸೆಗೆ ಆ ಮಾಂತ್ರಿಕ ಹೇಳೋ ಹಾಗೆ, ದೈಯ್ಯ ದೇವರ ಅಗತ್ಯ ಏನೂ ಇಲ್ಲ ಅಂತನೋ ಸಾಧಿಸಿದರು. ಆದರೆ, ಚೇಳು ಕಚ್ಚಿದವರು ಚಿಕಿತ್ಸೆಗೆ ಇವರ ಹತ್ರ ಬರೋದಕ್ಕೆ ಶುರು ಮಾಡಿದರು. ಇಷ್ಟೇ ಅಲ್ಲ, ಕೆಸರೂರಿನಲ್ಲಿ ಇವರನ್ನೂ ಮಂತ್ರವಾದಿ ಅಂತ ತಿಳುಕೊಂಡು ಹಾವು ಕಚ್ಚಿಸಿಕೊಂಡವರು, ದೆವ್ವ ಮೈಮೇಲೆ ಬರೋವರು, ಮತಿಭ್ರಾಂತರು ಎಲ್ಲರನ್ನೂ ಕರಕೊಂಡು ಬರೋದಕ್ಕೆ ಶುರುಮಾಡಿದರಂತೆ ನಾನು ಯಾವ ಶಕ್ತಿ ಆರಾಧಕನೂ ಅಲ್ಲ. ಮಂತ್ರವಾದಿಯೂ

ಅಲ್ಲ ಅಂತ ಅವರಿಗೆ ಹೇಳಿ ಕಳಿಸಬೇಕಾದರೆ ಪಾಟೀಲರಿಗೆ ಸುಸ್ತಾಗಿ ಹೋಗೋದಂತೆ. ಎಲ್ಲಕ್ಕಿಂತ ಅವರಿಗೆ ದಿಗಿಲು ಅಂದರೆ, ಬಂದವರಿಗೆ ಏನಾದರೂ ಚಿಕಿತ್ಸೆ ಅಂತ ಮಾಡಿ ಕೊನೆಗೆ ಅದೂ ಪರಿಣಾಮಕಾರಿ ಆಗೇ ಹೋದರೆ ಏನಪ್ಪ ಗತಿ! ಅಂತ. ತಾನೆಲ್ಲ ಈ ರೋಗಿಗಳ ದೆಸೆಯಿಂದ ಮಾಂತ್ರಿಕನಾಗಬೇಕಾಗುತ್ತದೋ ಅಂತ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೫, ಪುಟ ೪೭)

ದೆವ್ವ-ಭೂತ, ದೇವರು-ದಿಂಡರು, ಪೂಜೆ ಪುರಸ್ಕಾರ ಯಾವುದರಲ್ಲೂ ನಂಬಿಕೆ ಇಲ್ಲದ ವಿಜ್ಞಾನಿ ಡಾ. ಪಾಟೀಲರು ಈ ಮೌಢ್ಯ ತುಂಬಿದ ಜನರ ದೆಸೆಯಿಂದ, ತಮ್ಮ ವೈಚಾರಿಕತೆಯನ್ನು ಅರ್ಥೈಸಲು ವಿಫಲರಾಗುವುದು. ಕೊನೆಗೆ ವಿಚಾರವಾದಿಗಳಾದ ಅವರು, "ನೋಡಿ ನಾನು ಮಾಯಾ ಮಂತ್ರ ಮಾಡೋ ವಿಜ್ಞಾನಿ ಅಲ್ಲ. ಚೇಳು ಮಂತ್ರ ಒಂದು ಬಗೆಯ ಚಿಕಿತ್ಸೆ ಅಷ್ಟೇ. ಅದರ ಸತ್ಯಾಸತ್ಯತೆಗಳನ್ನು ವೈಜ್ಞಾನಿಕವಾಗಿ ತಿಳುಕೊಳ್ಳಬೇಕಾದ್ದು" (ಪೂರ್ಣಚಂದ್ರತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೯, ಪುಟ ೪೭) ಎಂದು ತಮ್ಮತನವನ್ನು ಸ್ಪಷ್ಟೀಕರಿಸಿಕೊಳ್ಳಬೇಕಾದ ಅನಿವಾರ್ಯತೆ ಸೃಷ್ಟಿಯಾಗುವುದು. ಕಡೆಗೆ 'ಕಂದಾಚಾರಿ' ಎಂಬ ಹಣೆಪಟ್ಟಿಗೆ ಗುರಿಯಾಗುವುದು ವ್ಯವಸ್ಥೆಯಲ್ಲಿ ಬೇರೂರಿರುವ ನಂಬಿಕೆ ಆಚಾರಗಳನ್ನು ಪ್ರಶ್ನಿಸುವವರಿಗೆ ಸರಿಪಡಿಸಲು ಹೋಗುವವರಿಗೆ ಸಿಗುವ 'ಸಾಮಾನ್ಯ ಬಹುಮಾನ' ಎಂಬ ವ್ಯಂಗ್ಯ, ವರ್ತಮಾನದ ಸೂಕ್ಷ್ಮ ಸಂವೇದನೆಗೆ ಸಾಕ್ಷಿಯಾಗುತ್ತದೆ.

"ತಬರನಿಗೆ ಮಾನವರನ್ನು ಪೋಲೀಸು, ಆಫೀಸು, ಶಾನುಭೋಗ, ಪಟೇಲ, ಜವಾನ ಮುಂತಾಗಿ ಪರಿವರ್ತಿಸುತ್ತ ಎಂಥೆಂಥದೊ ಗೀಚಿದ ಫೈಲುಗಳನ್ನು ಅಂತರಾತ್ಮನಂತೆ ಸಂರಕ್ಷಿಸುತ್ತಾ ಇರುವ ಒಂದು ನಿರ್ದಯ, ಅರ್ಥಹೀನ ವ್ಯೂಹದ ಅರಿವು ನಿಧಾನವಾಗಿ ಆಗತೊಡಗಿತು. ಮಾನವನನ್ನೂ ಮಾನವೀಯತೆನ್ನು ಕರಕರ ಜಗಿದು, ಅಗಿದು ಉಗಿಯುತ್ತಾ ಇರುವ ಒಂದು ಸೈತಾನನ ವ್ಯೂಹ ಕಂಡಿತು. ಮನುಷ್ಯನ ಕೊಂದು, ಒಣ ಮೀನಿನಂತೆ ಒಣಗಿಸಿ, ಫೈಲಿನೊಳಗೆ ಮಡಿಚಿಡುವ ದೆವ್ವವಾದ ತಹಶೀಲ್ದಾರ, ಫೈಲು ತೆಗೆದುಕೊಂಡು ಎಂಥೆಂಥದೋ ಸಂಜ್ಞೆಗಳನ್ನು ಮಾಡುತ್ತಿದ್ದ ಆತ. ನುಗ್ಗು ನುರಿಯಾದ ಜೀವಾತ್ಮಗಳು ಡೆಸ್ಕಿನಿಂದ ಡೆಸ್ಕಿಗೆ ಬಿಗಿದು ಕಟ್ಟಿದ ಫೈಲಿನೊಳಗೆ ಸಾಗುತ್ತಿದ್ದವು.

ಈ ರೌರವ ನರಕದ ಕಾರ್ಖಾನೆಯನ್ನು ನೋಡಿ ತಬರನ ಕಣ್ಣಿನಿಂದ ತಟತಟ ನೀರು ಉರುಳತೊಡಗಿತು. ತನಗಾಗಿ, ತನ್ನ ಹೆಂಡತಿಗಾಗಿ, ತನ್ನಂಥದೇ

ಜೀವವಾದ ತಹಶೀಲ್ದಾರನಿಗಾಗಿ ಜವಾನ ಜವರನಿಗಾಗಿ ದುಃಖ ಉಮ್ಮಳಿಸಿ ಬಂದಿತು". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ೨೦೦೯, ಪುಟ ೮೩)

'ತಬರನ ಕಥೆ'ಯ ಈ ಸಾಲುಗಳು, ನೌಕರ ಶಾಹಿಯ ದಬ್ಬಾಳಿಕೆಯನ್ನು ಚಿತ್ರಿಸುತ್ತದೆ. ಸಾಮಾನ್ಯ ನೌಕರನೊಬ್ಬ ತನ್ನ ಪಿಂಚಣಿಗಾಗಿ ನರಕ ಯಾತೆ ಅನುಭವಿಸುವ ರೀತಿ, ಭ್ರಷ್ಟವ್ಯವಸ್ಥೆಗೆ ಕೈಗನ್ನಡಿ ಹಿಡಿದಂತಿದೆ. ತಬರನ ವೈಯಕ್ತಿಕ ಸಮಸ್ಯೆಯ ಜೊತೆ ಜೊತೆಗೆ ತೆರೆದುಕೊಳ್ಳುವ ವ್ಯವಸ್ಥೆಯ ಕರಾಳ ರೂಪ, ಶೋಷಣೆಯ ನಾನಾಮುಖಗಳನ್ನು ಪರಿಚಯಿಸುತ್ತದೆ. ತನ್ನ ಈ ಅವಸ್ಥೆಗೆ ಕಾರಣ ಯಾರು ಎಂಬ ಸ್ಪಷ್ಟತೆಯೂ ತಬರನಿಗೆ ಇಲ್ಲ. ಅವನಿಗೆ ಬ್ರಿಟೀಷ್ ಆಳ್ವಿಕೆಯಲ್ಲೂ ಸಮಸ್ಯೆಗಳು ಕಾಣುತ್ತಿವೆ. ಸ್ವಾತಂತ್ರೋತ್ತರ ಭಾರತದ ಆಳ್ವಿಕೆಯಲ್ಲಿಯೂ ಸಮಸ್ಯೆಗಳು ಕಾಣುತ್ತಿವೆ. ತನ್ನ ಸಮಸ್ಯೆ ಬಗೆಹರಿಯದೆ, ಗ್ಯಾಂಗ್ರೀನ್‌ಗೆ ಒಳಗಾದ ತನ್ನ ಹೆಂಡತಿಯ ಕಾಲನ್ನು ಕತ್ತರಿಸಬೇಕಾದ ಪ್ರಸಂಗ ಎದುರಾದಾಗ ಹಣವಿಲ್ಲದ ದಾರುಣ ಪರಿಸ್ಥಿತಿಯಲ್ಲಿ ಹುಚ್ಚು ಹಿಡಿಸಿಕೊಳ್ಳುವ ತಬರಶೆಟ್ಟಿಯು, ಅಧಿಕಾರಿಗಳಶಾಹಿ ಕ್ರೌರ್ಯದ ಜೀವಂತ ಉದಾಹರಣೆ ಯಾಗುತ್ತಾನೆ.

ಸಾಮಾಜಿಕ ವ್ಯವಸ್ಥೆಯ ಅಧಃಪತನ, ಶೋಷಣೆಯ ನಾನಾಮುಖಗಳು ತೇಜಸ್ವಿ ಅವರ 'ಕೃಷ್ಣೇಗೌಡನ ಆನೆ', 'ಜುಗಾರಿಕ್ರಾಸ್', 'ಮಾಯಾಲೋಕ', 'ಚಿದಂಬರ ರಹಸ್ಯ'ಗಳಲ್ಲಿ ಅಂತರ್ಗತವಾಗಿವೆ. ವಸಾಹತುಶಾಹಿ ಸಂದರ್ಭದಲ್ಲಿ ದೇಶದ ರಾಜಕಾರಣ ಹುಟ್ಟುಹಾಕಿದ ಗೊಂದಲಗಳನ್ನು, ಅಂತಹ ಗೊಂದಲಗಳಿಂದ ನಿರ್ಮಾಣವಾದ ಧಾರ್ಮಿಕ, ರಾಜಕೀಯ, ಅಂತರರಾಷ್ಟೀಯ ಸಮಸ್ಯೆಗಳನ್ನು ತೇಜಸ್ವಿ ಅವರು ತಮ್ಮ ಕೃತಿಗಳಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಅಂದರೆ ಸ್ವಾರ್ಥ ರಾಜಕಾರಣ, ಓಟಿನ ಗಳಿಕೆಗಾಗಿ ಹುಟ್ಟುಹಾಕಿದ ಧಾರ್ಮಿಕ ಹಾಗೂ ಮತೀಯ ಕಲಹಗಳಿಗೆ ಅಭಿವೃದ್ಧಿಯ ಹೆಸರಿನಲ್ಲಿ, ಪರಿಸರ ಹಾಗೂ ಸಾಮಾಜಿಕ ಸ್ವಾಸ್ಥ್ಯವನ್ನು ಘಾಸಿಗೊಳಿಸಿದ ಅವೈಜ್ಞಾನಿಕ ನಿಲುವುಗಳಿಗೆ ಸಾರ್ವಜನಿಕ ಹಾಗೂ ಸರ್ಕಾರಿ ಇಲಾಖೆಗಳ ಅಮಾನವೀಯ ಧೋರಣೆಗಳ ಬಗೆಗೆ ತೇಜಸ್ವಿ ನಿಲುವುಗಳು ನಿಖರವೂ ಸ್ಪಷ್ಟವೂ ಆಗಿವೆ.

'ಕಿರಗೂರಿನ ಗಯ್ಯಾಳಿಗಳು' ಕೃತಿಯಲ್ಲಿ, ಇಂತಹ ಶೋಷಣೆ ಪ್ರಸಂಗವೊಂದು ಕಂಡುಬರುತ್ತದೆ. ದಿಮ್ಮಿಗೆ ಬೆನ್ನು ಮಾಡಿ ದೂಕಿದ್ದರಿಂದ, ಬೆನ್ನಿನ ನರ ಉಳುಕಿಸಿಕೊಂಡು ಸೊಂಟದ ಸ್ಥಿತಿಯನ್ನು ಹದಗೆಡಿಸಿಕೊಂಡಿದ್ದ ಭೈರಪ್ಪನಿಗೂ

ಸುಬ್ಬೇಗೌಡ ಇಬ್ಬರಿಗೂ, ದಲಿತರ ಕರಿಯ ಉಳುಕು ಬಿಡಿಸುತ್ತಾನೆಂದು ಗೊತ್ತಿದ್ದರೂ ಹೊಲೇರ ಸವಾಸವೇ ಬೇಡವೆಂದು ತೀರ್ಮಾನಿಸುತ್ತಾರೆ. ಇದರಿಂದ ಅಣ್ಣಪ್ಪ ಡಾಕ್ಟರ ಚಕ್ರವ್ಯೂಹಕ್ಕೆ ನುಗ್ಗುತ್ತಾರೆ. "ಅಣ್ಣಪ್ಪ ಡಾಕ್ಟರು, ಇಂಜೆಕ್ಷನ್ ಎಂದು ತಣ್ಣೀರು ಚುಚ್ಚುವುದು. ಸರಿಯಾಗಿದ್ದವರಿಗೆ ಅಲ್ಲಸಲ್ಲದ ಔಷಧಿ ಮಾಡಿ, ಒಂದಕ್ಕೆ ಎರಡಾದ ಮೇಲೆ ಮಣಿಪಾಲಿಗೆ ಹೋಗಿ, ಬೆಂಗಳೂರಿಗೆ ಹೋಗಿ ಎಂದು ರೋಗಿಗಳನ್ನು ರವಾನೆ ಮಾಡುವುದು ಎಲ್ಲರಿಗೂ ಗೊತ್ತಿದ್ದಿದ್ದೇ.

ಇವನ ಅವಿವೇಕದ ಪರಮಾವಧಿ ಎಂದರೆ, ಹೊಸಳ್ಳಿಯಲ್ಲಿ ಸತ್ತ ಹೆಣಕ್ಕೆ ಇಂಜಕ್ಷನ್ ಕೊಟ್ಟಿದ್ದು! ಅದೊಂದು ದೊಡ್ಡ ಹಗರಣ ಆಗಿ ಹೊಸಳ್ಳಿಯವರು ದೊಣ್ಣೆ ತಗೊಂಡು ಬಂದಿದ್ದದರಿಂದಲೇ ಅಣ್ಣಪ್ಪನ ಔಷದೋಪಚಾರದ ವೈಖರಿ ಸಾರ್ವಜನಿಕರಿಗೆ ಗೊತ್ತಾಗಿದ್ದು. ರೋಗಿ ಸತ್ತಿದ್ದು ಗೊತ್ತಾದರೂ ಅಣ್ಣಪ್ಪ ಸ್ಟೇತಾಸ್ಕೋಪ್ ಇಟ್ಟು ನಾಡಿ ಹಿಡಿದು 'ಪರ್ವಾಗಿಲ್ಲ, ಬೆಳಗಿನ ಹೊತ್ತಿಗೆ ಸರಿಯಾಗುತ್ತದೆ' ಎಂದು ಹೇಳಿ ಇಂಜಕ್ಷನ್ ಚುಚ್ಚಿ ದುಡ್ಡು ತಗೊಂಡು ಜಾಗ ಖಾಲಿ ಮಾಡಿದ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಕಿರಗೂರಿನ ಗಯ್ಯಾಳಿಗಳು, ೨೦೦೯, ಪುಟ – ೩೫)

ಮೌಢ್ಯ ತುಂಬಿದ ಜನರನ್ನು ತಮ್ಮ ವಿಚಾರವಂತಿಕೆಯಿಂದ ಪ್ರಾಜ್ಞರನ್ನಾಗಿ ಮಾಡಲು ಹೊರಡುವ ಡಾ. ಕುಟಿ ಮತ್ತು ಡಾ.ಪಟೇಲರು ಒಂದು ಕಡೆಯಾದರೆ, ಪ್ರಜ್ಞಾವಂತರ ಸೋಗಿನಲ್ಲಿ ಮುಗ್ಧ ಜನರನ್ನು ಈ ಬಗೆ ಶೋಷಿಸುವ ಅಣ್ಣಪ್ಪ ಡಾಕ್ಟರ ನೀಚತನ ಮುಖಾಮುಖಿಯಾಗಿ, ವ್ಯವಸ್ಥೆಯ ಕ್ರೌರ್ಯಕ್ಕೆ ಅಪಹಾಸ್ಯ ಮಾಡುತ್ತದೆ. ಅಲ್ಲದೆ, ಇಷ್ಟೊಂದು ನೀಚನೆಂದು ಗೊತ್ತಿದ್ದರೂ ಅನೇಕ ಹಳ್ಳಿ ಮುಠ್ಠಾಳರು 'ಮನುಷ್ಯ ಕೆಟ್ಟೋನು ನಿಜ. ಆದರೂ ಆ ಮುಂಡೇಗಂಡನ ಕೈ ಗುಣ ಇದೆ. ನೋಡಿ ಅದು ಭಾಳ ಚೆನ್ನಾಗಿದೆ'. ಎಂದು ಅವನ ಬಳಿಗೇ ಚಿಕಿತ್ಸೆಗೆ ಹೋಗುವುದು ವಿಪರ್ಯಾಸವೇ ಸರಿ. ಈ ಬಗೆಯ ಮೌಢ್ಯಕ್ಕೆ ಮದ್ದಿಲ್ಲ. ಎಷ್ಟೇ ಸುಧಾರವಣಾವಾದಿ ಪ್ರಜ್ಞೆ ಜಾಗೃತವಾಗಿದ್ದರೂ ಜನರಲ್ಲಿ ತುಂಬಿರುವ ಮೌಢ್ಯದ ಬೇರುಗಳು ಆಳಕ್ಕೆ ಇಳಿದಿರುತ್ತವೆ. ಇದನ್ನು ಬುಡಸಮೇತ ಕೀಳಲು ಸಾಧ್ಯವಾಗದ ಅಸಹಾಯಕತೆ. ವಿಷಾದ ತೇಜಸ್ವಿಯವರ ಕೃತಿಗಳಲ್ಲಿ ವ್ಯಕ್ತವಾಗಿವೆ.

ಸಾಮಾಜಿಕ ಪ್ರಜ್ಞೆ, ಸಾಮಾಜಿಕ ಸಂವೇದನೆಗಳ ಬಗೆಗೆ ಚರ್ಚಿಸುವ ಸಂದರ್ಭದಲ್ಲಿ ಈ ಇಬ್ಬರೂ ಲೇಖಕರ 'ರೈತ ಪರವಾದ ಕಾಳಜಿ'ಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು ಮುಖ್ಯವಾಗುತ್ತದೆ. ಮಲೆನಾಡಿನ ಸಾಮಾಜಿಕ

ಪರಿಸರದಲ್ಲಿ ರೈತನ ಬದುಕಿನ ಕಷ್ಟ ಕಾರ್ಪಣ್ಯಗಳನ್ನು ಬಿಂಬಿಸುತ್ತಾ, 'ಪ್ರಾದೇಶಿಕತೆ'ಯಿಂದ 'ಜಾಗತಿಕ' ನೆಲೆಯಲ್ಲಿ ಇಬ್ಬರೂ ಲೇಖಕರು ಚಿಂತನಗೀಡು ಮಾಡುತ್ತಾರೆ. ಕುವೆಂಪು ಅವರ 'ಧನ್ವಂತರಿ ಚಿಕಿತ್ಸೆ' ರೈತನ ಬವಣೆಯನ್ನು ಹೃದಯವಿದ್ರಾವಕವಾಗಿ ಚಿತ್ರಿಸುತ್ತದೆ.

ಕರುಣಾಪೂರಿತ ಆಕ್ರಂದನವೊಂದನ್ನು ಎಲ್ಲಿಂದ ಬರುತ್ತಿದೆ ಎಂದು ನೋಡಲು ವಿಶ್ವಾಮಿತ್ರರು ಪರುಶುರಾಮನೊಂದಿಗೆ ಭೂಮಿಗೆ ಬರುತ್ತಾರೆ. ಆಗ ಭೂಮಿಯಲ್ಲಿ ಕಂಡುಬರುವ ದೃಶ್ಯ ವರ್ತಮಾನದ ಸೂಕ್ಷ್ಮ ಸಂವೇದನೆಗಳಿಂದ ಪ್ರಮುಖವಾಗುತ್ತದೆ. ಮಧ್ಯಪಾನ ವಿರೋಧದ ಆಫೀಸಿನ ಹಿಂದುಗಡೆ ಮದ್ಯದಂಗಡಿ, ಪೋಲೀಸು ಠಾಣೆಯ ಬಳಿ ಜೂಜಿನ ಮನೆ, ದೇವಾಲಯದ ಬಳಿ ಸಹಿಸಲಸಾಧ್ಯವಾದ ದುರ್ಗಂಧ ಅವರನ್ನು ಜಿಗುಪ್ಸೆಗೊಳಿಸುತ್ತದೆ. ಇದು ವ್ಯವಸ್ಥೆಯ 'ಕರಾಳ ದರ್ಶನ'ವಾಗಿದೆ. ಕುವೆಂಪು ರೈತನ ಮನೆಯ ಚಿತ್ರಣವನ್ನು ವರ್ಣಿಸಿರುವುದನ್ನು ಗಮನಿಸಿದರೆ, 'ಶೋಷಣೆ'ಯ ಪರಿ ಎಷ್ಟರಮಟ್ಟಿಗಿತ್ತು ಎಂಬುದು ಮನವರಿಕೆಯಾಗುತ್ತದೆ.

ಹುಲ್ಲು ಜೋಪಡಿಯಲ್ಲಿ ಅಂಗಾತ ಮಲಗಿ ಘೋರವಾಗಿ ನರಳುತ್ತಿರುವ ರೈತ, ಕೊಳಕು ಚಿಂದಿಯನ್ನು ಉಟ್ಟು ಕಣ್ಣೀರು ಸುರಿಸುತ್ತಿದ್ದ ಬಡಕಲು ಹೆಂಗಸು, ಕೂದಲು ಕೆದರಿಕೊಂಡು ವಿಕಾರವಾಗಿದ್ದ ಬೆತ್ತಲೆಯ ಸಣಕಲು ಹುಡುಗಿ, ಅವರ ದೃಷ್ಟಿಗೆ ಗೋಚರಿಸುತ್ತಾರೆ. ಆ ಇಬ್ಬರು ಋಷಿಗಳನ್ನು ಕಂಡು ಹೆಂಗಸು ಅವರು ಕಂದಾಯದ ಅಧಿಕಾರಿಗಳೋ, ಪಠಾಣರೋ, ಸಾಹುಕಾರನ ವಸೂಲಿಯ ಸಾಬರೋ, ಜೋಯಿಸರೋ, ವೈದ್ಯರೋ ಇರಬೇಕೆಂದು ಚೀರುತ್ತಾಳೆ.

ಸಾಮಾನ್ಯವಾಗಿ ಕಂದಾಯದ ಅಧಿಕಾರಿಯೋ, ಪಠಾಣರೋ, ಸಾಲವಸೂಲಿಗೆ ಬಂದ ಸಾಬರೋ ಆಗಿದ್ದರೆ ಚೀರುವುದು ಸಹಜ. ಆದರೆ ಜೊಯಿಸರೋ, ವೈದ್ಯರೋ ಎಂದು ಚೀರುತ್ತಾರೆ ಎಂದಾಗ ಶೋಷಕ ಸಮಾಜದ ಭ್ರಷ್ಟತೆ, ಮೌಢ್ಯದ ವ್ಯಂಗವಾಗಿದೆ ಎಂಬುದನ್ನು ಇಲ್ಲಿ ಪರಿಭಾವಿಸಬಹುದು. ರೈತನ ಮನೆಯ ಚಿತ್ರಣ, 'ರೈತನ ನಿಜವಾದ ಪರಿಸ್ಥಿತಿ'ಯನ್ನು ಗ್ರಹಿಸುವಲ್ಲಿ ಅರ್ಥಪೂರ್ಣವಾದುದಾಗಿದೆ. ಅಲ್ಲದೆ, ಕುವೆಂಪು ರೈತನಿಗೆ ನೀಡುವ ಈ 'ಕರೆ' ಇಂದಿನ ಸನ್ನಿವೇಶಕ್ಕೆ ಸಮುಚಿತವಾಗಿ ಅನ್ವಯಿಸುತ್ತದೆ.

"ಎದೆಯ ಮೇಲಿರುವ ರಾಜ್ಯದ ಭಾರವನ್ನು ತೆಗೆದುಹಾಕಿದರೆ ಕಾಯಿಲೆ ಸರಿಹೋಗುತ್ತದೆ.... ಮೊದಲು ರೋಗ ನಿವಾರಣೆಯಾಗಲಿ ಆಮೇಲೆ ದೃಢಕಾಯನಾಗುವ ಅವನೇ, ಕೆಳಕ್ಕೆ ಬಿದ್ದ ರಾಜ್ಯದ ಭಾರವನ್ನು ಎದೆಯ ಮೇಲೆ ಹಾಕಿಕೊಳ್ಳುವುದಕ್ಕೆ ಬದಲಾಗಿ, ಹೆಗಲ ಮೇಲೆ ಹೊತ್ತು, ರಾಜ್ಯ ಭಾರವನ್ನು ವಹಿಸಿ ನಿರ್ವಹಿಸುತ್ತಾನೆ". (ಕುವೆಂಪು., ನನ್ನ ದೇವರು ಮತ್ತು ಇತರ ಕಥೆಗಳು, ೨೦೦೫, ಪುಟ - ೨೯)

ಈ ಬಗೆಯ ಆಶಯ, ರೈತನ ಪರವಾದ ಕಾಳಜಿ, ಕಳಕಳಿಯನ್ನು ಕುವೆಂಪು ಅವರ 'ಧನ್ವಂತರಿ ಚಿಕಿತ್ಸೆ' ಧ್ವನಿಸುತ್ತದೆ. ರೈತನ ಪರವಾದ ಈ ಬಗೆಯ ಕಾಳಜಿಗಳು ತೇಜಸ್ವಿಯವರ ಕತೆಗಳ ಪ್ರಧಾನ ಭಿತ್ತಿ ಆಗಿದೆ. ಕೃಷಿ ಸಂಸ್ಕೃತಿಯ ಅನಾವರಣ, ಅವರ ನೋವುಗಳನ್ನು ತೇಜಸ್ವಿ ಒಂದು ತಾತ್ವಿಕ ನೆಲೆಯಲ್ಲಿ ಗ್ರಹಿಸುತ್ತಾರೆ.

"ಆಧುನಿಕತೆಯನ್ನು ಬಹುಪಾಲು ವಿದ್ಯಾವಂತರು ಪುಸ್ತಕಗಳ ಓದಿನ ಮೂಲಕ ಗ್ರಹಿಸುತ್ತಾ ಇರುವಾಗ ತೇಜಸ್ವಿ ಕಾಡಿನಲ್ಲಿ ಕಣ್ಮರೆಯಾಗುತ್ತಿರುವ ಜೀವಗಳು-ಸಸ್ಯಗಳನ್ನು ಗಮನಿಸುವ ಮೂಲಕ, ರೈತ ಸಮುದಾಯ ಮತ್ತು ಭೂಮಿಯ ನಡುವಿನ ಹೊಕ್ಕಳ ಬಳ್ಳಿ ಸಂಬಂಧ ಕಡಿದು ಹೋಗುತ್ತಿರುವ ನೆಲೆಗಳನ್ನು ಗುರುತಿಸಿ ದಾಖಲಿಸುವ ಮೂಲಕ ಗ್ರಹಿಸುತ್ತಿದ್ದರು. ಆದ್ದರಿಂದಲೇ ತೇಜಸ್ವಿ ಅವರ ಬರಹಗಳಲ್ಲಿ ಪರಿವರ್ತತೆಯನ್ನು ದಾಖಲಿಸುವ ಅಧಿಕೃತತೆ ಕಾಣಿಸಿಕೊಳ್ಳುತ್ತಿತ್ತು". (ಚಂದ್ರೇಗೌಡ ಬಿ. (ಸಂ.), ತೇಜಸ್ವಿ ನೆನಪು, ೨೦೦೭, ಪುಟ ೧೦೭) ಎಂಬ ಕ.ವೈ ನಾರಾಯಣಸ್ವಾಮಿ ಅವರು ಹೇಳುವ ಮಾತುಗಳು ಆಧುನಿಕತೆಯು ತಂದೊಡ್ಡಿರುವ ಬೆಲೆಕುಸಿತ, ಮಾರುಕಟ್ಟೆಗಳಲ್ಲಿ ನ್ಯಾಯಸಮ್ಮತ ಬೆಲೆ ದೊರಕದಿರುವುದು, ಸ್ಥಳೀಯ ರಾಜಕಾರಣ ಮುಂತಾದ ಸಂಕೀರ್ಣತೆಗಳಿಂದ ತಾವು ನಂಬಿಕೊಂಡಿರುವ ಜಮೀನನ್ನು, ತೋಟವನ್ನು ಮಾರಿ, ನಗರದತ್ತ ಮುಖ ಮಾಡುತ್ತಿರುವ ರೈತರ ಅಸಹಾಯಕತೆಯನ್ನು ಬಿಂಬಿಸುತ್ತವೆ. ತೇಜಸ್ವಿ ಅವರ ಕತೆಗಳು, ಕಾದಂಬರಿಗಳಲ್ಲಿ ಈ ಬಗೆಯ ನಿದರ್ಶನಗಳು ಅಸಂಖ್ಯಾತವಾಗಿವೆ. ಏಲಕ್ಕಿ ಬೆಳೆಗಾರರ ಬವಣೆಗಳು, ಕಾಫಿ ಬೆಳೆಗಾರರ ಅತಂತ್ರ ಸ್ಥಿತಿ, ಈ ಬೆಳೆಗಳಿಗೆ ಕಾಣಿಸಿಕೊಳ್ಳುವ ರೋಗಬಾಧೆಗಳು, ಅವುಗಳನ್ನು ನಿವಾರಿಸತೊಡಗುವ ರೈತರ ನಿಸ್ಸಹಾಯಕತೆ, ಪರಿಪಾಟಲುಗಳನ್ನು ಕೃತಿಗಳು ವಾಸ್ತವವಾದೀ ನೆಲೆಗಟ್ಟಿನಲ್ಲಿ ಸಂವೇದನಾಶೀಲವಾಗಿ ನಿರೂಪಿಸಿವೆ.

ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ ರೈತನ ಆತ್ಮಹತ್ಯೆಯಂತಹ ಘಟನೆಗಳು, ರೈತನ ಈ ಬಗೆಯ ಬವಣೆಗಳಿಗೆ ಸಾಕ್ಷಿಯಾಗಿವೆ. ಇವೆಲ್ಲವನ್ನೂ ಮೀರುವ ದೃಷ್ಟಿ ಹಾಗೂ ಆಶಯ ಕುವೆಂಪು ಮತ್ತು ತೇಜಸ್ವಿ ಅವರಿಬ್ಬರ ಕೃತಿಗಳಲ್ಲಿ ವ್ಯಕ್ತವಾಗಿವೆ. ಈ ದಿಸೆಯಲ್ಲಿ ಸಾಮಾಜಿಕ ಪರಿಸರದ ಪರಿವರ್ತನಾಶೀಲ ದೃಷ್ಟಿ, ಚಿಕಿತ್ಸಕ ಮನೋಭಾವಗಳಿಂದ ಇಬ್ಬರೂ ಲೇಖಕರು ವರ್ತಮಾನದ ಸಂವೇದನೆಗಳಿಗೆ ಮುಖಾಮುಖಿಯಾಗಿದ್ದಾರೆ. ವರ್ತಮಾನದ ಪ್ರತಿನಿಧಿಯಾಗಿದ್ದಾರೆ.

## ಅಧ್ಯಾಯ – ೭

# ಬೇಟೆ : ಅನುಭವಾತ್ಮಕ ನೆಲೆಗಳು

ಬದಲಾಗುತ್ತಿರುವ ಇಂದಿನ ಸಮಾಜ ಹಾಗೂ ಸಂಸ್ಕೃತಿಯಲ್ಲಿ ನಾನಾಕಾರಣಗಳಿಂದಾಗಿ ಬೇಟೆಯು ಜನಜೀವನದಿಂದ ಕಣ್ಮರೆಯಾಗುತ್ತಿದೆ. 'ಬೇಟೆ' ಜನಪದ ಜೀವನಕ್ಕೆ ಹೊಂದಿಕೊಂಡು ಬಂದ ಸಹಜ ಕ್ರಿಯೆ. ಇದು ವೀರ, ಭಯಾನಕ, ರೌದ್ರ, ಭೀಭತ್ಸ, ಹಾಸ್ಯ ಮೊದಲಾದ ನವರಸಗಳಿಗೆ ಸಾಕಷ್ಟು ಅವಕಾಶವನ್ನು ನೀಡುವ ರೋಚಕಪ್ರಸಂಗ. ಜೀವನಾಧಾರವಾಗಿ ಮನುಷ್ಯ ಮೊದಲು ಕಂಡುಕೊಂಡ ವೃತ್ತಿಯೆಂದರೆ ಬೇಟೆ. ಆತ್ಮ ರಕ್ಷಣೆಗೂ ಅದು ಅನುವಾಗುತ್ತದೆ. ಬರುಬರುತ್ತಾ ಅದು ರಾಜಮಹಾರಾಜರ ಹಾಗೂ ಶ್ರೀಮಂತರ ವಿರಾಮದ ಆಮೋದ ಪ್ರಮೋದಗಳ ವಿಹಾರ ವಿನೋದ ಶೋಕಿಗಳ ಸಾಧನವೂ ಆಗುತ್ತದೆ. ಬೇಟೆಗೆ ತೊಡಗುವವರ ನೆರವಿಗಾಗಿ ಬೇಡರ ಮತ್ತು ಬೇಟೆಯಾಳುಗಳ ಪಡೆಯೂ ಅನಿವಾರ್ಯವಾದ್ದರಿಂದ ಕೆಲವರಿಗದು ನೌಕರಿಯ ಆಕರವಾಗುತ್ತದೆ.

ಈ ವೃತ್ತಿಯು ತನ್ನ ವೈವಿಧ್ಯತೆಯಿಂದ ವಿಸ್ತಾರವಾದಂತೆಲ್ಲ ಕಲೆಯಾಗಿ, ಶಾಸ್ತ್ರವಾಗಿ, ತಾಂತ್ರಿಕವಾಗಿ, ಕೌಶಲವಾಗಿ ಪರಿಣಾಮ ಹೊಂದುತ್ತದೆ. ಅಷ್ಟೇ ಅಲ್ಲ ಅನೇಕ ಉಪವೃತ್ತಿ ಹಾಗೂ ಉಪಕತೆಗಳನ್ನದು ಹೆರುತ್ತದೆ. ಬೇಟೆಗೆ ಸಾಕಾಗುವಷ್ಟು ಬಲೆ, ಬೋನು, ಉರುಳು, ಗಾಳ, ಕೂಳಿ, ಈಟಿ, ಭರ್ಜಿ, ಸಬಳ ಮೊದಲಾದ ಆಯುಧಗಳ ತಯಾರಿಕೆಯಿಂದಾಗಿ ಹಲವರ ಜೀವನ ಸಾಗುತ್ತದೆ.

ಜಾನಪದವಾಗಿ ಹುಟ್ಟಿ ಪುಷ್ಕಳವಾಗಿ ಬೆಳೆದ ಬೇಟೆಯ ತಂತ್ರ ಕೌಶಲ್ಯ ಆಧುನಿಕ ಕಾಲದ ಪರಿಣತಿಯ ಬಹುಮುಖೀ ತಾಂತ್ರಿಕ ವಿಜ್ಞಾನಕ್ಕೆ ಎಡೆಮಾಡಿ ಕೊಟ್ಟಿರುವುದಂತೂ ನಿಜ. ಕಾಲಾಂತರದಲ್ಲಿ ಬೇಟೆಯ ಜತೆಗೆ ಕೃಷಿ, ಉದ್ಯೋಗ ಚಾಲ್ತಿಗೆ ಬಂದಾಗ, ಮಾನವನ ಅಲೆಮಾರಿತನ ಕಡಿಮೆಯಾಗಿ ಊರುಗಳು ತಲೆಯೆತ್ತುತ್ತವೆ. ಕಾಡು ಪ್ರಾಣಿಗಳನ್ನು ಊರು ಪ್ರಾಣಿಗಳನ್ನಾಗಿ ಪಳಗಿಸಿಕೊಂಡು . ಅವುಗಳನ್ನು ಮನುಷ್ಯನು ವ್ಯವಸಾಯಕ್ಕೆ, ಕಾವಲಿಗೆ, ಆಹಾರಕ್ಕೆ ಹಾಗೂ ಬೇಟೆಗೆ ಬಳಸಿಕೊಳ್ಳುತ್ತಾನೆ. ಬೇಟೆನಾಯಿಗಳನ್ನೂ ಸವಾರಿ ಕುದುರೆಗಳನ್ನೂ ಪಳಗಿಸಿಕೊಳ್ಳುತ್ತಾನೆ. ಅರಣ್ಯ ರಕ್ಷಣೆಯೂ ತನ್ನ ಕರ್ತವ್ಯವೆಂದು ಭಾವಿಸುತ್ತಾನೆ.

ಮೃಗಯಾ ವೃತ್ತಿಯ ಜತೆ ಜತೆಯಲ್ಲಿಯೇ ಬೇಟೆಯ ಸಾಹಿತ್ಯ ಹಾಗೂ ಚಿತ್ರಗಳು ಸೃಷ್ಟಿಯಾಗುತ್ತವೆ. ಜೀವವಿಜ್ಞಾನದ ಜ್ಞಾನ ವಿಕಾಸಗೊಳ್ಳಲು ಸಹ ಬೇಟೆ ನೆರವಾಗುತ್ತದೆ. "ಆಯಾಯ ಪ್ರಾಣಿಯ ಚಾಳಿ ಚರ್ಯೆ ಲಕ್ಷಣಗಳಿಗನುಗುಣವಾಗಿ ಋತುಮಾನ ರೀತಿಗಳ ಹಿನ್ನಲೆಯಲ್ಲಿ ಇಡೀ ವರ್ಷ ಬೇಟೆಗಳು ನಡೆಯುತ್ತವೆ. ಸಾಧನ ವಿಧಾನ ತಂತ್ರ ಕೌಶಲಗಳಲ್ಲಿ, ಒಂದು ಪ್ರಾಣಿಯ ಬೇಟೆ ಇತರ ಪ್ರಾಣಿಗಳ ಬೇಟೆಗಿಂತ ಭಿನ್ನವಾಗಿರುತ್ತದೆ. ನರಿ, ಜಿಂಕೆ, ಮೊಲ, ಕಿರುಬ, ಚಿರತೆ, ಹುಲಿ, ಹಂದಿ, ಮೀನು, ಜೇನು, ಕೋಳಿ, ಸೋರೆ, ಸರಳೆ, ಹೀಗೆ ಒಂದೊಂದು ಪ್ರಾಣಿಯ ಬೇಟೆ ಇತರ ಪ್ರಾಣಿಗಳ ಬೇಟೆಗಿಂತ ಭಿನ್ನವಾಗಿರುತ್ತದೆ. ಬೇಟೆಯ ಯಶಸ್ಸು ಬೇಟೆಗಾರನ ಆರೋಗ್ಯ, ಸಾಧನೆ, ತಾಳ್ಮೆ, ದೃಢಸಂಕಲ್ಪ, ನೇತ್ರಪಾಟವ, ಶ್ರವಣಶಕ್ತಿ, ಧ್ವನಿ ಸಾಮರ್ಥ್ಯ, ಜ್ಞಾಪಕ ಬಲ, ಪ್ರಾಣಿಗಳ ಚಾಳಿ, ಚರ್ಯೆ ಚಲನ ವಲನಗಳನ್ನು ಗ್ರಹಿಸಬಲ್ಲ ಬುದ್ಧಿ ಕೌಶಲ, ಕ್ರಿಯಾ ಚಾತುರ್ಯ ಮೊದಲಾದ ಗುಣಗಳನ್ನು ಅವಲಂಬಿಸಿದೆ". (ದೇಜಗೌ., ಕುವೆಂಪು ದರ್ಶನ ಸಂಪುಟ ೨, ೨೦೦೬, ಪುಟ ೬೭೨)

ಮಾನವನ ಸಾಂಸ್ಕೃತಿಕ ಇತಿಹಾಸದ ಬೆಳವಣಿಗೆಯ ಮುಂದಿನ ಹಂತಗಳಲ್ಲಿ ಬೇಟೆಯು ಸಾರ್ವತ್ರಿಕವಾಗಿ ಅನಿವಾರ್ಯವಾಗಲಿಲ್ಲ. ಏಕೆಂದರೆ ಪ್ರಾಣಿಗಳನ್ನು ಸಾಕುವ ಮೂಲಕ ತಮಗೆ ಬೇಕಾದ ಮಾಂಸವನ್ನು ಪಡೆದರು. ಪ್ರಾಣಿಗಳನ್ನು ಸಾಕುವ ಪ್ರವೃತ್ತಿಯೇ 'ಬೇಟೆ' ನಶಿಸಲು ಕಾರಣವಾಗಿದೆ. ಅಲ್ಲದೆ ಬಡವಾಗುತ್ತಿರುವ ಇಂದಿನ ಸಮಾಜ ಹಾಗೂ ಸಂಸ್ಕೃತಿಯಲ್ಲಿ ನಾನಾ ಕಾರಣಗಳಿಂದ ಬೇಟೆಯು ಜನಜೀವನದಿಂದ ಕಣ್ಮರೆಯಾಗುತ್ತಿದೆ. ಇದಕ್ಕೆ ಪರಿಸರಾಂದೋಲನ, ವೈಚಾರಿಕ ಪ್ರಜ್ಞೆ ಹಾಗೂ ಪ್ರಾಣಿದಯಾಸಂಘಗಳ ಒತ್ತಡವೂ ತಕ್ಕಮಟ್ಟಿಗೆ ಕಾರಣವೆನ್ನಬಹುದು.

ಭರತಖಂಡದ ಆದಿ ಕಾವ್ಯವಾದ 'ರಾಮಾಯಣ'ವನ್ನು ರಚಿಸಿದ್ದು ಬೇಟೆಗಾರನಾದ ವಾಲ್ಮೀಕಿ. ಹಾಗಾಗಿ ಇಲ್ಲಿಂದಲೇ ಬೇಟೆಯ ವರ್ಣನೆ ಸಾಹಿತ್ಯದ ಒಂದು ಅಂಗವಾಗಿ ಸೇರ್ಪಡೆಯಾಯಿತೆಂದು ಹೇಳಬಹುದು. ಅಷ್ಟಾದಶ ವರ್ಣನೆಗಳಲ್ಲಿ ಬೇಟೆಯೂ ಒಂದಾಗಿದ್ದು, ಬೇಟೆಯ ವರ್ಣನೆ ಮನೋರಂಜನೆಯ ಅಂಶವಾಗಿ ಸ್ಥಾನಪಡೆದಿದೆ. ಪಂಪಭಾರತದ ಅರ್ಜುನ, 'ಹರಿಶ್ಚಂದ್ರಕಾವ್ಯ'ದ ಹರಿಶ್ಚಂದ್ರನ ಬೇಟೆಯ ಪ್ರಸಂಗಗಳಲ್ಲಿ ಇದನ್ನು ಕಾಣಬಹುದು ಬೇಟೆ ಎಂಬುದು ಕೇವಲ ಜೂಜು, ಮೋಜು ಎಂಬುದು ಸರಿಯಲ್ಲ. ಬೇಟೆಯಿಂದ ಬೇಟೆಗಾರನಿಗೆ ಹಲವಾರು ಪ್ರಯೋಜನಗಳಿವೆ. ಈ ಕಾರಣದಿಂದಲೇ ಪಂಪನು ಬೇಟೆಯನ್ನು

'ವಿನೋದಗಳ ರಾಜ' ಎಂದಿದ್ದಾನೆ. ಇದಕ್ಕೆ ಮಹಾಕವಿ ಕಾಳಿದಾಸನ ಪ್ರಭಾವವು ಇದ್ದಂತಿದೆ. ಕಾಳಿದಾಸನು ತನ್ನ 'ಅಭಿಜ್ಞಾನ ಶಾಕುಂತಲ'ದಲ್ಲಿ ಬೇಟೆ ಕುರಿತು ಬರೆದ ಮನೋಹರ ಪದ್ಯವನ್ನು ನೋಡುವುದಾದರೆ,

ಮೇದಶ್ಛೇದ ಕೃಶೋದರಂ ಲಘುಭವತ್ಯುತ್ಥಾನ ಯೋಗ್ಯಂವಪ್ರಃ

ಸತ್ವಾನಾಮಪಿ ಲಕ್ಷ್ಯತೇ ವಿಕೃತಿ ಮಚ್ಚಿತಂ ಭಯ ಕ್ರೋಧಯೋಃ

ಉತ್ಕರ್ಷಃ ಸ ಚ ಧನ್ವಿನಾಂಯ ರಿಷವಃ ಸಿದ್ಧ್ಯಂತಿ ಲಕ್ಷ್ಯೇಚಲೇ

ಮಿಥ್ಯೈವ ವ್ಯಸನಂ ಪದಂತಿ ಮೃಗಯಾ ಮೀದೃಗ್ವಿನೋದಃ ಕುತಃ

ಇದರರ್ಥ ಬೊಜ್ಜು ಕರಗುತ್ತದೆ. ಹೊಟ್ಟೆ ಕಿರಿದಾಗುತ್ತದೆ. ಶರೀರ ಚುರುಕಗೊಂಡು ಲಘುವಾಗುತ್ತದೆ. ಹೆದರಿಕೆಯಲ್ಲಿ ಜಂತುಗಳ ವಿಕಾರವಶವಾದ ಚಿತ್ತಹೇಗಿರುತ್ತದೆಂದು ಅರಿವಾಗುತ್ತದೆ. ಚಲಿಸುತ್ತಿರುವ ಸಮಯದಲ್ಲಿ ಕೂಡಾ ಬಾಣಗಳು ಸರಿಯಾಗಿ ಲಕ್ಷಕ್ಕೇ ನಾಟುವಂತೆ ಸಿದ್ಧಿ ದೊರಕುತ್ತದೆ ಎಂಬುದು ಬಿಲ್ಲುಗಾರರಿಗೆ ಬಲ್ಮೆಯಾಗಿದೆ. ಇಷ್ಟೆಲ್ಲಾ ಗುಣವಿಶೇಷಗಳಿದ್ದರೂ ಬೇಟೆಯನ್ನು ವ್ಯಸನಗಳಲ್ಲಿ ಒಂದು ಎನ್ನುವುದು ಕೇವಲ ಸುಳ್ಳೇ ಆಗಿದೆ. ಬೇಟೆಯಂತಹ ವಿನೋದ ಇನ್ನೆಲಿದೆ? ಎಂಬುದು. ಬೇಟೆಯಲ್ಲಿ ಇಷ್ಟೆಲ್ಲಾ ಗುಣ ವಿಶೇಷಗಳಿರುವುದರ ಜೊತೆಗೆ ಮಾನವನ ಬುದ್ಧಿವಿಕಾಸದಲ್ಲಿ ಮಹತ್ವದ ಪಾತ್ರವಹಿಸಿದೆ. ಈ ನಿಟ್ಟಿನಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನುಪಮವಾದ ಬೇಟೆ ವರ್ಣನೆಗಳನ್ನು, ಪ್ರಸಂಗಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿರುವುದನ್ನು ಕಾಣಬಹುದು.

ಸಾಹಿತ್ಯದಲ್ಲಿ ಬೇಟೆಯ ಸ್ಥಾನವನ್ನು ಗಮನಿಸಿದಾಗ ಅದರ ಹಿನ್ನಲೆ, ಮಹತ್ವದ ಅರಿವು ಸ್ಪಷ್ಟವಾಗುತ್ತದೆ. ಬಹುತೇಕ ಸಾಹಿತ್ಯದಲ್ಲಿ ಬೇಟೆ ಮುಖ್ಯ ಅಂಶವಾಗಿ ಬಂದಿರುವುದನ್ನು ಕಾಣಬಹುದು. ಪರ್ವತ ವರ್ಣನೆ, ಕಾಡು-ಮೇಡು, ಬೃಹದಾರಣ್ಯಗಳ ವರ್ಣನೆ ಮಾಡುವ ಸಂದರ್ಭದಲ್ಲಿ ಬೇಟೆಯ ವರ್ಣನೆ ಅನಿವಾರ್ಯ. ಬೇಟೆ ಮತ್ತು ಮಾಂಸಾಹಾರದ ಸ್ವಾನುಭವವಿಲ್ಲದ ಕವಿಗಳು ಬೇಟೆಯ ವರ್ಣನೆಯನ್ನು ತಮ್ಮ ಕೃತಿಗಳಲ್ಲಿ ಸೇರಿಸಿದರೆ ಅಂಥ ವರ್ಣನೆಗಳು ಕೃತಕವಾಗಿ ಶುಷ್ಕವಾಗಿ ಕಾಣುತ್ತವೆ. ಸ್ವಾನುಭವವುಳ್ಳ ಕವಿಗಳಷ್ಟು ಸಶಕ್ತವಾಗಿ ನೈಜವಾಗಿ ನಿರೂಪಿಸಲು ಅಸಾಧ್ಯ. 'ಪಂಪಭಾರತ'ದ ಪಂಚಮಾಶ್ವಾಸದಲ್ಲಿ ನರನಾರಯಣರ ಬೇಟೆಯ ವರ್ಣನೆ ಬರುತ್ತದೆ. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲೂ ಅದ್ಭುತವಾದ ಬೇಟೆಯ ವರ್ಣನೆಯನ್ನು ಕಾಣಬಹುದು. ರಾಘವಂಕನ 'ಹರಿಶ್ಚಂದ್ರ

ಕಾವ್ಯ'ದ ಷಟ್ಸ್ಥಲದಲ್ಲಿ ಬರುವ 'ಮಾಯಾ ವರಾಹದ ಬೇಟೆ'ಯಲ್ಲಿ ವರ್ಣನೆಯ ವಿಸ್ತಾರವನ್ನು ಕಾಣಬಹುದು ಇವನ್ನೆಲ್ಲ ಗಮನಿಸಿದಾಗ ಬೇಟೆ ಕನ್ನಡಿಗರ ಬದುಕಿನ ಭಾಗ ಎಂಬುದಕ್ಕೆ ಇಂಬು ಸಿಗುತ್ತದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಬೇಟೆಯ ಸಾಹಿತ್ಯ'ವು ಅಗಾಧ ಪ್ರಮಾಣದಲ್ಲಿದೆ ಎಂದೇ ಹೇಳಬಹುದು. ಸ್ವತಃ ಬೇಟೆಯಲ್ಲಿ ಭಾಗವಹಿಸಿದ ಬೇಟೆಯ ಪ್ರತ್ಯಕ್ಷ ಅನುಭವದ ಹಿನ್ನಲೆಹೊಂದಿರುವ ಲೇಖಕರೇ ಇಂತಹ ಸಾಹಿತ್ಯವನ್ನು ರಚಿಸಿದರೆ ಓದುಗರಿಗೂ ಆಪ್ಯಾಯವೆನಿಸುತ್ತದೆ. ಅಲ್ಲದೆ ಅವರ ಕೌತುಕವನ್ನು ಕೆರಳಿಸುತ್ತದೆ. ಕನ್ನಡದಲ್ಲಿ ಜಿಮ್ ಕಾರ್ಬೆಟ್ ಕಮಾವೋ ಬೇಟೆಯ ಪ್ರಸಂಗಗಳ ಭಾಷಾಂತರವೇ ಮೊದಲ ಬೇಟೆಯ ಸಾಹಿತ್ಯ ಎನ್ನಬಹುದಾಗಿದೆ. ೧೯೭೭ಲರಿಂದ ಈಚೆಗೆ ಜತ್ತಪ್ಪ ರೈ, ಬಡ್ಡಡ್ಕ ಅಪ್ಪಯ್ಯಗೌಡ, ಕೆ.ಎಸ್.ರಾಮಪ್ಪಗೌಡ, ಕೈಂತಜೆ ವಿಷ್ಣುಭಟ್ಟ, ತೇಜಸ್ವಿ ಮತ್ತು ಎಂ.ಪಿ.ಮಂಜಪ್ಪಶೆಟ್ಟರು ಈ ದಿಸೆಯಲ್ಲಿ ಅತ್ಯಮೂಲ್ಯ ಸಾಧನೆ ಮಾಡಿದ್ದಾರೆ. ಈ ಕ್ಷೇತ್ರದಲ್ಲಿ ಮಾರ್ಗದರ್ಶಕರೆಂಬಂತೆ, ಅದ್ವಿತೀಯ ಎನ್ನುವಂತೆ ಕುವೆಂಪು ಅವರು 'ಬೇಟೆಯ ಸಾಹಿತ್ಯ'ವನ್ನು ಸಮೃದ್ಧವಾಗಿ ನೀಡಿದ್ದಾರೆ.

ಕನ್ನಡದಲ್ಲಿ 'ಮೃಗಯಾ ಸಾಹಿತ್ಯ'ವನ್ನು ಅಪಾರ ಪ್ರಮಾಣದಲ್ಲಿ ರಚಿಸಿರುವ ಸಾಹಿತಿಗಳೆಂದರೆ ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ. ಇದಕ್ಕೆ ಮುಖ್ಯ ಕಾರಣ ಮಲೆನಾಡು. ಮಲೆನಾಡಿನ ಜನರಿಗೆ ಕೃಷಿಯಂತೆಯೇ ಬೇಟೆಯೂ ಬದುಕಿನ ಅವಿಭಾಜ್ಯ ಅಂಗ. ಇಲ್ಲಿಯ ಜನರಿಗೆ ಬೇಟೆಯು ಬರಿಯ ವೃತ್ತಿಯಲ್ಲ, ಮನರಂಜನೆಯ ಮಾರ್ಗವಾಗಿದೆ. ಅವರ ಧೈರ್ಯ ಸಾಹಸಗಳನ್ನು ಪ್ರದರ್ಶಿಸುವ ಸಾಧನವೂ ಆಗಿದೆ. ಆನುವಂಶಿಕವಾಗಿ ಸಾಗಿ ಬಂದ ಈ ಕಲೆ ತಾವು ಹುಟ್ಟಿ ಬೆಳೆದ ಪರಿಸರವನ್ನೆಲ್ಲ ಅಗಾಧವಾಗಿ ಆವರಿಸಿಕೊಂಡಿದೆ. ಸಹಜವೆಂಬಂತೆ ಈ ಕಲೆ ಕುವೆಂಪು ಅವರಲ್ಲೂ ರಕ್ತಗತವಾಗಿದೆ. ಬಾಲ್ಯದಿಂದಲೇ ಬೇಟೆಗಾರರಾಗಿದ್ದ ಕಾರಣದಿಂದ ಬಹಳ ನೈಜತೆಯಿಂದ ಕೂಡಿದ ಬೇಟೆಯ ಸಾಹಿತ್ಯವನ್ನು ನೀಡಲು ಅವರಿಗೆ ಸಾಧ್ಯವಾಯಿತು. ತಮ್ಮ ಹುಟ್ಟು – ಬೆಳವಣಿಗೆ ಮೈಸೂರಿನಲ್ಲಾದರೂ ಮಲೆನಾಡಿನ ಕಾನನದ ಬಗೆಗಿನ ಹಂಬಲದಿಂದ ಬೇಟೆಯನ್ನು ಹವ್ಯಾಸವನ್ನಾಗಿ ರೂಢಿಸಿಕೊಂಡ ತೇಜಸ್ವಿ ಕೂಡ ತಂದೆಯ ಮಾರ್ಗದಲ್ಲೇ ರೋಚಕತೆಯ ಬೇಟೆಯ ಸಾಹಿತ್ಯವನ್ನು ಅಚ್ಚಳಿಯದಂತೆ ಕಟ್ಟಿಕೊಡಲು ಸಾಧ್ಯವಾಯಿತು. ಆದ್ದರಿಂದಲೇ ಈ

ಇಬ್ಬರೂ ಲೇಖಕರು ತಮ್ಮದೇ ಆದ ಸ್ವಂತಿಕೆಯಿಂದ ಇತರ ಲೇಖಕರಿಗಿಂತ ಪ್ರತ್ಯೇಕವಾಗಿ ಕಾಣುತ್ತಾರೆ.

ಕುವೆಂಪು ಮತ್ತು ತೇಜಸ್ವಿ ಇಬ್ಬರೂ ತಮ್ಮ ಸಾಹಿತ್ಯದಲ್ಲಿ 'ಬೇಟೆ'ಯನ್ನು ಒಂದು ಚಿತ್ರಣವನ್ನಾಗಿ ತಂದಿಲ್ಲ. ಬದಲಾಗಿ ಮಲೆನಾಡಿನ ಬದುಕಿನ ರಾಗದ್ವೇಷಗಳ, ನೋವುನಲಿವುಗಳ ಸಂವೇದನೆಯನ್ನು ಹಿಡಿದಿಟ್ಟಿದ್ದಾರೆ. ಅಲ್ಲದೆ ಇಬ್ಬರ ಸಾಹಿತ್ಯದಲ್ಲಿ ಕಂಡು ಬರುವ ಬೇಟೆಯ ಭಾಗಗಳನ್ನು ಅವಲೋಕಿಸಿದಾಗ ಇಬ್ಬರ ಬೇಟೆಯ ಬಗೆಗಿನ ಧ್ಯೇಯ – ಧೋರಣೆಗಳಲ್ಲಿ ಭಿನ್ನ ನಿಲುವುಗಳನ್ನು ಕಾಣಬಹುದು.

ಕುವೆಂಪುರವರ 'ಕಾನೂರು ಹೆಗ್ಗಡಿತಿ'ಯ 'ಚಿನ್ನಯ್ಯನ ಮೀನುಶಿಕಾರಿ', 'ಸೇರೆಗಾರರ ಕೆಂಪಿನ ಕೋವಿ', 'ಬೈರನು ಹೊಂಡ ತೋಡಿದ್ದು', 'ಕತ್ತಲೆಗಿರಿಯ ಸರುವಿನಲ್ಲಿ ಕಾಡು ಹಂದಿಯ ಬೇಟೆ' ಹೀಗೆ ಅನೇಕ ಅಧ್ಯಾಯಗಳಲ್ಲಿ ಬೇಟೆಯ ನಾನಾವಿಧಗಳು, ಬೇಟೆಯ ನಾನಾಮುಖಗಳು, ಬೇಟೆಯ ನಾನಾರೂಪಗಳನ್ನು ಪ್ರಸ್ತುತಪಡಿಸಿದ್ದಾರೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ 'ಕಾನೂರು ಹೆಗ್ಗಡಿತಿ'ಯಲ್ಲಿರುಷ್ಟು ವಿಸ್ತಾರವಾದ ಬೇಟೆ ಇಲ್ಲದಿದ್ದರೂ ಅಲ್ಲಿನ 'ಜನಜೀವನದ ಅಂಗ' 'ಪ್ರಾಣಸ್ವರೂಪ'ವಾದದ್ದೆಂದು ಚಿತ್ರಿತವಾಗಿದೆ. ಅಲ್ಲದೆ ಇವರ 'ಮಲೆನಾಡಿನ ಚಿತ್ರಗಳು' ಬೇಟೆಯ ಸಾಕಷ್ಟು ವಿವರಗಳನ್ನು ಒದಗಿಸುತ್ತದೆ. 'ಬಂದನಾ ಹುಲಿರಾಯನು' 'ಪುಟ್ಟಚಾರಿಯ ಕಾಡುಕೋಳಿ' ಮುಂತಾದ ಅರ್ಧಕ್ಕಿಂತ ಹೆಚ್ಚು ಪ್ರಬಂಧಗಳು ಬೇಟೆಗೇ ಮೀಸಲಾಗಿವೆ. ಅಲ್ಲದೆ, ಬೇಟೆಯಿಂದಾಗುವ ಆಕಸ್ಮಿಕ ಅಪಾಯ, ಅನಾಹುತಗಳ ಕರುಣಾಜನಕ ಪ್ರಸಂಗಗಳನ್ನು 'ಮರಸು ಬೇಟೆ' ಕಥನ ಕವನದಲ್ಲಿ ಚಿತ್ರಿಸಿದ್ದಾರೆ.

ಮಲೆನಾಡಿನ ಜನರು ಕಾಡಿನ ಸಾಧುಪ್ರಾಣಿಗಳು ಮತ್ತು ಕ್ರೂರಪ್ರಾಣಿಗಳ ಸಹವಾಸದಲ್ಲಿಯೇ ಬದುಕು ನಡೆಸಬೇಕಾಗಿರುವುದರಿಂದ ಬೇಟೆ 'ಅನಿವಾರ್ಯದ ಕಸುಬಾ'ಗುತ್ತದೆ. ಆದ್ದರಿಂದಲೇ ಕುವೆಂಪು ಅವರ ಬದುಕಿನಲ್ಲಿ ಹೇಗೆ ಸಹಜವಾಗಿತ್ತೋ ಹಾಗೆ ಸಾಹಿತ್ಯದಲ್ಲಿಯೂ ಬೇಟೆಯ ವರ್ಣನೆ ಹಾಸುಹೊಕ್ಕಿದೆ. ಅದು ಕೃತಕವೆನಿಸದೆ ಅಲ್ಲಿಯ ಘಟನೆಗಳಿಗೆ ಪೂರಕವೆನಿಸುವಂತೆ ರಸವತ್ತಾಗಿ ಬರುತ್ತದೆ. ಎಂತಹ ಗಹನವಾದ ವಿಚಾರದಲ್ಲಿ ತೊಡಗಿದ್ದರೂ ಸಂಭ್ರಮ ಸಡಗರದಲ್ಲಿದ್ದರೂ ಹೂಂಕಾರ, ಗರ್ಜನೆಗಳು ಕೇಳಿದೊಡನೆ ಇಲ್ಲಿನ ಜನರು

ಜೋಡುನಳಿಗೆ ತೋಟ ಕೋವಿಯನ್ನೋ, ರೈಫಲನ್ನೋ ಹಿಡಿದುಕೊಂಡು ಬೇಟೆ ನಾಯಿಗಳ ಜತೆಯಲ್ಲಿ ಹಳುವಿನೊಳಗೆ ನುಗ್ಗುತ್ತಾರೆ. ಮಲೆನಾಡಿನ ಮನೆಮನೆಗಳಲ್ಲೂ ಬೇಟೆಗಾರರು ಇರುತ್ತಾರೆ. ಅಲ್ಲದೆ ಕುವೆಂಪುರವರ ಕುಪ್ಪಳ್ಳಿ ಮನೆಯಲ್ಲಿ ರಂಗಯ್ಯ, ಪುಟ್ಟಣ್ಣ, ಪುಟ್ಟಾಚಾರಿ, ಹಿರಗ ಮೊದಲಾದ ಬೇಟೆ ಪರಿಣಿತರಿದ್ದರು. ತೇಜಸ್ವಿ , ತಮ್ಮ ಕಥೆ ಕಾದಂಬರಿಗಳಲ್ಲಿ ಬೇಟೆಯ ಚಿತ್ರಣಗಳನ್ನು ತರಲು ಮುಖ್ಯ ಪ್ರೇರಣೆ ಕುವೆಂಪು. ಕುವೆಂಪು ತಾವೇ ಸ್ವತಃ ಅನುಭವಿಸಿದ್ದ ಬೇಟೆಯ ಅನುಭವಗಳ ಜೊತೆಗೆ ಇತರ ಬೇಟೆಗಾರರ ಸೊಗಸಾದ ಚಿತ್ರಗಳನ್ನು ತಮ್ಮ ಕಾವ್ಯ, ಕಾದಂಬರಿಗಳು ಹಾಗೂ 'ಮಲೆನಾಡಿನ ಚಿತ್ರಗಳು' ಕೃತಿಯಲ್ಲೂ ಚಿತ್ರಿಸಿದ್ದಾರೆ.

ಇವರ ಕೃತಿಗಳಲ್ಲಿ ಬರುವ ಬೇಟೆಯ ಪ್ರಸಂಗಗಳು ಬೇಟೆಗಷ್ಟೇ ಸೀಮಿತವಾಗಿಲ್ಲ. ಬೇಟೆಯ ಸಮಗ್ರ ಮಾಹಿತಿಗಳನ್ನೊಳಗೊಂಡ ವಿಶ್ವಕೋಶ ಗಳಂತಿವೆ. ಕಾಡು ಪ್ರಾಣಿಗಳ ಚರ್ಯೆ, ಜೀವನ ವಿಧಾನ, ನಡವಳಿಕೆಗಳ ಸೂಕ್ಷ್ಮ ಅಧ್ಯಯನದ ಮಾಹಿತಿ ಕಾಣುತ್ತದೆ. ಅಲ್ಲದೆ ನಿಸರ್ಗದ ರುದ್ರ ರಮಣೀಯ ವೈಭವ, ಜೀವ ಸಂಕುಲಗಳ ವಿಸ್ತಾರವನ್ನು ಸಹ ತಿಳಿಯಲು ಅಗಾಧ ಮಾಹಿತಿಗಳ ಆಗರವಾಗಿದೆ.

'ಮಲೆನಾಡಿನ ಚಿತ್ರಗಳು' ಬಹುತೇಕ ಬೇಟೆ ಪ್ರಸಂಗಗಳಿಗೆ ಮೀಸಲಾಗಿರಿಸಿದ ಪ್ರಬಂಧ ಸಂಕಲನವಾಗಿದೆ. ಬೇಟೆಯ ವಿಚಾರಗಳು, ಬೇಟೆಯ ವಿಧಗಳು, ಬೇಟೆಯಿಂದೊಡಗುವ ಸಂಕಷ್ಟಗಳ ನೈಜ ಚಿತ್ರಣಗಳಿಂದ ಕೂಡಿವೆ. 'ಕಾಡಿನಲ್ಲಿ ಕಳೆದ ಒಂದಿರುಳು' ಕುವೆಂಪುರವರೇ ಸ್ವತಃ ಬೇಟೆಗೆ ಹೋದ ಅನುಭವವಾಗಿದೆ. ತಿಮ್ಮು ಮತ್ತು ಓಬುರೊಡನೆ 'ಮರಸು ಬೇಟೆ'ಗೆ ಹೋದ ಕುವೆಂಪು ಮನಸ್ಸು ಕಾನನದ ಸೊಬಗನ್ನು ಮನದಣಿಯ ನೋಡಿ ರಸವಶವಾಗುತ್ತದೆ.

"ನಾನು ಕುಳಿತಿದ್ದ ಮರದ ಬುಡದಲ್ಲಿ ಏನೋ ಸರಸರ ಸದ್ದಾದಂತಾಯಿತು. ಒಡನೆಯ ಭಯಂಕರವಾದ ಹೂಂಕೃತಿಗಳು ಕತ್ತಲೆಯ ಕಡಲಿನಲ್ಲಿ ತರಂಗ ತರಂಗವಾಗೆದ್ದವು. ಮೊದಲು ನನಗೆ ಪ್ರಾಣಿ ಯಾವುದೆಂದು ಬಗೆಹರಿಯಲಿಲ್ಲ. ರಕ್ತನಾಳಗಳಲ್ಲಿ ಉದ್ವೇಗದ ಪ್ರವಾಹ ಸಂಚಲಿಸಿತು. ಮೆಲ್ಲನೆ ಬಹಳ ಜಾಗರೂಕತೆಯಿಂದ ಸ್ವಲ್ಪವೂ ಸದ್ದು ಮಾಡದೆ ಅಟ್ಟಣೆಯಲ್ಲಿ ಎದ್ದು ಕುಳಿತುಕೊಂಡೆ.

ಹಾಗೆಯ ಬಂದೂಕನ್ನು ಕೈಗೆ ತೆಗೆದುಕೊಂಡೆ. ಪ್ರಾಣಿ ಮಾವಿನ ಹಣ್ಣನ್ನು ಅಗಿಯುವ ಸದ್ದಾಯಿತು. ನೆಲವನ್ನು ಮೂತಿಯಿಂದ ಉಳುವ ಸದ್ದಾಯಿತು. ಜಂತು ವನವರಾಹವೆಂದು ನಿರ್ಧರಿಸಿದೆ. ಏಕೆಂದರೆ ನಾನು ಕುಳಿತ ಅಟ್ಟಣೆ ಸುಮಾರು ಮೂವತ್ತು ಮೂವತ್ತೈದು ಅಡಿಗಳಷ್ಟು ಎತ್ತರವಿದ್ದರೂ ಬೆಟ್ಟ ಇಳಿಜಾರಾಗಿದ್ದುದ್ದರಿಂದ ಓರೆಯಲ್ಲಿ ಮೇಯುತ್ತಿದ್ದ ಸೂಕರ ನಿಕಟಸ್ಥವಾಗಿಯೆ ಇತ್ತು. ನನಗಿದ್ದ ನಯನೇಂದ್ರಿಯ ಶಕ್ತಿಯನ್ನೆಲ್ಲ ಉಪಯೋಗಿಸಿ ಸದ್ದಾಗುತ್ತಿದ್ದ ಕಡೆಗೆ ನೋಡಿದೆ. ಘನೀಭೂತವಾದ ಘೋರಾಂಧಕಾರ ಕಾಳಪಾಷಾಣಭಿತ್ತಿಯೋಪಾದಿಯಲ್ಲಿ ನನ್ನೆದುರು ನಿಂತಿತ್ತು. ವಸ್ತು ಮಾತ್ರವಾದರೂ ಗೋಚರಿಸಲಿಲ್ಲ. ತಿಲಮಾತ್ರವಾದರೂ ಬೆಳಕಿದ್ದರೆ ಅನಾಯಾಸವಾಗಿ ಪ್ರಾಣಿಯನ್ನು ಸುಟ್ಟುಬಿಡಬಹುದಾಗಿತ್ತು.

ಎಲ್ಲಿಯಾದರೂ ಏನಾದರೊಂದು ಸೂಚನೆ ಸಿಗಬಹುದೆಂದು ಹಾರೈಸಿ ಕಣ್ಣು ದಣಿಯುವಂತೆ ಈಕ್ಷಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಹತಾಶವಾಗಿ ಕುಳಿತುಬಿಟ್ಟೆ. ಮನಸ್ಸಿನಲ್ಲೇ ಅಯ್ಯೋ ಎಂದುಕೊಂಡೆ. ತರುವಾಯ ಈ ರೀತಿ ಸಮಾಧಾನ ಮಾಡಿಕೊಂಡೆ ಪ್ರಾಣಿ ಹಣ್ಣುತಿನ್ನುತ್ತ ಇದ್ದರೆ ಸ್ವಲ್ಪ ಹೊತ್ತಿನಲ್ಲಿಯೇ ಚಂದ್ರೋದಯವಾಗುತ್ತದೆ. ಆಗ ಸುಲಭವಾಗಿ ಸುಡಬಹುದು. ಎಂದು ತುಸುಹೊತ್ತು ಕಾದೆ. ಮನಸ್ಸು ತಾಳ್ಮೆಯಿಂದಿರಲಿಲ್ಲ. ಇದರರ್ಥವನ್ನು ಬೇಟೆಗಾರರು ಚೆನ್ನಾಗಿ ತಿಳಿಯಬಹುದು. ಕೈಯಲ್ಲಿ ಬಂದೂಕಿರುವಾಗ ಜಂತು ಸಮೀಪದಲ್ಲಿರುವಾಗ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿದ ಎಂತಹ ತತ್ವಜ್ಞಾನಿಯಾದ ಬೇಟೆಗಾರನಾದರೂ ಕುದಿಯದಿರುವುದಿಲ್ಲ. ರಜೋಗುಣ ಉದ್ದೀಪನವಾಗಿ ವಿಲಯರುದ್ರಸ್ವಭಾವ ತಲೆದೋರುತ್ತದೆ. ಸಂಹಾರಲೋಲುಪತೆಯುಂಟಾಗುತ್ತದೆ. ಕಾರ್ಯಶಕ್ತಿ ಇಮ್ಮಡಿಸುತ್ತದೆ. ಧಮನಿಗಳಲ್ಲಿ ಭೈರವರಕ್ತಧುನಿ ಬೆದೆಗಾಲದ ಹೆಬ್ಬುಲಿಯಂತೆ ತಾಂಡವವಾಡುತ್ತದೆ". (ಕುವೆಂಪು. ಮಲೆನಾಡಿನ ಚಿತ್ರಗಳು. ೨೦೦೫. ಪುಟ ೨೩)

ಬೇಟೆಯೊಂದನ್ನು ಅದರ ಶಬ್ದ ಸಹಚರ್ಯೆಯನ್ನಾಧರಿಸಿ ಕತ್ತಲಿನಲ್ಲೇ ಪತ್ತೆ ಹಚ್ಚುವ ವಿಧಾನವನ್ನು ಲೇಖಕರು ವರ್ಣಿಸುವುದು. ಬೇಟೆಯ ಪ್ರಾಣಿ ಎದುರಿದ್ದ ವೇಳೆ ಆತನ ಮನಸ್ಸಿನಲ್ಲಿ ಉಂಟಾಗುವ ಆಂದೋಲನವನ್ನು, ಅದರ ಉದ್ವೇಶವನ್ನು ಬಣ್ಣಿಸಿರುವುದು ಅವರ ಸ್ವಯಂ ಅನುಭವದಿಂದ ಮಾತ್ರ ಸಾಧ್ಯ. ಅಲ್ಲದೇ ಕುವೆಂಪು ಕೇವಲ ಬೇಟೆಗಾರರಷ್ಟೇ ಅಲ್ಲದೆ ಅವರ 'ಕವಿತ್ವ'ವುಳ್ಳ ಮನಸ್ಸೂ ಕೂಡ ಗಾಢಾಂಧಕಾರದ ಮಧ್ಯೆ ಕಾನನದ ವರ್ಣನೆ ಮಾಡುವಲ್ಲಿ ನಿರತವಾಗುತ್ತದೆ. ಪ್ರಕೃತಿ ಉಪಾಸಕರಾಗಿರುವ ಅವರು ಸೌಂದರ್ಯೋಪಾಸನೆಗೆ ತೊಡಗುತ್ತಾರೆ. ಅಲ್ಲದೆ

ಬೇಟೆಗಾರನಿಗೆ ಬೇಟೆಯಾಗದಿದ್ದರೂ ಕಬ್ಬಿಗನಿಗೆ ಬೇಟೆಯಾಯಿತು ಎಂಬ ಅವರ ಮಾತುಗಳಲ್ಲಿ 'ಪ್ರಕೃತಿ ಪ್ರೇಮ' ವ್ಯಕ್ತವಾಗುತ್ತದೆ.

'ಬಂದನಾ ಹುಲಿರಾಯನು' ಎಂಬ ಅಧ್ಯಾಯ ರಂಗಯ್ಯನಿಗಾಗಿ ರಚಿಸಿದ ಸ್ಮಾರಕ ಶಿಲ್ಪವಾಗಿದೆ. ಅದರಲ್ಲಿ 'ಮರಸು ಬೇಟೆ'ಯ ಅನೇಕ ವಿವರಗಳು ಉಲ್ಲೇಖಗೊಂಡಿವೆ. ಬೇಟೆಗೆಂದು ಮರಸು ಕುಳಿತಾಗ ಅವನು ಅನುಭವಿಸಿದ ಸೊಳ್ಳೆಗಳ ಕಾಟ, ತಾಂಬೂಲ ಹಾಕಿಕೊಳ್ಳುವ ರೀತಿ, ನಶ್ಯ ಸೇದುವ ಸೊಗಸು ಎಲ್ಲವನ್ನು ನವಿರಾಗಿ ವರ್ಣಿಸುತ್ತಾರೆ. ಅಲ್ಲದೆ ಕಣ್ಮುಂದೆ ಕುಳಿತ ಹೆಬ್ಬುಲಿಯನ್ನು ಕಂಡಾಗ ಉಂಟಾದ ಎದೆನಡುಕ, ಆ ಹುಲಿಯ ನಡತೆ, ಹೆಂಡತಿ ಮಕ್ಕಳನ್ನು ನೆನೆದು ಸುರಿಸಿದ ಅಶ್ರುಧಾರೆ, ಹುಲಿಯನ್ನು ಓಡಿಸಲು ಪಟ್ಟ ಪಾಡು, ಅವನ ಸಹನೆ ಎಲ್ಲವನ್ನೂ ನೈಜವಾಗಿ ಚಿತ್ರಿಸಿದ್ದಾರೆ.

"ಚೀಲದಿಂದ ಹತ್ತೆಂಟು ಅಡಕೆಗಳನ್ನು ತೆಗೆದು ಹಸನಾದುದನ್ನು ನಿಧಾನವಾಗಿ ಆರಿಸಿದ. ಆಯ್ದ ಮೇಲೆ ಅದನ್ನು ಒಂದು ಸಾರಿ ಪದ್ಧತಿಯಂತೆ 'ಉಫ್' ಎಂದು ಮೆಲ್ಲಗೆ ಊದಿ ಬಾಯಿಗೆ ಎಸೆದುಕೊಂಡ. ಆದಷ್ಟು ಪ್ರಯತ್ನದಿಂದ ಸದ್ದಾಗದಂತೆ ಕಡಿಯ ತೊಡಗಿದ ತರುವಾಯ ಎಲೆಗಳನ್ನು ತೆಗೆದು, ಒಂದನ್ನು ವರಿಸಿ, ಅದನ್ನು ಚೆನ್ನಾಗಿ ಹಿಂಗೈಯಿಂದ ನೀವಿ ಒರೆಸಿ, ಸಂಪ್ರದಾಯದಂತೆ ಶಿರವನ್ನು ತುಂಡುಮಾಡಿ, ಸುಣ್ಣದ ಡಬ್ಬಿಯಿಂದ ಸುಣ್ಣವನ್ನು ತೆಗೆದು ಬಳಿದು, ನಿಧಾನವಾಗಿ ಎಲೆಯನ್ನು ಮಡಿಸಿ, ಆಲೆಯ ಕಣೆಗೆ ಕಟ್ಟನ್ನು ಕೊಡುವಂತೆ ವಾಯು ಮೂಲೆಯಿಂದ ಎಲೆಯನ್ನು ಒಳಗೆ ತೂರಿಸಿದ. ಆಮೇಲೆ ಹೊಗೆ ಸೊಪ್ಪನ್ನು ತೆಗೆದು ಅಂಗೈ ಮೇಲೆ ಸುಣ್ಣ ಹಚ್ಚಿ ನೀವಲಾರಂಭಿಸಿದ. ಚೆನ್ನಾಗಿ ನೀವಿ ಅದನ್ನು ಕೈಬೆರಳುಗಳಲ್ಲಿ ಚಿಟಿಕೆ ಹಿಡಿದುಕೊಂಡು ಬಾಯಿಗೆ ಹಾಕಿಕೊಳ್ಳಲೋಸುಗ ತಲೆಯನ್ನು ಮೇಲೆತ್ತಿದ". (ಕುವೆಂಪು., ಮಲೆನಾಡಿನ ಚಿತ್ರಗಳು, ೨೦೦೫, ಪುಟ ೪೨)

ಮಲೆನಾಡಿನಲ್ಲಿ ಬೇಟೆಗೆ ಹೋಗುವವರಿಗೆ ಎಲೆ ಅಡಿಕೆ ಹಾಕಿಕೊಳ್ಳುವ, ನಶ್ಯ ಹಾಕಿಕೊಳ್ಳುವ ಚಾಳಿ ಇರುವುದು ಸರ್ವೇ ಸಾಮಾನ್ಯ. 'ಎಲೆ ಅಡಿಕೆ' ಹಾಕಿಕೊಳ್ಳುವುದು ಸಾಮಾನ್ಯ ವಿಷಯವಾದರೂ ಕುವೆಂಪುರವರು ಅದನ್ನು ಇಷ್ಟೊಂದು ರಮಣೀಯವಾಗಿ ಚಿತ್ರಿಸಿರುವುದು ಅವರಲ್ಲಿರುವ ವಿಶಿಷ್ಟತೆಗೆ ಸಾಕ್ಷಿಯಾಗಿದೆ. ಈ ಒಂದು ಸಣ್ಣ ಘಟನೆಯನ್ನೇ ಇಷ್ಟು ಚೆಂದ ಭಾಷೆಯಲ್ಲಿ ಉಪಮೆಗಳ ಮೂಲಕ ಕಟ್ಟಿಕೊಡಲು ಕುವೆಂಪು ಅವರಿಗೆ ಮಾತ್ರ ಸಾಧ್ಯ.

ತೇಜಸ್ವಿಯವರ ಬೇಟೆ ಚಿತ್ರಗಳನ್ನು ಗಮನಿಸಿದಾಗ ಸನ್ನಿವೇಶದ ಕೌತುಕ ಗೌಪ್ಯತೆಯನ್ನೊಳಗೊಂಡ ಅದ್ಭುತ ಅನುಭವಗಳು ಹೊರಹೊಮ್ಮಿವೆ. ಆದರೆ ಕುವೆಂಪು ಚಿತ್ರಿಸಿರುವಷ್ಟು ವರ್ಣಾನಾತ್ಮಕತೆಯನ್ನು ಕಾಣಲು ಖಂಡಿತಾ ಸಾಧ್ಯವಿಲ್ಲ. ಕುವೆಂಪುರವರ ಹೆಚ್ಚುಗಾರಿಕೆ ಇರುವುದೇ ಅಲ್ಲಿ.

ಪೂರ್ಣಚಂದ್ರ ತೇಜಸ್ವಿಯವರೂ ಕೂಡ ತಮ್ಮ ಕತೆ ಕಾದಂಬರಿಗಳಲ್ಲಿ 'ಬೇಟೆ'ಯನ್ನು ಚಿತ್ರಿಸಿದ್ದಾರೆ. ಕುವೆಂಪುರವರ 'ಮಲೆನಾಡಿನ ಚಿತ್ರಗಳು' ಕೃತಿಯಲ್ಲಿ ಹೇಗೋ ಹಾಗೆ ತೇಜಸ್ವಿಯವರ 'ಪರಿಸರದ ಕತೆ' ಬೇಟೆಯ ಅನೇಕ ಪ್ರಸಂಗಗಳನ್ನು ಒಳಗೊಂಡಿದೆ. ತೇಜಸ್ವಿಯವರು 'ಬೇಟೆ' ಎಂಬ ಪದಬಳಕೆ ಗಿಂತಲೂ 'ಶಿಕಾರಿ' ಎಂಬ ಪದವನ್ನು ಹೆಚ್ಚು ಬಳಸುತ್ತಾರೆ. ಕುವೆಂಪುರವರಿಗೆ 'ಬೇಟೆ' ವರ್ಣನಾತ್ಮಕ ವಿಷಯವಾಗಿದ್ದು, ಬೇಟೆಯ ಬಗೆಗಿನ ವಿವರಗಳನ್ನು ಕೃತಿಗಳಲ್ಲಿ ನೀಡಿದ್ದಾರೆ. ತೇಜಸ್ವಿ ಇದಕ್ಕೆ ಭಿನ್ನ. ಇವರು ಚಿತ್ರಿಸಿರುವ ಪ್ರಸಂಗಗಳಲ್ಲಿ 'ಶಿಕಾರಿ'ಯ ಜೊತೆ ಜೊತೆಗೆ ಪರಿಸರದ ಕಾಳಜಿ, ಜೀವ ವೈವಿಧ್ಯಗಳ ಬಗೆಗಿನ ಅವರ ಕುತೂಹಲ, ಅನೂಹ್ಯತೆ, ಪ್ರಶ್ನೆಗಳು –ಇವುಗಳ ಸಂಶ್ಲೇಷಣೆ ಅವ್ಯಾಹತವಾಗಿ ಮುಂದುವರೆಯುತ್ತಾ ಜ್ಞಾನದ ವಿಸ್ತಾರ ಹೆಚ್ಚಿಸುವಂತಿವೆ. ಅಲ್ಲದೆ ಓದುಗರನ್ನು ಚಿಂತನೆಗೀಡುಮಾಡುತ್ತವೆ. 'ಶಿಕಾರಿ' ಎಂಬುದು 'ಬೇಟೆ' ಎಂಬುದಕ್ಕಿಂತ ಹೆಚ್ಚು ವಿಸ್ತಾರ, ಹರವು ಹೊಂದಿದ್ದು, ಬಹುಷಃ ತೇಜಸ್ವಿ ಈ ಕಾರಣದಿಂದಲೇ 'ಶಿಕಾರಿ'ಪದವನ್ನು ಬೇಟೆಗೆ ಪರ್ಯಾಯವಾಗಿ ಬಳಸಿದ್ದಾರೆ.

"ನನ್ನ ಕೈಗೆ ಕೋವಿ ಬರುವ ವೇಳೆಗೆ ಕಾಡು ಪ್ರಾಣಿಗಳೆಲ್ಲಾ ಅವನತಿಯ ಹಾದಿ ಹಿಡಿದಿದ್ದರೂ ಈಗಿನಂತೆ ನಾಮಾವೇಷವಾಗುವ ಸ್ಥಿತಿಗೆ ಇಳಿದಿರಲಿಲ್ಲ. ಕಾಡು ಮೃಗಗಳನ್ನು 'ಜೂ'ಗಳಲ್ಲೂ, ಪುಸ್ತಕದ ಚಿತ್ರಗಳಲ್ಲೂ ಹೆಚ್ಚಾಗಿ ನೋಡಿದ್ದ ನನಗೆ ಮೊದಲ ಸಾರಿಗೆ ಅವು ಕಾಡಿನ ನಿಶ್ಚಲ ಮೌನದಲ್ಲಿ ಕಾಲ ಬಳಿಯ ಪೊದೆಗಳಿಂದಲೇ ಥಿಗ್ಗನೆ ಮಿಂಚಿ ಮಾಯವಾದಾಗ ಆದ ಅನುಭವ ಅಸಾಧಾರಣವಾದದ್ದು. ಅವುಗಳ ಈ ಗೌಪ್ಯತೆಯೇ ನಮಗೆ ಅವುಗಳ ಬಗ್ಗೆ ಅಸಾಧಾರಣ ಕುತೂಹಲ ಹುಟ್ಟಿಸುತ್ತದೆ.!

ಕಿವಿ ಮತ್ತು ನಾನು ಸೇರಿ ಅನೇಕ ಪ್ರಾಣಿಗಳನ್ನು ಶಿಕಾರಿ ಮಾಡಿ ಸ್ವಾಹಾ ಮಾಡಿದ್ದೇವಾದರೂ ಆಗಿದ್ದ ಪ್ರಾಣಿಗಳ ಸಂಖ್ಯೆ ದೃಷ್ಟಿಯಿಂದ ನಮಗೆ ಅವನ್ನು ಶಿಕಾರಿ ಮಾಡಿದೆವಲ್ಲಾ ಎಂದು ಅಷ್ಟೊಂದೇನೂ ಬೇಸರವಾಗುತ್ತಿರಲಿಲ್ಲ. ಇದಕ್ಕೆ ಭಾರತದ ನಶಿಸುತ್ತಿರುವ ವನಸಂಪತ್ತಿನ ಬಗ್ಗೆ ಆಗ ನನಗಿದ್ದ ಅಜ್ಞಾನವೂ ಒಂದು

ಕಾರಣವಿರಬಹುದು. ಒಟ್ಟಿನಲ್ಲಿ ಶಿಕಾರಿಯ ಪಾಪ-ಪುಣ್ಯಗಳೇನೇ ಇರಲಿ. ಇದು ನನಗೆ ಕಾಡಿನ ಬಗ್ಗೆ ಕಾಡು ಪ್ರಾಣಿಗಳ ಬಗ್ಗೆ ನಿಧಾನವಾಗಿ ಆತ್ಮೀಯತೆಯನ್ನು ಬೆಳೆಸಲು ಸಹಾಯವಾಯ್ತೆಂದು ಹೇಳಬಹುದು". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೨)

ಕುವೆಂಪುರವರಂತೆ ತೇಜಸ್ವಿಯವರೂ ಪ್ರಕೃತಿ ಪ್ರಿಯರು. ಇದೇ ಕಾರಣದಿಂದ ಅವರು ಮೈಸೂರನ್ನು ತೊರೆದು ಮೂಡಿಗೆರೆಯ ಪ್ರಕೃತಿ ಮಡಿಲಲ್ಲಿ ತಮ್ಮ ಜೀವಿತವನ್ನು ಕಳೆಯಲು ನಿರ್ಧರಿಸಿದರು. ಈ ಪ್ರಕೃತಿ ಪ್ರೇಮ ಹಾಗೂ ಪರಿಸರ ಪ್ರಜ್ಞೆಗೆ ಮೂಲ ನೆಲೆಯಾಗಿದ್ದು 'ಶಿಕಾರಿ' ಎಂದು ಸ್ವತಃ ಹೇಳಿಕೊಂಡಿದ್ದಾರೆ. ಅಲ್ಲದೆ ಮೇಲಿನ ಸಾಲುಗಳಲ್ಲಿ ವನ್ಯಸಂಪತ್ತಿನ ಬಗೆಗಿನ ನಿಜವಾದ ಕಾಳಜಿ, ಪ್ರಚಲಿತ ವಿದ್ಯಮಾನಗಳ ಬಗೆಗಿನ ವಿಷಾದ ವ್ಯಕ್ತವಾಗಿರುವುದನ್ನು ಕಾಣಬಹುದು.

'ಕಿವಿಯೊಡನೆ ಒಂದು ದಿನ' ಪ್ರಬಂಧದಲ್ಲಿ, ನೆಚ್ಚಿನ ನಾಯಿ ಕಿವಿ ಹಾಗೂ ಗೆಳೆಯ ಶ್ರೀರಾಮರೊಂದಿಗೆ ಶಿಕಾರಿಗೆ ಹೋದ ಸಂಗತಿಯ ಅನಾವರಣವಾಗಿದೆ.

"ಸಾಧಾರಣವಾಗಿ ನಮಗೆ ಸಿಗುತ್ತಿದ್ದುದು ಆಗ ಅಸಂಖ್ಯಾತವಾಗಿರುವ ಕಾಡು ಕೋಳಿಗಳು, ಒಮ್ಮೊಮ್ಮೆ ಕಾಡು ಕುರಿ, ಮೊಲ ಇತ್ಯಾದಿ. ಅಪರೂಪಕ್ಕೆ ಕಾಡು ಹಂದಿ. ನಾವು ಮೂರೇ ಜನರಾದ್ದರಿಂದ ಕಾಡು ಹಂದಿ ಹೊಡೆಯುವುದು ನಮಗೆ ತುಂಬಾ ಕಷ್ಟವಾಗುತ್ತಿತ್ತು. ನಾಯಿಯನ್ನು ಶ್ರೀರಾಮನನ್ನೂ ಕೊಂಚವೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಗುರುಗುಟ್ಟುತ್ತಾ ಹಂದಿಗಳು ಎಷ್ಟೋ ಸಾರಿ ಶ್ರೀರಾಮ್ ಕಾಲ ಬಳಿಯೇ ನುಗ್ಗಿ ಓಡಿಹೋಗಿವೆ.

ಹೊಂಬಣ್ಣದ ಬಿಸಿಲಿನಲ್ಲಿ ಹರಟೆ ಹೊಡೆಯುತ್ತಾ, ಬೆಟ್ಟ ಗುಡ್ಡಗಳನ್ನು ಏರಿಳಿಯುತ್ತಾ ಕುದುರೆಗುಂಡಿ ತೋಟದ ಬಳಿ ಇದ್ದ ಕಾಡಿನ ಕಡೆಗೆ ಹೊರೆಟೆವು. 'ತಾರೆ ಮರ'ಗಳು ಹೂ ಬಿಡುವ ಕಾಲವಾದ್ದರಿಂದ ಇಡೀ ಪರಿಸರವೆಲ್ಲಾ 'ಮತ್ತು'ಹಿಡಿಸುವಂತ ಜೇನಿನ ವಾಸನೆಯಿಂದ ತುಂಬಿಹೋಗಿತ್ತು. ಕುದುರೆಗುಂಡಿ ಬಳಿ ಎರಡು ಬೆಟ್ಟಗಳ ನಡುವೆ ಕಾಡಿನಲ್ಲಿ ಚಿಕ್ಕಹಳ್ಳ ಹರಿಯುತ್ತದೆ. ಹಳ್ಳದ ತೇವಕ್ಕೆ ಅದರ ಇಕ್ಕೆಲಗಳಲ್ಲಿ ದಟ್ಟವಾದ ಕಾಡು ಬೆಳೆದಿತ್ತು. ಬೇಸಿಗೆಯಲ್ಲಿ ಈ ಜಾಗದಲ್ಲಿ ಯಾವಾದರೂ ಕಾಡುಪ್ರಾಣಿಗಳು ಇದ್ದೇ ಇರುತ್ತಿದ್ದವು.

ಶ್ರೀರಾಮ ಆ ಕಾಡಿನ ಒಂದು ತುದಿಯಿಂದ ಕಿವಿ ಬಿಟ್ಟುಕೊಂಡು ಧಡಾಕಿ ಸದ್ದು ಮಾಡುತ್ತಾ ಪ್ರಾಣಿಗಳನ್ನು ಓಡಿಸುತ್ತಿದ್ದರು. ನಾನು ಇನ್ನೊಂದು ತುದಿಯಲ್ಲಿ

ಕೋವಿ ಹಿಡಿದು ನಿಲ್ಲುತ್ತಿದ್ದೆ. ಯಾವುದಾದರೂ ಗ್ರಹಚಾರ ಕೆಟ್ಟ ಪ್ರಾಣಿಗಳು ನಾನಿದ್ದಲ್ಲಿಗೆ ಓಡಿ ಬಂದರೆ ನಾನು ಹೊಡೆಯುತ್ತಿದ್ದೆ. ನಮ್ಮ ವ್ಯೂಹಕ್ಕೆ ವ್ಯತಿರಿಕ್ತವಾಗಿ ಪ್ರಾಣಿಗಳು ಎತ್ತೆತ್ತಲೋ ಓಡಿ ಹೋಗುತ್ತಿದ್ದುದೇ ಹೆಚ್ಚು. ಕೆಲವು ವೇಳೆ ಕಿವಿ ಅತ್ಯುತ್ಸಾಹದಿಂದ ನಾವು ಆ ಜಾಗ ತಲುಪುವ ಮೊದಲೇ ನುಗ್ಗಿ ಪ್ರಾಣಿಗಳನ್ನು ಎತ್ತೆತ್ತಲೋ ಓಡಿಸಿ ಬಿಡುತ್ತಿತ್ತು. ನಮ್ಮ ದುರ್ದೈವಕ್ಕೆ ಆ ಕಾಡಿನಲ್ಲಿ ಯಾವ ಪ್ರಾಣಿಯೂ ಕಾಣಲಿಲ್ಲ. ಶ್ರೀರಾಮ ಕಿವಿ ಇಬ್ಬರೂ ಕೂಗಿಕೊಂಡು ಅಟ್ಟಿ ಅಟ್ಟಿ ಸುಸ್ತಾದರು. ಹೊತ್ತು ಮೇಲೇರಿ ನೆತ್ತಿಯ ಮೇಲೆ ಸೂರ್ಯ ಉರಿಯತೊಡಗಿದ್ದರಿಂದ ಬಿಸಿಲು ನಾವು ಹೊರಟಾಗ ಇದ್ದ ಆಕರ್ಷಣೆ ಕಳೆದುಕೊಂಡಿತ್ತು. ಶಿಕಾರಿ ಹಣೆಬರಹವೇ ಹೀಗೆ. ಹೋಗುವಾಗ ಇರುವ ಉತ್ಸಾಹ ಬರುವಾಗ ಮಾಯವಾಗಿರುತ್ತೆ". (ಪೂರ್ಣಚಂದ್ರತೇಜಸ್ವಿ ಕೆ.ಪಿ., ಪರಿಸರದ ಕಥೆ, ೨೦೦೭, ಪುಟ ೧೩) ಕೊನೆಗೂ ಹಂದಿ ಬೇಟೆಯಾಡಿ ಹೊತ್ತುಕೊಂಡು ಹೋದ ಪರಿಯನ್ನು ವಿನೋದಾತ್ಮಕ ಶೈಲಿಯಲ್ಲಿ ವರ್ಣಿಸಿದ್ದಾರೆ.

ಪರಿಸರದ ಕತೆಯ 'ಮಾಸ್ತಿ ಮತ್ತು ಭೈರ' ಎಂಬ ಅಧ್ಯಾಯದಲ್ಲಿ ಭೂತನ 'ಕಾಡುವಾಸಿ'ಯಾದ ಮಾಸ್ತಿ ಮತ್ತು ಆತನ ತಮ್ಮ ಭೈರ ಇವರ ವೇಷ-ಭೂಷಣ, ಅವರ ಆಹಾರ, ಬೇಟೆಯ ಕ್ರಮ ಮುಂತಾದವುಗಳನ್ನು ಬಣ್ಣಿಸಿದ್ದಾರೆ. ಶಿಕಾರಿ ಸಂಗಾತಿಗಳಾಗಿ ತಮ್ಮೊಡನೆ ಕಾಡು ತಿರುಗಿದ ವಿಚಾರಗಳನ್ನು ಅವರಿಂದ ತಿಳಿದುಕೊಂಡ ಸಂಗತಿಗಳನ್ನು ತಿಳಿಸುತ್ತಾರೆ. ಕೋವಿಯ ಅಗತ್ಯವೇ ಇಲ್ಲದೆ ಶಿಕಾರಿ ಮಾಡುವ ತಂತ್ರಗಳಾದ 'ಉಳ್ಳ' ಹಾಕುವುದು, 'ಸಿಡಿ' ಒಡ್ಡುವುದು, ಕಲ್ಲುಹೇರಿ 'ಅಡುಸಲು' ಒಡ್ಡಿ ಪ್ರಾಣಿಗಳನ್ನು ಹಿಡಿಯುವುದು. ಇವುಗಳ ಬಗ್ಗೆ ತಿಳಿದುಕೊಂಡ ಬಗೆಗೆ ಹೇಳುತ್ತಾರೆ. ಮುಳ್ಳುಹಂದಿ ಬೇಟೆಯಾಡಲು ಹೋಗಿ ಹತಾಶರಾಗಿ ಮರಳಿದ ಸಂಗತಿಗಳನ್ನು ಮೆಲುಕು ಹಾಕುತ್ತಾರೆ. ಅಲ್ಲದೇ ಭೈರನೂ ಮಾಸ್ತಿಯೂ ಅವರ ಶಿಕಾರಿ ನಾಯಿಯನ್ನು ನಡೆಸಿಕೊಳ್ಳುವ ರೀತಿ ಕಂಡು ಜಿಗುಪ್ಸೆ ಪಡುತ್ತಾರೆ. ಭೈರ ಕಾಡು ಹಂದಿ ಹಿಡಿಯಲು ಉಂಡೆ ಇಟ್ಟು ಅದನ್ನು ಅವನ ನಾಯಿ ತಿನ್ನಲು ಹೋಗಿ ಸಿಡಿದು ವಿಲವಿಲನೆ ಒದ್ದಾಡಿ ಸಾಯುವುದು. ಇದರಿಂದ ಕೊಂಚವು ಬೇಸರಿಸದೆ, ದುಃಖಪಡದೆ ಇರುವುದನ್ನು ಕಂಡು ಲೇಖಕರು ಇವರು ಒಳ್ಳೆಯವರೋ ಕೆಟ್ಟವರೋ ಎಂದು ಜಿಜ್ಞಾಸೆಗೆ ಒಳಗಾಗುವುದು, ಎಲ್ಲವೂ ನೈಜವಾಗಿ ಚಿತ್ರಿತವಾಗಿದೆ.

'ಮಾಯಾಲೋಕ'ದಲ್ಲಿ ಹಕ್ಕಿ-ಪಿಕ್ಕಿ ಜನಾಂಗದವರು ಗೌವುಜಲು ಹಕ್ಕಿ, ಕಾಡುಕೋಳಿ, ಬಿಲ್ಲುಕೋಳಿ ಮೊದಲಾದವುಗಳನ್ನು ಹಿಡಿಯಲು ಕಂಡುಕೊಂಡಿರುವ

ಉಪಾಯದ ಬಗ್ಗೆ ತೇಜಸ್ವಿ ಹೇಳುವ ಮಾತುಗಳನ್ನು ಗಮನಿಸಿದಾಗ, ಸ್ವತಃ ತಾವು ಬೇಟೆಯಾಡುವ ವಿವರನ್ನಷ್ಟೇ ಅಲ್ಲದೆ, ಇತರರು ಬಳಸುವ ಬೇಟೆ ತಂತ್ರಗಳ ಬಗೆಗೆ ಅವರ ಆಸಕ್ತಿ ಇರುವುದು ತಿಳಿಯುತ್ತದೆ.

"ಚಿಕ್ಕ ಕೋಲಿನ ಚೌಕಟ್ಟುಗಳನ್ನು ಒಂದರ ಪಕ್ಕ ಒಂದರಂತೆ ಉದ್ದಕ್ಕೆ ಪೊದೆಗಳ ನಡುವೆ ನಿಲ್ಲಿಸುತ್ತಾರೆ. ಪ್ರತಿಯೊಂದು ಚೌಕಟ್ಟಿಗೂ ಒಂದೊಂದು ಉರುಳು ಕಟ್ಟಿರುತ್ತಾರೆ. ಕಾಡುಕೋಳಿ, ಚಿಟ್ಟುಕೋಳಿ, ಮೊದಲಾದ ಹಕ್ಕಿಗಳು ಹಾರಬಲ್ಲವಾದರೂ ಸಾಧಾರಣವಾಗಿ ಗಾಬರಿಯಾದಾಗ ಪೊದೆಗಳೆಡೆಯಲ್ಲಿ ಓಡಾಡುವುದೇ ಹೆಚ್ಚು. ಈ ಕ್ರಮದ ಶಿಕಾರಿ ಹೊಳಲು ಬಹಳ ಸುಲಭವಾಗಿ ಕಂಡರೂ ಈ ತಂತ್ರ ಉಪಯೋಗಿಸಿ ಹಕ್ಕಿ ಹಿಡಿಯಲು ತುಂಬಾ ಪರಿಶ್ರಮ ಮತ್ತು ಜಾಗರೂಕತೆ ಬೇಕು. ಕೋಳಿಗಳು ಕೊಂಚ ಹೆಚ್ಚು ಗಾಬರಿಯಾದರೂ ಓಡುವುದರ ಬದಲು ಒಮ್ಮೆಲೇ ಹಾರಿ ಹೋಗುತ್ತವೆ. ಇಲ್ಲವೇ ಇವರು ಉರುಳು ಒಡ್ಡಿರುವ ದಿಕ್ಕು ತಪ್ಪಿಸಿ ಬೇರೆತ್ತಲೋ ಓಡಿಹೋಗುತ್ತವೆ. ಆದರೆ ಹಕ್ಕಿ ಪಿಕ್ಕಿಯವರೆಲ್ಲಾ ಈ ವಿದ್ಯೆಯಲ್ಲಿ ಎಷ್ಟು ನಿಷ್ಣಾತರೆಂದರೆ ಹಕ್ಕಿಗಳ ಚಲನವಲನಗಳನ್ನು ಸುಲಭವಾಗಿ ಊಹಿಸುವುದೂ ನಿಯಂತ್ರಿಸುವುದು ಅವರಿಗೆ ನೀರು ಕುಡಿದಷ್ಟು ಸುಲಭ ಕಾಡು ಕೋಳಿಗಳನ್ನೂ ಇತರೆ ಹಕ್ಕಿಗಳನ್ನೂ ಉರುಳು ಚೌಕಟ್ಟುಗಳನ್ನಿಟ್ಟಿರುವ ದಿಕ್ಕಿಗೆ ನಿರಾಯಾಸವಾಗಿ ಓಡಿಸಿ ಸುಲಭವಾಗಿ ಹಿಡಿದು ಹಾಕುತ್ತಾರೆ". (ಕೆ.ಪಿ. ಪೂರ್ಣಚಂದ್ರತೇಜಸ್ವಿ ಮಾಯಾಲೋಕ ೧, ೨೦೦೮, ಪುಟ ೪)

ಕುವೆಂಪು ಮತ್ತು ತೇಜಸ್ವಿ ಇಬ್ಬರ ಬೇಟೆ ಚಿತ್ರಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಮಾತ್ರ ನಮಗೆ ಇಬ್ಬರ ಭಿನ್ನ ನಿಲುವುಗಳು ಗೋಚರಿಸುತ್ತವೆ. ಇದಕ್ಕೆ ಕಾರಣ ಕುವೆಂಪು ಹುಟ್ಟಿನಿಂದ ಸಹಜವೆನಿಸುವಂತೆ ಬೇಟೆಯಲ್ಲಿ ತೊಡಗಿರುವುದು. ಅವರಿಗೆ ಬೇಟೆ ಸಹಜ ಸ್ವಾಭಾವಿಕ ಕ್ರಿಯೆ. ಆದರೆ ಅವರೊಳಗಿನ ಕವಿತ್ವ, ಬೇಟೆಯ ಸಂದರ್ಭದಲ್ಲೂ ಪ್ರಕೃತಿಯ ಅಗಾಧ ಸೌಂದರ್ಯ ರಾಶಿಯನ್ನು ಸೆರೆಹಿಡಿಯುವಲ್ಲಿ ನಿರತವಾಗುತ್ತದೆ. ಪ್ರಕೃತಿಯಲ್ಲಿ ದೇವರನ್ನು ಕಾಣುವ ಕುವೆಂಪುರವರಿಗೆ ಇದು ಸಹಜ. ಇವರಿಗೆ ಬೇಟೆ ಆಡಿದ ಪ್ರಾಣಿಯ ಮಾಂಸದ ಆಸೆಯೇ ಮುಖ್ಯ ಎನ್ನುವಂತಿಲ್ಲ. ಏಕೆಂದರೆ ಇವರ ಮುಖ್ಯ ಕಾಳಜಿ ಬೇಟೆಗೆ ಹೊರಟಾಗ ನಿಬಿಡಾರಣ್ಯದಲ್ಲಿ ಪ್ರಕೃತಿ ದೇವಿಯ ಮಡಿಲಲ್ಲಿ ಅಂಡಲೆಯುವುದೇ ಆಗಿದ್ದು, ಉಳಿದುದೆಲ್ಲವೂ ಆನುಷಂಗಿಕ.

ಕುವೆಂಪು ಒಮ್ಮೆ ಇತರ ಬೇಟೆಗಾರರೊಡನೆ ಹಂದಿಬೇಟೆಗೆ ಹೊರಡುತ್ತಾರೆ. ಯಾರು-ಯಾರಿಗೆ ಯಾವ ಯಾವ ತೋಟಾಗಳು, ಅವುಗಳಲ್ಲಿ ಗುಂಡಿನ ತೋಟಾಗಳೆಷ್ಟು, ಕೆಡಕಿನ ತೋಟಾಗಳೆಷ್ಟು, ಚರೆ ತೋಟಾಗಳೆಷ್ಟು ಎಂದು ಹಂಚಿಕೆಯಾಗುತ್ತದೆ. ಹಂದಿ ಹುಲಿಗಳನ್ನಲ್ಲದೆ ಬೇರೆ ಯಾವ ಪ್ರಾಣಿಗಳನ್ನು ಕೊಲ್ಲುವುದಿಲ್ಲ. ಕಾಡುಕುರಿ ಮಿಗ ಇತ್ಯಾದಿ ಅನುಗ್ರ ಪ್ರಾಣಿಗಳನ್ನು ತಾವು ಹೊಡೆಯುವುದಿಲ್ಲ ಎಂದು ವ್ರತ ತೊಟ್ಟಿದ್ದ ಕುವೆಂಪುರವರು ಬರಿಯ ಗುಂಡಿನ ಮತ್ತು ಕೆಡಕಿನ ತೋಟಾಗಳಷ್ಟನ್ನೇ ಸ್ವೀಕರಿಸುತ್ತಾರೆ. ಬಿಲ್ಲಿನವರು ಬೇರೆ ಬೇರೆ ಕಡೆಗೆ ಹಂಚಿಕೊಂಡು ತಾವೊಬ್ಬರೇ ಆದಾಗ ಕುವೆಂಪು ಅವರ ಕವಿತಾ ಪ್ರಜ್ಞೆ ಎಚ್ಚೆತ್ತು ಮೃಗಯಾ ಪ್ರಜ್ಞೆ ಹಿಂಜರಿಯುತ್ತದೆ.

ಈಡಿನ ಸದ್ದು, ಹಳುವಿನವರ ಕಾಕು, ನಾಯಿಗಳ ಬೋಗಳು ಕಿವಿಯ ಮೇಲೆ ಬಿದ್ದಾಗ ಕಿವಿ ನಿಮಿರಿ, ಹುಡುಕುಗಣ್ಣಾಗಿ ಎತ್ತರದ ಬಂಡೆಯ ಮೇಲೆ ನಿಲ್ಲುತ್ತಾರೆ. ಶಿಕಾರಿಗೆ ಹೋದ ಸಮಯದಲ್ಲಿಯೂ ಅವರು Kali the Mother ಎಂಬಂಥ ಗ್ರಂಥಗಳನ್ನು ಓದುತ್ತಿದ್ದುದ್ದಲ್ಲದೆ, 'ಬಡವನೆಂದು ಸುರಲತಿ ನಾಚುವೆನು ದೇವ' ಎಂಬ ಕವಿತೆಯನ್ನು ರಚಿಸುತ್ತಾರೆ. ಕುವೆಂಪುರವರ ಬದುಕಿನಲ್ಲಿ ಹೇಗೋ ಸಾಹಿತ್ಯದಲ್ಲಿ ಬೇಟೆಯ ವರ್ಣನೆ ಹಾಸುಹೊಕ್ಕಾಗಿದೆ. ಅವರ 'ಚಿತ್ರಾಂಗದ' ಕಾವ್ಯದಲ್ಲಿ ಸರಸ್ವತೀ ಸ್ತೋತ್ರದ ನಂತರ ಪ್ರಾರಂಭವಾಗುವುದೇ ಚಿತ್ರಾಂಗದೆಯು ಬೇಟೆಗೆ ಹೊರಡುವ ಪ್ರಸಂಗದಿಂದ. ಬೇಟೆಯೇ ಈ ಕಾವ್ಯಕ್ಕೆ ನಾಂದಿ ಎಲ್ಲ ವಿಮರ್ಶಕರು ಒಪ್ಪುತ್ತಾರೆ. ಅವರ ಎರಡು ಮಹಾ ಕಾದಂಬರಿಗಳಲ್ಲಿ ಬೇಟೆಗೆ ವಿಶೇಷವಾದ ಸ್ಥಾನವಿದೆ. ಮಲೆನಾಡಿನ ಜೀವನ ಚಿತ್ರಣವೇ ಈ ಕಾದಂಬರಿಗಳ ಮುಖ್ಯ ವಸ್ತುವಾಗಿದೆ. ಹಾಗೆಯೇ ಅಲ್ಲಿನ ಸಮಾಜದ ಜೀವಧಾತುವಾದ ಬೇಟೆಯ ವಿಚಾರ ಸಮಪ್ರಮಾಣದಲ್ಲಿಯೇ ವರ್ಣಿತವಾಗಿದೆ. ಬೇಟೆಯ ಸಹಜ ವರ್ಣನೆಯನ್ನು ಕಟ್ಟಿಕೊಡುವ ಕುವೆಂಪು ಮೀನುಶಿಕಾರಿ, ಏಡಿಶಿಕಾರಿ, ಹುಂಡುಕೋಳಿ ಬೇಟೆ, ಹುಲಿ ಬೇಟೆ, ಇತರ ಪ್ರಾಣಿಗಳ ಬಗೆ ಬಗೆಯ ಬೇಟೆಯ ತಂತ್ರಗಳು, ವಿಧಾನಗಳನ್ನು ಚಿತ್ರಿಸುತ್ತಾರೆ.

ಕಾನೂರು ಹೆಗ್ಗಡಿತಿ ಕಾದಂಬರಿಯ ಪ್ರಾರಂಭದಲ್ಲೇ ಚಿನ್ನಯ್ಯನ 'ಮೀನುಶಿಕಾರಿ' ಎದುರಾಗುತ್ತದೆ. 'ಚಿನ್ನಯ್ಯ ಮುತ್ತಳ್ಳಿ ಶಾಮಯ್ಯಗೌಡರ ಮಗ, ಅವನಿಗೆ ಬೇಟೆಯಾದರೆ ಬಹಳ ಪ್ರೀತಿ ಹೊಟ್ಟೆಗೆ ಅನ್ನವಿಲ್ಲದಿದ್ದರೂ ಲಕ್ಷಿಸದೆ

ಕೋವಿಹಿಡಿದು ಕಾಡಿನಲ್ಲಿ ತಿರುಗುವುದೆಂದರೆ ಅವನಿಗೆ ಪರಮಾಹ್ಲಾದ. ಅವನು ಒಳ್ಳೆಯ ಈಡುಗಾರನೂ ಹೌದು'. ಈ ಸಂದರ್ಭದಲ್ಲಿ ಮೀನುಶಿಕಾರಿಗೆ ಚಿನ್ನಯ್ಯನೊಡನೆ ಸ್ವತಃ ನಾವೇ ಕುಳಿತಂತೆ ಭಾಸವಾಗುವಷ್ಟರ ಮಟ್ಟಿಗೆ ಕುವೆಂಪು ಈ ಸನ್ನಿವೇಶವನ್ನು ಚಿತ್ರಿಸಿದ್ದಾರೆ.

"ಮರಿಗಳ ಚಲನೆಯಿಂದ ದೊಡ್ಡ ಮೀನುಗಳು ತನಗೆ ಸಮೀಪವರ್ತಿಯಾಗುತ್ತಿವೆ ಎಂದು ತಿಳಿದು, ಮುಂದೆ ಏನಾಗುವುದೋ ಎಂದು ಅನಿಶ್ಚಯತೆ ಆಶಂಕೆಗಳಿಂದ ಅವನು ಸ್ವಲ್ಪ ಉದ್ವಿಗ್ನನಾಗಿ ನೀರಿನ ಕಡೆಗೆ ಹೆಚ್ಚು ಎಚ್ಚರಿಕೆಯಿಂದಲೂ ತೀಕ್ಷ್ಣತೆಯಿಂದಲೂ ನಿರೀಕ್ಷಿಸ ತೊಡಗಿದರು. ಮರಿಗಳ ಗುಂಪು ಇನ್ನೂ ಬಳಿ ಸಾರಿತು. ಬೇಟೆಗಾರನು ತನ್ನ ನರ ನಾಡಿಗಳೆಲ್ಲ ಬಿಗಿಯುವಂತೆ ಸಮಸ್ತ ಶಕ್ತಿಯನ್ನು ದೃಷ್ಟಿಯೊಂದಕ್ಕೇ ನಿವೇದಿಸಿದನು. ಆಗ ಅವನಿಗೆ ಮೀನು ಮರಿಗಳಿದ್ದ ಆ ಕೆರೆಯಭಾಗವೇ ಸಮಸ್ತ ಜಗತ್ತೂ ಆಗಿ ಹೋಗಿತ್ತು. ಏಕಾಗ್ರತೆಯಿಂದ ಸುತ್ತಲ ಪ್ರಪಂಚದ ಪ್ರಜ್ಞೆಯೇ ಅವನಿಗಿರಲಿಲ್ಲ.

ಸೂರ್ಯತಪ್ತದಿಂದ ಪ್ರಕಾಶಿತವಾಗಿದ್ದ ಆ 'ವನ ಪುಷ್ಕರಣಿ'ಯ ವಾರಿಯಲ್ಲಿ ಒಂದೂವರೆ ಮೊಳುದುದ್ದದ 'ಅವಲು ಮೀನು' ಆಡುತ್ತಿತ್ತು. ಇದ್ದಲಿನಂತೆ ರಕ್ಷಣೆ ಕಾಣಿಸುತ್ತಿದ್ದ ಅದರ ದೇಹದ ಶಿರೋಭಾಗದಲ್ಲಿ ಕಣ್ಣುಗಳೆರೆಡು ಗುಲುಗುಂಜಿಗಳಂತೆ ಕೆಂಪಗೆ ತೋರುತ್ತಿದ್ದವು. ಅದರ ಕಿವಿಗಳ ಪಕ್ಕದಲ್ಲಿಯೂ ಬಾಲದಲ್ಲಿಯೂ ಬೆನ್ನಿನ ಮೇಲೆಯೂ ಇದ್ದ ರೆಕ್ಕೆಗರಿಗಳು ಅತ್ತ ಇತ್ತ ಆಡುತ್ತಾ ಕ್ರೀಡೋನ್ನತವಾಗಿದ್ದುವು. ಅದರ ಲೀಲೆಯಲ್ಲಿ ಒಂದು ವಿಧವಾದ ಧೀರ ಗಾಂಭೀರ್ಯವೂ ಸಾವಧಾನವೂ ಜಾಗರೂಕತೆಯೂ ಸಂಶಯಾಶಂಕೆಗಳು ಮಿಳಿತವಾಗಿದ್ದವು. ಚಿನ್ನಯ್ಯನು ನೋಡುತ್ತಿದ್ದ ಹಾಗೆಯೇ ಮತ್ತೊಂದು ಮೀನೂ ಕಾಣಿಸಿಕೊಂಡಿತು. ಅವನ ಮನಸ್ಸಿನಲ್ಲಿ ಉದ್ವೇಗದೊಡನೆ ಅತ್ಯಾಸೆಯೂ ಉತ್ಪನ್ನವಾಗಿ ಎರಡನ್ನೂ ಒಂದೇ ಕಡೆಗೆ ಸುಡುತ್ತೇನೆಂದು ಹಿಗ್ಗಿದನು. ಆ ಮತ್ಸ್ಯದಂಪತಿ ತಮ್ಮ ಶತಸಂತಾನದ ಸಂಸಾರದೊಡನೆ ಮರದ ಮೇಲೆ ಪ್ರಾಣಹರಣಕ್ಕೆಂದು ತವಕಪಡುತ್ತಾ ದೃಷ್ಟಿಮಾತ್ರನಾಗಿ ಕುಳಿತಿದ್ದ ಚಿನ್ನಯ್ಯನ ರುದ್ರ ಸಾಮೀಪ್ಯವನ್ನು ತಿಲಮಾತ್ರವೂ ಅರಿಯದೆ ವಿಹಾರಾಸಕ್ತವಾಗಿದ್ದವು.

ಇದಕ್ಕಿದ್ದ ಹಾಗೆ ಒಂದು ಮೀನು ನೀರು ಕಚ್ಚಲೆಂದು ಮೇಲೆ ಮೇಲಕ್ಕೇರಿತು. ಚಿನ್ನಯ್ಯನಿಗೆ ಆ ಒಂದೊಂದು ಕ್ಷಣವೂ ಒಂದೊಂದು

ವರ್ಷಾದಂತಾಗಿ ಮತ್ಸ್ಯಗಮನ ಅತ್ಯತಿ ಸಾವಧಾನವಾಗಿ ಕಂಡಿತು. ಅವಲು ಮೀನಿನ ಕಣ್ಣುಗಳನ್ನು ಸುತ್ತಿದ್ದ ಕೆಂಪು ಬಣ್ಣದ ಉಂಗುರುಗಳು ಪ್ರಸ್ಫುಟವಾಗಿ ಗೋಚರವಾದವು. ಮೀನಿನ ತಲೆ ಮೇಲಾಗಿ ದೇಹವು ಇಳಿಯಾಗಿದ್ದರಿಂದ ಅದು ಮೊದಲಿದ್ದುದಕ್ಕಿಂತಲೂ ಸ್ವಲ್ಪ ಗಿಡ್ಡವಾಗಿ ತೋರಿತು. ತೆರೆ ತೆರೆದು ಮುಚ್ಚುವಂತಿದ್ದ ಅದರ ಬಾಯಿಯ ಬಳಿಯಗೆರೆ ಕಾಣಿಸಿಕೊಂಡಿತು. ಚಿನ್ನಯ್ಯ ದೇಹದ ನರಗಳನ್ನೆಲ್ಲ ಬಿಗಿದು, ಉಸಿರುಕಟ್ಟಿ, ರೆಪ್ಪೆ ಹಾಕದೆ ಕೋವಿಯ ಕುದುರೆಯನ್ನೇರಿಸಿ ಬಿಲ್ಲಿಗೆ ಕೈಹಾಕಿಕೊಂಡು ಗುರಿಯಿಟ್ಟು ಅನುವಾದನು. ಮೀನು ನೀರು ಕಚ್ಚಿತು!. ಚಿನ್ನಯ್ಯ ಬಿಲ್ಲು ಎಳೆದನು ! ನೀರು ಈಡಿನ ಆಘಾತದಿಂದ ನಾಲ್ದೆಸೆಗಳಿಗೂ ಸಿಡಿಯಿತು". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೬೮, ಪುಟ ೨೧)

ಬೇಟೆಗೆ ಕುಳಿತವರ ಮನಸ್ಥಿತಿ ಅವರ ಏಕಾಗ್ರತೆ, ಜಾಗರೂಕತೆಗಳನ್ನು ಚಿತ್ರಿಸುವುದು ಸಾಮಾನ್ಯ. ಆದರೆ ಬೇಟೆಗೆ ಗುರಿಯಾಗುವ ಪ್ರಾಣಿಯ ಚಲನವಲನ ವಿಹಾರವನ್ನು ಮನಸ್ಸಿನ ಭಾವನೆಯನ್ನು ಅದರ ಲಾಲಿತ್ಯವನ್ನು ಕಟ್ಟಿಕೊಟ್ಟಿರುವುದು. ಬಹುಷಃ ಕನ್ನಡ ಸಾಹಿತ್ಯಲೋಕದಲ್ಲಿ ಯಾರಿಂದಲೂ ಸಾಧ್ಯವಾಗಿಲ್ಲ. ಇದು ಕೇವಲ ವರ್ಣನೆಯಲ್ಲ, ಕ್ರಿಯಾರೂಪದ ವರ್ಣನೆ.

ಇಂತಹ ವರ್ಣನೆಯ ಕೌಶಲವನ್ನು ತೇಜಸ್ವಿ ತಮ್ಮ ಬೇಟೆಯ ಚಿತ್ರಗಳಲ್ಲಿ ಕಟ್ಟಿಕೊಡಲಾಗಿಲ್ಲ. ಇದಕ್ಕೆ ಕಾರಣ, ಕುವೆಂಪುರವರಿಗೆ ತಮ್ಮ ಶೈಶವಾವಸ್ಥೆ ಯಿಂದಲೇ ಬೇಟೆಯ ಅನುಭವ, ಪರಿಚಯವಿದ್ದದ್ದು. "ನನಗೆ ನೆನಪಿರುವ ಮಟ್ಟಿಗೆ, ಬುದ್ಧಿ ಕಣ್ತೆರೆದ ಕಾಲದಿಂದಲೂ ನಮ್ಮ ಮನೆಯಲ್ಲಿ ಬೇಟೆ ಒಂದು ಸಸಂಭ್ರಮ ವಿಷಯವಾಗಿತ್ತು. ಕೋವಿಗಳು, ಬೇಟೆನಾಯಿಗಳು, ಬೇಟೆಗಾರರು ನನ್ನ ಪ್ರಜ್ಞೆಯ ಬಹುಭಾಗವನ್ನು ಆಕ್ರಮಿಸಿದ್ದವು. ಸಾಮಾನ್ಯವಾಗಿ ಅನುದ್ವಿಗ್ನಕರವೂ ಪ್ರಶಾಂತವೂ ಆಗಿರುತ್ತಿದ್ದ ಬದುಕಿನಲ್ಲಿ ಬೇಟೆಯೊಂದೇ ಕುತೂಹಲಕರವೂ ಉನ್ಮೇಷನಶಾಲಿಯೂ ಆಗಿರುತ್ತಿತ್ತು. ಚಿಕ್ಕವರಾಗಿದ್ದ ನಮ್ಮನ್ನು ಕಾಡಿಗೆ ಕರೆದುಕೊಂಡು ಹೋಗದಿದ್ದರೂ ದೊಡ್ಡಬೇಟೆಗೆಂದು ಜನರೆಲ್ಲ ನೆರೆದು ನಾಯಿಗಳೊಡನೆ ಗುಡ್ಡವೇರಿ ಕಣ್ಮರೆ ಯಾದಾಗ, ನನ್ನ ಕಲ್ಪನೆ ಕೆರಳಿ, ಕಾಡಿನಲ್ಲಿ ನಡೆಯಬಹುದಾದ ವ್ಯಾಪಾರಗಳನ್ನೆಲ್ಲ ಊಹಿಸಿಕೊಂಡು, ಸಂಜೆ ಅವರೆಲ್ಲ ಹಿಂತಿರುಗುವ ತನಕ ಜೀವ ಸೂಜಿಮೊನೆಯೇರಿದಂತೆ ತುಡಿದುಕೊಳ್ಳುತ್ತಿತ್ತು". (ಕುವೆಂಪು., ನೆನಪಿನ ದೋಣಿಯಲ್ಲಿ ೧.

೨೦೦೨, ಪುಟ ೮೪) ಎಂದು ತಮ್ಮ ಬಾಲ್ಯದ ಬೇಟೆಯ ಬಗೆಗಿನ ತಮ್ಮ ತುಡಿತವನ್ನು ಮೆಲುಕು ಹಾಕುತ್ತಾರೆ.

'ಬೇಟೆ'ಗೆ ಹೋಗಲು ಅವರ ಬಾಲ್ಯದ ತುಡಿತ ದೊಡ್ಡವರಾಗುವವರೆಗೆ ಕಾಯದೆ ಬೇಟೆಗಾರರು ಇಲ್ಲದ ಅಥವಾ ಮಲಗಿದ ಸಮಯನ್ನೇ ಹೊಂಚಿ, ಅವರೂ ಕದ್ದು, ಕಾಡಿಡಿದ ಮಲೆಸಾಲಿಗೆ ಹೋಗಿ, ವಾಟಿಯ ಕೊಳವಿಗೆ ಕೋವಿಯ ಮಸಿಯ ಇಡಿದು, ಪ್ರಯೋಗ ನಡೆಸುತ್ತಾರೆ. "ಪುಟ್ಟುವೇ ಬೆಂಕಿಕಡ್ಡಿ ಗೀರಿ, ಕೋವಿ ಮಸಿಗೆ ತಾಗುವಂತೆ ಆನಿಸಿ ಒತ್ತಿಹಿಡಿಯುತ್ತಾರೆ. ಸಿಡಿದ ಮದ್ದು ಅವರ ಅಂಗೈಗೆ ಬಡಿದು ಸುಟ್ಟು ಕರ್ರಗಾಗುತ್ತದೆ". (ಕುವೆಂಪು., ನೆನಪಿನ ದೋಣಿಯಲ್ಲಿ ೧, ೨೦೦೨, ಪುಟ ೮೫)

ಈ ರೀತಿ ಅವರ ಬಾಲ್ಯದಲ್ಲಿ ಪಡೆದ ಬೇಟೆಯ ಅನುಭವಗಳನ್ನು ಅವರ ಕಾದಂಬರಿಗಳಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಮಲೆನಾಡಿನವರಿಗೆ ಶೈಶವದಿಂದಲೇ ಬೇಟೆಯ ಅಭ್ಯಾಸ ರಕ್ತಗತವಾಗುತ್ತದೆ. ಸಬೆಯೋ ಗಾಳವೋ ಉರುಳೋ ಒಡ್ಡಿ ಪಿಕರಾಳ, ಹುರುಸಲು ಹಕ್ಕಿ, ಗಿಜಗ್ಲಾರು ಹಕ್ಕಿ ಮೊದಲಾದುವನ್ನು ಹಿಡಿಯುತ್ತಾರೆ. ಇಂಥ ಬೇಟೆಯಲ್ಲಿ ಗೌಡರ ಮಗ ವಾಸುವಿಗೆ ಆಳುಮಕ್ಕಳು ಪುಟ್ಟ ಗಂಗ ನೆರವು ನೀಡುತ್ತಾರೆ.

"ಗಂಗ ತನ್ನಪ್ಪ ಬೇಲರ ಬೈರನೊಡನೆ ಆಗಾಗ್ಗೆ ಮೀನಿಗಾಗಿ ಹೊಂಡ ತೊಣಕುತ್ತಾನೆ. ಡೋಗರಿಗೆ ಕಪ್ಪಗೋಲು ಹಾಕಿ ಏಡಿಯನ್ನೆಳೆಯಲು ಪ್ರಯತ್ನಿಸುತ್ತಾನೆ. ಡೊಗರಿಗೆ ಕೈ ಹಾಕಿದಾಗ ನೀರು ಹಾವು ಅವನ ಬೆರಳು ಕಚ್ಚಿ, ಕೈಗೆ ಸುತ್ತಿಕೊಂಡದ್ದೂ ಉಂಟು. ಬೈರ ಮಗನಿಗೆ ಕಳುಕು ನೀರು ಕುಡಿಸಿ ಮದ್ದುಮಾಡಿ, ಕೆಸರು ಸೋಸಿ ಮೀನು ಹಿಡಿಯುವುದರಲ್ಲಿ ಮಗ್ನನಾಗುತ್ತಾನೆ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೬೮, ಪುಟ ೨೮೪)

ಕಾಡು ಪ್ರಾಣಿಗಳ ಬೇಟೆಯಲ್ಲಿ, ಬೇಟೆನಾಯಿಗಳ ಪಾತ್ರ ಎಷ್ಟು ಪ್ರಮುಖ ಎಂಬ ವಿಚಾರ 'ಕತ್ತಲೆಗಿರಿಯ ಸರುವಿನಲ್ಲಿ ಕಾಡು ಹಂದಿಯ ಬೇಟೆ' ಎಂಬ ಅಧ್ಯಾಯದಲ್ಲಿ ತಿಳಿಯುತ್ತದೆ. ಬೇಟೆಗಾರನಿಗೆ ನಾಯಿಗಳೆಂದರೆ ಪ್ರಾಣ. ಅದರಲ್ಲಿಯೂ ಚೆನ್ನಾಗಿ ಶಿಕಾರಿ ಮಾಡುವ ನಾಯಿಗಳನ್ನು ಬಂಧು ಮಮತೆಯಿಂದ ಕಾಣುತ್ತಾನೆ. ಅವುಗಳಿಗೂ ತನ್ನಂತೆಯ ವ್ಯಕ್ತಿತ್ವವಿದೆ ಎಂಬುದರಲ್ಲಿ ಅವನಿಗೆ ಸ್ವಲ್ಪ ಮಾತ್ರವೂ ಸಂದೇಹವಿರುವುದಿಲ್ಲ. ನಾಯಿಗಳಿಗಾಗುವ ಅಪಾಯವೂ ತನ್ನ

ಅಂಗಗಳಿಗಾದ ಅಪಾಯದಂತೆ ಭಾವಿಸುತ್ತಾನೆ. ಈ ಕಾದಂಬರಿಲೋಕದಲ್ಲಿ 'ಪುಟ್ಟಣ್ಣನು ಇಟ್ಟ ಗುರಿ ತಪ್ಪದು' ಎಂಬುದು ಜನರ ಅನುಭವದ ಮಾತು.

"ಅವನು ಎಲ್ಲಿಗೆ ಬೇಕಾದರಲ್ಲಿಗೆ ಹೋಗುತ್ತಾನೆ. ಅವನಿಗೆ ರಾತ್ರಿ ಹಗಲು ಎಲ್ಲವೂ ಒಂದೇ ಕಾಡಿನಲ್ಲಿ ಯಾವಾಗೆಂದರೆ ಅವಾಗ ಅಲೆಯುತ್ತಾನೆ. ಅವನು ಕೋವಿ ಹೊಡೆದನೆಂದರೆ ಇಟ್ಟ ಗುರಿ ತಪ್ಪುವುದಿಲ್ಲ. ಕಣೆಹಂದಿ, ಹಂದಿ, ಹುಲಿ, ಹಾವು ಮೊದಲಾದ ಕಾಡುಪ್ರಾಣಿಗಳೆಂದರೆ ಅವನಿಗೆ ಹೆದರಿಕೆಯಿಲ್ಲ. ಅವನಿಗೆ ಬದುಕಿನ ಜವಾಬ್ದಾರಿಯೂ ಇಲ್ಲ; ಸಾವಿನ ಜವಾಬ್ದಾರಿಯೂ ಇಲ್ಲ. ಹೆಂಡರಿಲ್ಲ, ಮಕ್ಕಳಿಲ್ಲ; ಭೂಮಿಯಿಲ್ಲ, ಕಾಣಿಯಿಲ್ಲ. ಏನೂ ಇಲ್ಲದಿದ್ದರೂ ಎಲ್ಲವನ್ನೂ ಪಡೆದವನಂತೆ ಸ್ವತಂತ್ರ, ಸುಖಿ. ಮಂಗಟ್ಟೆ ಹಕ್ಕಿ ಕೂಗುವಂತೆ ಕೂಗುತ್ತಾನೆ. ಕಾಡುಕೋಳಿಗಳನ್ನು ಅವು ಕೂಗುವಂತೆ ಕೂಗಿ ಕರೆದು ಬಂದೂಕಿನಿಂದ ಹೊಡೆಯುತ್ತಾನೆ!" (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೩೫೫)

ಇಲ್ಲಿ ಪುಟ್ಟಣ್ಣನಂತೆ, 'ಕರ್ವಾಲೋ'ದಲ್ಲಿ ಮಂದಣ್ಣ ತನ್ನ ವ್ಯಕ್ತಿ ವಿಶಿಷ್ಟತೆಯಿಂದ ಬೆಳಗುತ್ತಾನೆ. ಪರಿಸರದ ಮಧ್ಯೆ ಸಾಮಾನ್ಯ ವ್ಯಕ್ತಿಯಂತೆ ಬದುಕಿರುವ ಅವನಲ್ಲಿ ಪ್ರಕೃತಿಯ ಅಗಾಧ ನಿಗೂಢಗಳ ಜ್ಞಾನ ಇರುತ್ತದೆ. ಕಾಡಿನಲ್ಲಿ ಅಲೆದಾಡಿ ಹುಳುಹುಪ್ಪಡಿಗಳನ್ನು ಹಿಡಿಯುತ್ತಾ, ಪಶು ಪಕ್ಷಿಗಳನ್ನು ನೋಡುತ್ತಾ ಅಲೆದಾಡುವ ಮಂದಣ್ಣನು ಕರ್ವಾಲೋರ ದೃಷ್ಟಿಯಲ್ಲಿ ದೇಶೀಯ ಜ್ಞಾನವುಳ್ಳ ಶ್ರೇಷ್ಠ 'ಪ್ರಕೃತಿ ಶಾಸ್ತ್ರಜ್ಞ' ಉಳಿದೆಲ್ಲ ಜನರ ದೃಷ್ಟಿಯಲ್ಲಿ ಅವನು ಕೆಲಸವಿಲ್ಲದ ನಿರುಪಯುಕ್ತ ಅಲೆಮಾರಿ.

ಕುವೆಂಪುರವರ ಕಾದಂಬರಿಗಳಲ್ಲಿ ಬೇಟೆಯ ಪ್ರಸಂಗಗಳು ಮುಖ್ಯ ಕಥೆಯ ಅಂಗವಾಗಿ ಅದರ ಹರಿವಿಗೆ ಅಡಚಣೆಯಾಗದಂತೆ ಬರುವುದು ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶ. 'ಏಡಿಷಿಕಾರಿ'ಗೆ ಹೋದ ಬೈರ ಸಿದ್ದರು ಕಾನೂರು ಮನೆಯ ರಂಪರಾದ್ಧಾಂತದ ಬಗ್ಗೆ ಮಾತನಾಡಿಕೊಳ್ಳುವ ಪ್ರಸಂಗ ನೋಡಿದಾಗ ಚಂದ್ರಯ್ಯಗೌಡ, ಸುಬ್ಬಮ್ಮ ಸೀತಮ್ಮ ಮುತ್ತಳ್ಳಿ ಗೌಡರ ನಡತೆಗಳು ಬಾಹ್ಯಲೋಕಕ್ಕೆ ಗೊತ್ತಾಗುತ್ತವೆ. ಏಡಿಷಿಕಾರಿಯಷ್ಟೇ ಆ ಮನೆಯ ವ್ಯವಹಾರಗಳೂ ಅವರಿಗೆ ಮುಖ್ಯವಾಗುತ್ತವೆ. ಭೋಗಿಗಳಿಗೆ ಬೇಟೆ ವಿನೋದದ ವಿಹಾರವಾದರೆ, ರೈತರಿಗೆ ಬಡವರಿಗೆ ಆತ್ಮರಕ್ಷಣೆಯ, ಹೊಲಗದ್ದೆ ತೋಟಗಳ ಕಾಪಿನ, ಹೊಟ್ಟೆ ಪಾಡಿನ ಸಾಧನ ಎಂಬುದನ್ನು ಕುವೆಂಪು ಚಿತ್ರಿಸಿದ್ದಾರೆ.

ಬೇಟೆಯಿಂದೊದಗುವ ಅನಾಹುತಗಳನ್ನು ಕುವೆಂಪು ಮತ್ತು ತೇಜಸ್ವಿ ಇಬ್ಬರೂ ಚಿತ್ರಿಸುತ್ತಾರೆ. ಬೇಟೆಯಿಂದಾಗುವ ಆಕಸ್ಮಿಕ ಅಪಾಯಗಳು ಅನಾಹುತಗಳು ಕರುಣಾಜನಕ ಪ್ರಸಂಗಗಳನ್ನು ವಸ್ತುವಾಗಿ ಒಳಗೊಂಡಂತೆ 'ಮರಸುಬೇಟೆ' ಹಾಗೂ 'ರಕ್ತರಜನಿ' ಎಂಬ ಕಥನ ಕವನಗಳನ್ನು ಕುವೆಂಪು ರಚಿಸಿದ್ದಾರೆ. ಏಳು ವರ್ಷದ ಬಾಲಕ ಬೇಟೆಗೆ ಹೊರಟ ತಂದೆಯೊಡನೆ ಬರುವುದಾಗಿ ಹಟಹಿಡಿಯುತ್ತಾನೆ. ಬೇಡವೆಂದು ಹೇಳಿ ತಂದೆ ಮುಂದೆ ಸಾಗುತ್ತಾನೆ. ಬಾಲಕ ತಂದೆಯನ್ನೇ ಹಿಂಬಾಲಿಸುತ್ತಾನೆ. ಕೊಲೆಯ ಕೋವಿಯ ತಪದೊಳಿದ್ದ ಆ ಜಾಣ ಗುರಿಕಾರ 'ಬೇಟೆಮಿಗ'ವೇ ಇರಬೇಕೆಂದು ಚಿಲ್ಲನ್ನೊತ್ತುತ್ತಾನೆ. ಕೋವಿಯ ಕೇಪು ಕೆಟ್ಟಿರಲಾಗಿ, ಕಿವಿಗೆ ಮಸಿ ಬರದಿರಲಾಗಿ ಅವನ ಕಂದನ ಪ್ರಾಣ ಉಳಿಯುತ್ತದೆ. ಅವನಲ್ಲಿನ ಮೃಗತ್ವ ನಶಿಸಿ, ತನ್ನ ಕಂದನ ಜೀವದಂತೆಯೆ ಇತರ ಜೀವಿಗಳೆಂದು ಬೇಟೆಯ ತೊರೆದು ಅಹಿಂಸೆಯ ವ್ರತವನ್ನು ಆಚರಿಸುತ್ತಾನೆ. 'ರಕ್ತರಜನಿ'ಯ ಪ್ರಮುಖ ವಸ್ತುವು ಶಬ್ದವೇಧಿ ವಿದ್ಯೆಯ ಬಲದಿಂದ ಮುನಿ ಕುವರನನ್ನು ಕೊಂದ ದಶರಥನ ಪರಿತಾಪ ಹಾಗೂ ಪಶ್ಚಾತಾಪದ ಸಂಗತಿಯೇ ಆಗಿದೆ. ಅಲ್ಲದೇ ಇದೇ ಬಗೆಯ ಪ್ರಸಂಗವೊಂದು 'ಮಲೆನಾಡಿನ ಚಿತ್ರಗಳು' ಕೃತಿಯಲ್ಲಿದೆ. ಈ ಕೃತಿಯಲ್ಲಿ . ಪುಟ್ಟಾಚಾರಿ ನಡುರಾತ್ರಿಯಲ್ಲಿ ನಿದ್ದೆಯಿಂದೆದ್ದು ಅರೆ ಬರೆ ಜ್ಞಾನದಲ್ಲಿ ಕಡವೆ ಬಂತೆಂದು ಶೇಷಣ್ಣನ ಗಾಡಿಯ ಎತ್ತುಗಳಿಗೆ ಗುಂಡು ಹೊಡೆದು ಎತ್ತೆರೆಡೂ ಸತ್ತು ಬಿದ್ದದ್ದನ್ನು ಕಂಡು ಪಶ್ಚಾತಾಪದಿಂದ ಇಡೀ ಜೀವನಪೂರ ನರಳುವ ಚಿತ್ರಣವೂ ಕರುಣಾಪೂರಿತವಾಗಿದೆ.

ತೇಜಸ್ವಿಯವರು ತಮ್ಮ 'ಸ್ವರೂಪ' ಕಾದಂಬರಿಯಲ್ಲಿ ಮಲೆನಾಡಿಗೆ ಬಂದ ಶ್ರೀನಿವಾಸ ತನ್ನ ಬದುಕಿನ ಅಮುಖ್ಯ, ಅರ್ಥಹೀನ, ತಾರ್ಕಿಕ ವಿವರಗಳನ್ನು ನೀಡಲು ತನ್ನ ಶಿಕಾರಿಯ ಅನುಭವಗಳನ್ನು ವಿವರಿಸುತ್ತಾನೆ. ಹಂದಿಯನ್ನು ಬೇಟೆಯಾಡುವಾಗ ಹಂದಿಯೆಂದು ಭಾವಿಸಿ ಜೊತೆಯ ಬೇಟೆಗಾರನೊಬ್ಬನನ್ನು ತಾನು ಗುಂಡಿಕ್ಕಿ ಕೊಂದ ಸಂಗತಿ. ಹಾಗೂ ಚಿಲ್ಲರ ತಿಮ್ಮಯ್ಯನಿಗೆ ಹಂದಿ ತಿಬದು ಕೋರೆ ನಾಟಿದ್ದರಿಂದ ದೃಷ್ಟಿ ಮಂಜಾಗಿ ಪಡುತ್ತಿರುವ ಪಾಡನ್ನು ಚಿತ್ರಿಸುತ್ತಾರೆ.

ಅಲ್ಲದೇ ಈ ಎರಡು ಶಿಕಾರಿಯ ಸಂದರ್ಭಗಳಲ್ಲೂ ಬೇಟೆಗೆ ಗುರಿಯಾದದ್ದು ಪ್ರಾಣಿಯಲ್ಲ. 'ಮನುಷ್ಯ' ಎಂಬುದು ವಿಷಾದ. ಹಂದಿಯೆಂಬ ಭ್ರಮೆಯಲ್ಲಿ ಮನುಷ್ಯನೊಬ್ಬನನ್ನು ಕೊಲೆ ಮಾಡಿ. ತಾನು ಪ್ರಭಾವ ಶಾಲಿಯಾದ್ದರಿಂದ ಆ

ಕೊಲೆಯನ್ನು ವ್ಯವಸ್ಥಿತವಾಗಿ ಮುಚ್ಚಿಹಾಕುತ್ತಾನೆ. ಕೊಲೆಯ ಪಾಪಪ್ರಜ್ಞೆ ಅವನನ್ನು ನಿರಂತರವಾಗಿ ಬಾದಿಸುತ್ತಲೇ ಇರುತ್ತದೆ. ಹೀಗೆ ಬೇಟೆ ಮಲೆನಾಡಿನ ಬದುಕಿನ ಭಾಗವಾಗಿದ್ದರೂ ಅದರಿಂದಾಗುವ ಅನಾಹುತಗಳು ಅಪಾರ. ಅವು ವ್ಯಕ್ತಿಯನ್ನು ಹೇಗೆ ಬಾಧಿಸುತ್ತವೆ ಎಂದು ಚಿತ್ರಿಸುವಲ್ಲಿ ಕುವೆಂಪು ಹಾಗೂ ತೇಜಸ್ವಿ ಇಬ್ಬರಲ್ಲೂ ಸಾಮ್ಯತೆಯನ್ನು ಕಾಣಬಹುದು.

ತೇಜಸ್ವಿ ಹಾಗೂ ಕುವೆಂಪುರವರ ಕೃತಿಗಳಲ್ಲಿ ವ್ಯಕ್ತವಾಗಿರುವ 'ಬೇಟೆಚಿತ್ರಣ'ಗಳಲ್ಲಿ ಹಲವು ಸಾಮ್ಯತೆಗಳಿದ್ದರೂ, ಬೇಟೆಯ ಬಗೆಗಿನ ಇಬ್ಬರ ಚಿಂತನೆ, ಅನುಭವಗಳಲ್ಲಿ ಭಿನ್ನತೆಯನ್ನು ಕಾಣಬಹುದು. ಕುವೆಂಪು ಹಾಗೂ ತೇಜಸ್ವಿ ಇಬ್ಬರಲ್ಲೂ 'ಬೇಟೆ' ಎಂಬುದು ಕೇವಲ ನೆಪ. ಅದರಾಚೆಗೆ ಅವರಿಗಿದ್ದ ಒಲವೆಂದರೆ, ನಿಸರ್ಗವನ್ನು ಮನದಣಿಯ ನೋಡಿ ತಣಿಯುವುದು. ಅದರ ರಹಸ್ಯಗಳನ್ನು ಅಚ್ಚರಿಗಣ್ಣಿನಿಂದ ವೀಕ್ಷಿಸುತ್ತಾ ತಮ್ಮನ್ನು ತಾವೇ ಮೈಮರೆಯುವ ಮನಸ್ಥಿತಿ ಇಬ್ಬರದು. ಕಾಡಿನ ಬಗ್ಗೆ ಅಲ್ಲಿನ ಪಶುಪಕ್ಷಿಗಳ ಬಗ್ಗೆ, ಶಿಕಾರಿಯ ಬಗ್ಗೆ ತೇಜಸ್ವಿಯವರಿಗೆ ಇದ್ದ ಆಸಕ್ತಿ ಅಗಾಧವಾದುದು. ಪ್ರತಿಯೊಂದು ವಿಷಯದಲ್ಲೂ ಅವರ ಕುತೂಹಲ ಪ್ರವೃತ್ತಿ ಜಾಗೃತವಾಗಿಯೇ ಇರುತ್ತದೆ. ಅವರ 'ಬೇಟೆಚಿತ್ರ'ಗಳ ಮಧ್ಯೆಯೂ ಪರಿಸರದ  ಕುರಿತಾಗಿ ಮಾಡುವ ಚಿಂತನೆಗಳು, ತರ್ಕಗಳನ್ನು ಕುವೆಂಪುರವರ ಕೃತಿಗಳಲ್ಲಿ ಕಾಣಲು ಸಾಧ್ಯವಾಗುವುದಿಲ್ಲ.

ತೇಜಸ್ವಿಯವರು 'ಸ್ವರೂಪ' ಕಾದಂಬರಿಯಲ್ಲಿ 'ಶಿಕಾರಿ' ಎಂಬುದು ಜನರನ್ನು ವ್ಯಸನಪೀಡಿತರನ್ನಾಗಿ ಮಾಡಿ ಸೋಮಾರಿಗಳನ್ನಾಗಿ ಮಾಡುತ್ತದೆ ಎಂಬುದನ್ನು ಚಿತ್ರಿಸುತ್ತಾರೆ.

"ಶಿಕಾರಿಯಿಂದ ಸದಾ ಮೃಗಯಾವ್ಯಸನ ಪೀಡಿತರಾಗಿ ಯಾವುದೋ, ಹಣ್ಣಿನ ಮರದಡಿಯೋ, ಯಾವುದೋ ದಾಟುಗಂಡಿಯೋ, ಯಾವುದೊ ನೀರಿಗೆ ಬರುವ ಜಾಗದಲ್ಲೇ ಕುಳಿತು ಜೀವಮಾನವನ್ನು ಪೋಲು ಮಾಡುತ್ತಾರೆ ಈ ಜನ. ಪೋಲು ಮಾಡುವುದೆಂದೆ, ಅದರ ಬದಲು ಕಾಲ ಕಳೆಯುತ್ತಾರೆಂದರೆ ಸರಿ ....ಆವತ್ತಿನ 'ಶಿಕಾರಿ' ಮುಂದೆ ಒಂದು ತಿಂಗಳು ಸೋಮಾರಿತನದ ಕಾಲ ಕಳೆಯಲಿಕ್ಕೆ ಹುರುಪು ಕೊಡುತ್ತದೆ. ಇದು ಬರ್ಕನ ಹೆಜ್ಜೆ, ಇದು ಹಂದಿ ಹೆಜ್ಜೆ; ಇದು ಹಾಡಲಕ್ಕಿಗಳ ಕಾಲ, ಇದು ಹಂದಿಗಳು ಕೊಬ್ಬಿರುವ ಕಾಲ ಎಂದು ಏನೇನೋ ನೂರೆಂಟನ್ನು ಹೇಳಿಕೊಂಡು ಕಾಯುತ್ತಾರೆ. ಹೊಲಗದ್ದೆ ಗೇಣಿಗೆ ಕೊಡುತ್ತಾರೆ.

ಆರ್ದ್ರಮಳೆ ಕಾಲಕ್ಕೆ ಸರಿಯಾಗಿ ಬರಲಿಲ್ಲ, ಗದ್ದೆಗೆ ನಟ್ಟಿಗೆ ನೀರಾಗಲಿಲ್ಲ ಎಂದು ಗದ್ದೆಯನ್ನೇ ಹಾಳು ಮಾಡಿ ಬಿಡುತ್ತಾರೆ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಸ್ವರೂಪ, ೨೦೦೯, ಪುಟ ೭೩)

ಇದಕ್ಕೆ ವ್ಯತಿರಿಕ್ತವಾಗಿ ಶಿಕಾರಿ ವ್ಯಸನ ಅಂಟಿಕೊಂಡವನ ಮನಸ್ಥಿತಿಯನ್ನು ಕೂಡ ತೇಜಸ್ವಿ ಬಹಳ ನೈಜವಾಗಿ ಚಿತ್ರಿಸುತ್ತಾರೆ. "ಶಿಕಾರಿ ಒಂದು ಅನಂತವಾದ ಜೂಜು. ಸುಮ್ಮನೆ ಕುಳಿತು ಕಾಡಿನ ಅಗಾಧ ಮೌನವನ್ನು ನಿಟ್ಟಿಸುತ್ತಿರಬೇಕು. ಕಾಲ ಸರಿಯುತ್ತದೆ. ಏನೋ ಕೂಗುತ್ತದೆ. ಏನೋ ಸರಸರ ಎನ್ನುತ್ತದೆ. ನಿನ್ನ ಎದೆಯಲ್ಲಿ ರಕ್ತ ಬಿಸಿಯಾಗುತ್ತದೆ. ಎದುರಿಗಿನ ಪೊದೆಯಾಚೆಗೆ ಸುಮ್ಮನೆ ನಿಟ್ಟಿಸುತ್ತೀಯ. ತಲೆಯೊಳಗೇ ಒಂದು ದೊಡ್ಡ ಕೊಬ್ಬಿದ ಹಂದಿ ಅಲ್ಲಿಂದ ಬರುವುದು ಕಾಣುತ್ತದೆ. ಕಲ್ಪನೆಯನ್ನು ಹಾಗೇ ಸಾಕ್ಷಾತ್ಕರಿಸಿಕೊಳ್ಳಲು ಆ ಪೊದೆಗೂ ಇನ್ನೊಂದು ಪೊದೆಗೂ ನಡುವೆ ಇರುವ ಶೂನ್ಯವನ್ನೇ ನಿಟ್ಟಿಸುತ್ತೀ. ಆದರೆ ನಿನ್ನ ತಲೆಯ ರೆಂಬೆಯನ್ನು ಚಾಚಿರುವುದು ಸ್ವರ್ಗದ ಕಲ್ಪವೃಕ್ಷವಲ್ಲ, ಸದ್ದಾಗುವುದು ಹಾಗೇ ನಿಂತು ನಿಂತು ಹೋಗುತ್ತದೆ. ಏನೋ ಚಿಟ್ಟಳಿಲೋ ಹಕ್ಕಿಯೋ ಇರಬೇಕೆಂದುಕೊಳ್ಳುತ್ತೀಯೆ, ಹಾಗೆ ನಿನ್ನ ಕಲ್ಪನೆ ಬಾಡುತ್ತದೆ. ಮಾಸುತ್ತದೆ. ಕೊನೆಗೆ ಅಳಿಸಿಯೇ ಹೋಗುತ್ತದೆ. .....ಶಿಕಾರಿ ಒಂದು ವ್ಯಸನ. ಅದೊಂದು ಆಲೋಚನೆಗೆ ಹತ್ತುವ ಚಟ. ಆದರೆ ಶಿಕಾರಿಯನ್ನು ಕಂಡರೆ ನನಗೆ ಇಷ್ಟ. ಏಕೆಂದು ನನಗೆ ಸರಿಯಾಗಿ ಗೊತ್ತಿಲ್ಲ. ಮಾಂಸದಾಸೆಗಂತೂ ಅಲ್ಲ. ಇನ್ನು ಕಾಲ ಕಳೆಯಬಹುದೆಂದೇನೋ ಇರಬಹುದು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಸ್ವರೂಪ, ೨೦೦೯, ಪುಟ ೭೭)

ತೇಜಸ್ವಿ ಅವರಿಗೆ ಮೀನುಶಿಕಾರಿ ಅತೀವ ಆಸಕ್ತಿ ವಿಷಯವಾಗಿತ್ತು ಎಂಬುದನ್ನು "ನನ್ನ ತೇಜಸ್ವಿ" ಕೃತಿಯಲ್ಲಿ ರಾಜೇಶ್ವರಿ ತೇಜಸ್ವಿ ಹಂಚಿಕೊಂಡಿದ್ದಾರೆ.

"Fishing ಹವ್ಯಾಸ ಒಂದು ಥರ ನಿರಪಾಯಕಾರಿ ಜೂಜಿನಂತೆ. ಗಾಣಕ್ಕೆ ಕಪ್ಪೆಯನ್ನು ಎರೆಹುಳುನೋ ಅಥವಾ ಸಣ್ಣ ಪುಡಿ ಮೀನೋ ಸಿಕ್ಕಿಸಿ ನದಿಯಲ್ಲಿನ ಗುಂಡಿಗೆ ಹಾಕಿ ಕೂತವನ ಮನಸ್ಥಿತಿಯೇ ಬೇರೆ. ಈಗ ಸಿಗಬಹುದು ಇನ್ನೇನು ಮೀನು ಹೊಡೆಯುತ್ತೆ ಎಂದು ನಿರೀಕ್ಷಿಸುತ್ತಾ ದಂಡೆ ಮೇಲೆ ಕೂತಿರುವನಿಗೆ ಸಣ್ಣ ಮೀನಾದರೂ ಸರಿ, ಗಾಣಕ್ಕೆ ಸಿಕ್ಕಿಸಿದ ಆಹಾರ ಚೂರು ಜಗಿದು ಮೀನು ಕುಟುಕಿದ ಹೊಡೆತಕ್ಕೆ ಇವನ ಎದೆ ಕುಟಕಕ್ಕೆ ಶುರು. ಇಲ್ಲಿಂದ Thrilling pointಗೆ ಇವನ ಹೃದಯ ಮೀಟಕ್ಕೆ ಶುರು. ನನಗಾಗಿ ಇದೆ ಆ ಎರೆ ಹುಳು ಎಂದು ತಿಳಿದು ಮೀನು

ಬರುತ್ತೆ. ದಂಡೆ ಮೇಲೆ ನಿನಗಾಗಿ ಕಾಯುವವನೊಬ್ಬ. ನನಗಾಗಿ ನೀನು, ನಿನಗಾಗಿ ನಾನು ಪೈಪೋಟಿ. ದಡಕ್ಕೆ ಮೀನು ಬಂದು ಬೀಳುವವರೆಗೂ ಚುರುಕುತನ ಬೇಕು. ಏಕಾಗ್ರತೆ ಬೇಕು. ಮೀನು ಹೊಡೆದಾಗ ನೀರಿನಲ್ಲಿ ಮೂಡುವ ಚಿತ್ರಣವೇ ಬೇರೆ. ನಮ್ಮ ಮನಸ್ಸಿದಂತೆ ಏಕಾಂತತೆ ಅನುಭವಿಸಿಕೊಂಡಂತೆ ಆ ಕ್ಷಣಕ್ಕೆ ಧ್ಯಾನದ ಸ್ಥಿತಿಯಂತೆ.

ತೇಜಸ್ವಿಗೆ ನದಿ ದಂಡೆಯಲ್ಲಿ ಕೂರುವುದು ಮೀನೊಂದೇ ಆಕರ್ಷಣೆ ಆಗಿರಲಿಲ್ಲ. ಕಾಡಿನ ಮಧ್ಯೆ ಕೂರುವುದು ದೊಡ್ಡ ಆಕರ್ಷಣೆ.... ತೇಜಸ್ವಿ ಮಾತಾಡದೆ ಮೌನವಾಗಿ ಸುಮ್ಮನೆ ನಡೆದುಕೊಳ್ಳುವರು ಕಾಡಿನ ಮಧ್ಯೆ. ಅಲ್ಲಿನ ಕಾಡು ನಿಗೂಢ ಆ ಏಕಾಂತತೆ ಎಂಥವರಿಗೂ ಭಯ ಉಂಟು ಮಾಡುವಂತಿತ್ತು. ನೋಡ್ತ ನೋಡ್ತ ಧನ್ಯತೆ ಭಾವ ಬರುತ್ತಿತ್ತು. ನದಿಯಲ್ಲಿನ ಪ್ರಶಸ್ತವಾದ ಗುಂಡಿ ಹುಡುಕಿ ಗಾಣಹಾಕಿ ಕುಳಿತರೆ ಇವರಿಗೆ ಹೊರ ಜಗತ್ತಿನ ಪರಿವೇ ಇರುತ್ತಿರಲಿಲ್ಲ. ಧ್ಯಾನಾಸಕ್ತರಾಗಿ ಬಿಡುತ್ತಿದ್ದರು." (ರಾಜೇಶ್ವರಿ ತೇಜಸ್ವಿ, ನನ್ನ ತೇಜಸ್ವಿ ೨೦೧೧, ಪುಟ ೨೮)

ತೇಜಸ್ವಿ ಅವರಿಗೆ ಬೇಟೆ ಒಂದು ಆಧ್ಯಾತ್ಮಿಕ ಅನುಭೂತಿ ನೀಡುವ ವಿಷಯವಾಗಿತ್ತು ಎಂಬ ಅಂಶ ಈ ಮೇಲಿನ ಸಾಲುಗಳನ್ನು ಗಮನಿಸಿದಾಗ ತಿಳಿದು ಬರುತ್ತದೆ. ಅಲ್ಲದೆ, ಅವರು ಶಿಕಾರಿ ಮಾಡಿದ ಮೀನನ್ನು ವಾಪಸ್ಸು ನದಿಗೆ ಬಿಡುತ್ತಿದ್ದರು ಎಂಬುದು ಅಚ್ಚರಿಯ ಅಂಶ. ಏಕೆಂದರೆ ಅವರ ಶಿಕಾರಿಯ ಮೂಲ ಉದ್ದೇಶ ಮಾಂಸದಾಸೆಯಲ್ಲ. ಅದಕ್ಕೂ ಮೀರಿದ ನಿರಂತರ ಕಾಯುವಿಕೆಯ ಅನುಭವಕ್ಕಾಗಿ ಹಾತೊರೆಯುತ್ತಿದ್ದರು. ಜೊತೆಗೆ ಅವರಿಗೆ ಶಿಕಾರಿಯ ಜೊತೆಗೆ ಒದಗುವ ಕಾಡಿನ ಸಾಂಗತ್ಯ ಹೆಚ್ಚು ಆಪ್ತವಾಗಿತ್ತು. ಈ ಕಾರಣದಿಂದ ಅವರು 'ಶಿಕಾರಿ'ಯನ್ನು ಪರಿಭಾವಿಸುವ ರೀತಿಯೇ ಬೇರೆಯಾಗಿತ್ತು. ಅವರ 'ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್' ಎಂಬ ಪ್ರವಾಸ ಕಥನದಲ್ಲಿ ಇಂತಹ 'ಮೀನುಶಿಕಾರಿ'ಯ ವಿಪುಲ ನಿದರ್ಶನಗಳಿವೆ.

"ನಾವು ಅನೇಕ ಸಾರಿ ಮೀನುಗಳ ಹತ್ತಿರ ಸೋಲು ಅನುಭವಿಸಿದ್ದೇವೆ. ಎಷ್ಟು ಹುಷಾರಾಗಿ ಆಡಿಸಿದರೂ ದಡಕ್ಕೆ ಬರದೆ ಸಿಕ್ಕಾಪಟ್ಟೆ ಜಗ್ಗಾಡಿ ಬಂಡೆಗಳಡಿಯೆಲ್ಲಾ ನುಗ್ಗಾಡಿ ದಾರ ಸಿಕ್ಕಿಸಿ ತುಂಡು ಮಾಡಿರುವ ಮೀನು ಗಾಳದ ಕೊಕ್ಕೆಯನ್ನು ಎಳೆದೆಳೆದು ನೆಟ್ಟಗೆ ಮಾಡಿದ ಮೀನು ಮುಂತಾದವನ್ನೆಲ್ಲಾ ನೋಡಿದ್ದೇವೆ. ಆದರೆ ಇದು ನಾವು ಊಹಿಸದಿದ್ದ ಸವಾಲುಗಳು. ನೀರಿಗೆ ತಾಗುವ

ಮೊದಲೇ ದಾರ ತುಂಡು ಮಾಡಿ ಬಿಸಾಕುವ ಮೀನುಗಳು. ಮತ್ತೆ ಗಾಳಕ್ಕೆ ಪುಡಿ ಮೀನು ಸಿಕ್ಕಿಸಿ ಸಮುದ್ರಕ್ಕೆ ಬೀಸಿದೆ ಆಶ್ಚರ್ಯ ! ಗಾಳ ಸಮುದ್ರಕ್ಕೆ ತಾಗಿತೋ ಇಲ್ಲವೋ ಮತ್ತೆ ತದ್ವತ್ತಾಗಿ ಹಿಂದೆ ನಡೆದುದೇ ಪುನರಾವರ್ತನೆ ! ಏನು ಎತ್ತ ಎಂದು ಯೋಚಿಸಲೂ ಪುರುಸೊತ್ತು ಕೊಡದೆ ದಾರ ವಿಪರೀತ ವೇಗದಲ್ಲಿ ಬಿಗಿಯಾಗಿ ತುಂಡಾಯ್ತು. ಕ್ರಿಕೆಟ್ ಆಟದಲ್ಲಿ ಕ್ಯಾಚ್ ಹಿಡಿಯಲು ಫೀಲ್ಡರುಗಳು ನಿಂತ ರೀತಿ ಸಮುದ್ರದಲ್ಲಿ ಮೀನುಗಳು ನಿಂತಿರುವಂತೆ ಭಾಸವಾಯ್ತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್, ಪುಟ ೧೨೨)

"ಬೆಳಗ್ಗೆ ಸಮುದ್ರ ದಂಡೆಗೆ ಬಂದ ನಮಗೆ ಸಂಜೆವರೆಗೆ ಹೇಗೆ ಕಾಲ ಸರಿಯಿತೋ ಗೊತ್ತಾಗಲೇ ಇಲ್ಲ. ಒಂದೇ ಒಂದು ಮೀನನ್ನಾದರೂ ಸೋಲಿಸಿ ದಡದ ಸಮೀಪಕ್ಕೆ ಮಾಡಲು ಸಹ ನಮ್ಮಿಂದ ಸಾಧ್ಯವಾಗಲಿಲ್ಲ.

ಸಮುದ್ರ ದಂಡೆಯ ಮೇಲೆ ನಿಂತು ತುಂಡು ತುಂಡಾದ ದಾರಗಳೊಂದಿಗೆ ಯೋಚಿಸಿದೆವು. ಗಾಳ ಹಾಕಿ ಮೀನು ಹಿಡಿಯುವವರ ಜೀವಮಾನದಲ್ಲಿ ಎಲ್ಲೋ ಒಮ್ಮೊಮ್ಮೆ ಸಿಗಬಹುದಾದಂಥ ಅಪೂರ್ವ ಅವಕಾಶ ನಮಗೆ ಸಿಕ್ಕಿತ್ತು! ಮತ್ತಿನ್ನೆಲ್ಲೂ ಹಿಡಿಯಲಾರದಷ್ಟು ದೊಡ್ಡ ಮೀನುಗಳೊಡನೆ ಸೆಣಸಬಹುದಾದಂಥ ಅವಕಾಶ ! ಇನ್ನೊಮ್ಮೆ ನಮ್ಮ ಜೀವನದಲ್ಲಿ ಇಲ್ಲಿಗೆ ಬಂದು, ಇದೇ ಸಮುದ್ರ ತೀರದಲ್ಲಿ ನಿಂತು ಈ ಮೀನುಗಳ ಸವಾಲನ್ನು ಎದುರಿಸುತ್ತೇವೆಯೋ ಇಲ್ಲವೋ" ! (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್, ಪುಟ ೧೨೪)

ಇಡೀ ದಿನ ಈ ಬಗೆಯ ನಿರಂತರ ಶೋಧನೆಯ ಅನುಭವಕ್ಕಾಗಿ ಹಾತೊರೆಯುವುದು ಬಹುತೇಕ ಎಲ್ಲಾ ಬೇಟೆ ಪ್ರಸಂಗಗಳಲ್ಲೂ ಕಾಣಬಹುದು. ಈ ಪ್ರವೃತ್ತಿ ತೇಜಸ್ವಿ ಅವರಿಗೆ ಬಾಲ್ಯದಿಂದಲೂ ಇತ್ತು ಎಂಬುದನ್ನು ಗಮನಿಸಬಹುದು. ಇದು ಕುವೆಂಪು ಅವರಿಂದ ಬಂದ ಹವ್ಯಾಸ. ಕುವೆಂಪು ಅವರಿಗೆ ತಮ್ಮ ಮೀನು ಶಿಕ್ಷರಿಯ. ವಿಚಾರಗಳನ್ನು, ಅನುಭವವನ್ನು ಹಂಚಿಕೊಳ್ಳುವ ತವಕವನ್ನು 'ತೇಜಸ್ವಿ ನೆನಪು' ಕೃತಿಯಲ್ಲಿ 'ರಾಜೇಶ್ವರಿ ತೇಜಸ್ವಿ' ನೆನಪು ಮಾಡಿಕೊಳ್ಳುತ್ತಾರೆ.

"ಅಣ್ಣ ಬಂದಾಗ, ಯಾವ್ಯಾವ ನದಿಗೆ ಮೀನು ಹಿಡಿಯಲು ಹೋಗಬೇಕು, ಎಲ್ಲೆಲ್ಲಿಯ ಗುಂಡಿಗೆ ಗಾಳ ಹಾಕಬೇಕು. ಏನೇನು ಮೀನು ಸಿಗಬಹುದು ಲೆಕ್ಕಚಾರ ಹಾಕಿದ್ದೇ ಹಾಕಿದ್ದು ಅಣ್ಣನವರಿಗೂ ಇವರಷ್ಟೇ ಉತ್ಸಾಹ.

ಎಲ್ಲವನ್ನೂ ವಿವರವಾಗಿ ಕೇಳಿಸಿಕೊಳ್ಳುವರು. ಯಾವ ಗುಂಡಿಯಲ್ಲಿ ಹಿಡಿದೆ. ಏನು ಆಹಾರ ಹಾಕಿದ್ದೆ, ಎಷ್ಟೆಷ್ಟು ಸತಾಯಿಸ್ತು. ಯಾವ ಜಾತಿ ಮೀನು ಸಿಕ್ತು ಎಷ್ಟು ತೂಕ ಇತ್ತು ಇತ್ಯಾದಿ ಎಲ್ಲವನ್ನೂ ವಿವರವಾಗಿ ಕೇಳುವರು ಕುತೂಹಲದಿಂದ". (ರಾಜೇಶ್ವರಿ ತೇಜಸ್ವಿ, ನನ್ನ ತೇಜಸ್ವಿ, ೨೦೧೧, ಪುಟ ೨೮೮)

ಈ ಸನ್ನಿವೇಶಗಳನ್ನು ಗಮನಿಸಿದಾಗ, ಇವರಿಬ್ಬರ ಕೃತಿಗಳಲ್ಲಿ ಬರುವ ಬೇಟೆಯು ನೈಜತೆಯಿಂದ ಕೂಡಿದೆ. ಸಾಹಿತ್ಯದಲ್ಲಿ ಅನುಭವಕ್ಕೆ ಆಕಾರಕೊಡುವ ಕ್ರಿಯೆ ನಡೆಯುತ್ತದೆ. ತಾನು ಪಡೆದ ಅನುಭವವನ್ನು ಕೆದಕಿ ನೋಡದೆ, ಅದರ ಸ್ವರೂಪವನ್ನು ಸ್ಪಷ್ಟವಾಗಿ ಪ್ರಾಮಾಣಿಕವಾಗಿ ಗ್ರಹಿಸದೆ, ಅದನ್ನು ಕೃತಿಯಲ್ಲಿ ತರಲು ಸಾಧ್ಯವಿಲ್ಲ. ಇಲ್ಲಿ ಬೇಟೆಯ ಚಿತ್ರಗಳನ್ನು ಕಟ್ಟಿಕೊಡುವಲ್ಲಿ ಕುವೆಂಪು ಮತ್ತು ತೇಜಸ್ವಿ ಇಬ್ಬರೂ ತಮ್ಮ ಅನುಭವಗಳೊಡನೆ ಮುಖಾಮುಖಿಯಾಗಿದ್ದಾರೆ ಆದ್ದರಿಂದಲೇ ಇಷ್ಟು ಸಶಕ್ತ ಬೇಟೆಯ ಅನುಭವಗಳನ್ನು ಕಟ್ಟಿಕೊಡಲು ಸಾಧ್ಯವಾಯಿತು. ತೇಜಸ್ವಿಯವರ 'ಶಿಕಾರಿ' ಎಂಬ ಪರಿಭಾಷೆ ಶೋಧದ ಒಂದು ಹೊಸಮುಖವನ್ನು ತೆರೆದಿಡುತ್ತದೆ. ಕುವೆಂಪುರವರ ಬೇಟೆಯ ಚಿತ್ರಗಳಿಗಿಂತ ಭಿನ್ನವಾದ ಆಯಾಮ ಪಡೆಯಲು ಸಾಧ್ಯವಾಗುವುದೇ ಈ ದಿಸೆಯಿಂದ. ಶಿಕಾರಿಯ ನಿರಂತರ ಕಾಯುವಿಕೆಯಲ್ಲಿ ಏಕಾಂಗಿತನದಲ್ಲಿ ಉದ್ಭವಿಸುವ ಅವರ ಚಿಂತನೆಗಳಲ್ಲಿ ಹೊಸ ಹೊಳಹುಗಳನ್ನು ಕಾಣಬಹುದು. ಶಿಕಾರಿಯ ಅನುಭವದಲ್ಲಿ ಒಂದು ಅನನ್ಯತೆಯನ್ನು ಅನುಭವಿಸುವುದು, ಪರಿಭಾವಿಸುವುದನ್ನು ಕಂಡಾಗ ಇದು ನಮ್ಮ ಗಮನಕ್ಕೆ ಬರುತ್ತದೆ.

# ಅಧ್ಯಾಯ – ೮
# ಅಭಿವ್ಯಕ್ತಿ ನೆಲೆಗಳು

ವ್ಯಕ್ತಿಯು ತನ್ನ ಅನುಭವ, ಅಮೂರ್ತ ಭಾವನೆ, ಆಲೋಚನೆ, ಬಯಕೆ ಚಿಂತನೆಗಳಿಗೆ ಸಾಮಾಜಿಕವಾಗಿ ಅಂಗೀಕೃತವಾದ ಯಾವುದೇ ಒಂದು ಮಾಧ್ಯಮದಲ್ಲಿ ತಕ್ಕಮಟ್ಟಿಗೆ ಖಚಿತವಾದ ಮೂರ್ತರೂಪ ಕೊಡುವ ಕ್ರಿಯೆಯೇ ಅಭಿವ್ಯಕ್ತಿ. ತನ್ನ ಅನುಭವ, ಚಿಂತನೆ, ಆಲೋಚನೆ, ತರ್ಕ ಇತ್ಯಾದಿಗಳನ್ನು ಸಮಾಜದ ಇತರರೊಂದಿಗೆ ಹಂಚಿಕೊಳ್ಳುವುದು ಮತ್ತು ತನ್ನ ಆಲೋಚನೆ ಚಿಂತನೆಗಳತ್ತ ಅವರನ್ನು ಒಲಿಸಿಕೊಳ್ಳುವುದು ಅಭಿವ್ಯಕ್ತಿಯ ಪ್ರಮುಖ ಉದ್ದೇಶ. ಅಭಿವ್ಯಕ್ತಿ ಎಂಬುದು ಭಾಷೆ, ಸಂಭಾಷಣೆ, ಸಾಹಿತ್ಯ, ಭಾಷಣ ಎಂಬ ಹಲವು ರೂಪಗಳಲ್ಲಿ ವ್ಯಕ್ತವಾಗುತ್ತವೆ. ಇವು ಸಾಹಿತ್ಯಕ್ಕೆ ಸಂಬಂಧಿಸಿದ್ದಾದರೆ, 'ಧ್ವನಿವ್ಯತ್ಯಾಸ' ಮತ್ತು 'ವಾದ್ಯಗಳು' ಸಂಗೀತಕ್ಕೆ ಸಂಬಂಧಿಸುತ್ತವೆ. ಆಂಗಿಕ ಚಲನೆ, ಹಾವಭಾವಗಳು ನಾಟಕ ಮತ್ತು ನಾಟ್ಯಕ್ಕೆ ಸಂಬಂಧಿಸಿದ ಅಭಿವ್ಯಕ್ತಿಯ ರೂಪಗಳೆನಿಸುತ್ತವೆ.

"ಸಾಹಿತ್ಯ ವಿಮರ್ಶೆಯಲ್ಲಿ 'ಅಭಿವ್ಯಕ್ತಿ' ಎಂಬ ಪದ ಅನುಭವವನ್ನು ಓದುಗರಿಗೆ ತಲುಪಿಸಬಲ್ಲ ಮತ್ತು ಅದಕ್ಕೆ ಸಹಾಯಕವಾಗುವ ಲೇಖಕರ ಭಾಷೆ, ಸಾಮರ್ಥ್ಯ, ಶೈಲಿ, ಕೃತಿಯ ಪ್ರಕಾರ ಇವೆಲ್ಲವನ್ನೂ ಒಳಗೊಂಡಂತೆ ಅಥವಾ ಇವುಗಳಲ್ಲಿ ಯಾವುದಾದರೂ ಒಂದು ಅಂಶಕ್ಕೆ ಅನ್ವಯವಾಗುವಂತೆ ಬಳಕೆಯಾಗುತ್ತದೆ. ಅನುಭವವು ತೀವ್ರವಾದಂತೆಲ್ಲ ಅಂತರಂಗ ಜಗತ್ತು ಹೆಚ್ಚು ಶ್ರೀಮಂತವೂ ನಿಗೂಢತರವೂ ಆಗುವುದರಿಂದ ಅಭಿವ್ಯಕ್ತಿಯ ಸಾಧನಗಳಾದ ಬಾಹ್ಯ ಜಗತ್ತಿನ ರೂಪ ಸಾಮಗ್ರಿಗಳು ವಿಫುಲವಾಗುತ್ತಾ ಹೋಗುತ್ತವೆ.... ದೇವತೆಗಳಿಂದ ಹಿಡಿದು ದಾನವ, ಮಾನವ, ಪಶು, ಪ್ರಾಣಿಗಳ ತನಕ, ಭೂಮಿಯಿಂದ ಹಿಡಿದು ಕ್ಷುದ್ರತನಕ ಎಲ್ಲವೂ ಅಂತರಂಗದ ಅನುಭವಾಭಿವ್ಯಕ್ತಿಯ ಸಾಧನವಾಗುತ್ತವೆ" (ನಾಗಭೂಷಣಸ್ವಾಮಿ ಓ.ಎಲ್., ವಿಮರ್ಶೆಯ ಪರಿಭಾಷೆ, ೨೦೦೯, ಪುಟ ೨೯) ಎಂಬ ಮಾತುಗಳು ಅಭಿವ್ಯಕ್ತಿಯ ಸ್ವರೂಪ, ವ್ಯಾಪ್ತಿಯ ಬಗೆಗೆ ಸ್ಪಷ್ಟತೆಯನ್ನು ನೀಡುತ್ತದೆ.

ಅದೇ ರೀತಿ 'ಅಭಿವ್ಯಕ್ತಿ' ಎನ್ನುವುದು ಆತನ ಅನುಭವದ ಮತ್ತು ಸ್ಪಂದನೆಯ ವಲಯದೊಂದಿಗೆ ಆತನ ಅಭಿವ್ಯಕ್ತಿಯ ಸಾಮರ್ಥ್ಯದೊಂದಿಗೆ ರೂಪ ಪಡೆದುಕೊಳ್ಳುತ್ತದೆ. ಯಾವುದೇ ವ್ಯಕ್ತಿ ಅನುಭವಿಸಿದ ಅನುಭವಗಳು ಸ್ಪಂದಿಸುವ ಸ್ವರೂಪ ಮತ್ತು ಅಭಿವ್ಯಕ್ತಿ ಸಾಮರ್ಥ್ಯದ ಮೇಲೆ ಪ್ರತಿಪಾದಿಸಹೊರಟ ವಿಚಾರದ ಮೇಲೆ ಕೃತಿಯೊಂದು ರೂಪುಗೊಂಡಿರುತ್ತದೆ. ಕೃತಿ ಕಟ್ಟಿಕೊಡುವ ಒಟ್ಟು ಆಶಯವನ್ನು ಗಮನದಲ್ಲಿಟ್ಟುಕೊಂಡು ಕುವೆಂಪು ಮತ್ತು ತೇಜಸ್ವಿಯವರ ಅಭಿವ್ಯಕ್ತಿಯ ನೆಲೆಗಳನ್ನು ಮುಖಾಮುಖಿಯಾಗಿ ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ.

'ಕಲೆಯನ್ನಲ್ಲದೆ ಶಿಲೆಯನೇಂ ಕವಿ ಸೃಷ್ಟಿಪನೇ' ಎಂಬ ಕುವೆಂಪು ಸಾಲುಗಳು ಕೃತಿಯೊಂದರ ನಿರ್ಮಾಣ ಕಾರ್ಯವೂ ಒಂದು ಕಲೆ ಎಂಬ ಅರ್ಥವನ್ನು ಧ್ವನಿಸುತ್ತದೆ ಹಾಗೂ ಕೃತಿಯೊಂದರ 'ಶಿಲ್ಪ ಸೌಂದರ್ಯ'ದ ಮಹತ್ವವನ್ನು ತಿಳಿಸುತ್ತದೆ. ಯಾವುದೇ ಕಲಾಕೃತಿಗೂ ಶಿಲ್ಪ ಸೌಂದರ್ಯವಿರುತ್ತದೆ. ಮನುಷ್ಯನ ಶರೀರದಲ್ಲಿ ಕೂಡ ಸಾವಯವ ಶಿಲ್ಪವಿದೆ. ಮನುಷ್ಯನ ಶರೀರದಲ್ಲಿನ ಅವಯವಗಳೆಲ್ಲವೂ ಪ್ರಮಾಣಬದ್ಧವಾಗಿರಬೇಕು. ಹೃದಯ ಮತ್ತು ದೇಹದ ಸಂಬಂಧದ ಸಮನ್ವಯತೆ ಇರಬೇಕು. ಇದೇ ರೀತಿ ಕೃತಿಗೂ ಅದರದ್ದೇ ಆದ ಶರೀರ ಮತ್ತು ಶಾರೀರ ಇರುತ್ತದೆ. ಇದಕ್ಕೆ ಭಾಷೆ, ತಂತ್ರ, ಪಾತ್ರಗಳು, ಸನ್ನಿವೇಶ, ಸಂಕೇತ, ಪ್ರತಿಮೆಗಳ ವ್ಯವಸ್ಥಿತ ಸಂಘಟನೆ ಹಾಗೂ ನಿರ್ವಹಣೆಯೊಂದಿಗೆ ಕೃತಿಯೊಂದು ನಿರ್ಮಾಣವಾಗುತ್ತದೆ. ಅಭಿವ್ಯಕ್ತಿಯ ಕ್ರಮದಲ್ಲಿ ಇವುಗಳ ಹದವಾದ ಮತ್ತು ಪರಿಣಾಮಕಾರಿಯಾದ ಹೊಂದಾಣಿಕೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ಆಗ ಮಾತ್ರ ಕೃತಿಯೊಂದು ಯಶಸ್ಸನ್ನು ಸಾಧಿಸಬಹುದು. ಹಾಗಾಗಿ ಇಬ್ಬರೂ ಲೇಖಕರ ಅಭಿವ್ಯಕ್ತಿಯಲ್ಲಿ 'ಶಿಲ್ಪ'ವನ್ನು ಕುರಿತು ಚರ್ಚಿಸಲಾಗಿದೆ.

**೮.೧ ವಸ್ತು :**

ಯಾವುದೇ ಸಾಹಿತ್ಯ ಕೃತಿ ಯಾವುದರ ಬಗ್ಗೆ ಇದೆ ಎಂಬುದನ್ನು ನಿರ್ಧರಿಸಿ ಹೇಳುವುದು ಕಷ್ಟ. ಕಥನ ಸಾಹಿತ್ಯವು ಕೆಲವು ಘಟನೆಗಳು ಮತ್ತು ವ್ಯಕ್ತಿಗಳು ಹಾಗೂ ಸಮಾಜದ ಬಗೆಗೆ ಇರುತ್ತವೆ. ಕೃತಿಯೊಂದರ ಕತೆಯನ್ನು ಸುಲಭವಾಗಿ ಸಂಗ್ರಹಿಸಿ ಹೇಳಬಹುದು. ಅಲ್ಲದೆ, ಈ ಕತೆಯ ಹಿಂದೆ ಯಾವುದೋ ಒಂದು ನಂಬಿಕೆ ತತ್ತ್ವ , ಬದುಕಿನ ಬಗೆಗಿನ ತಿಳುವಳಿಕೆ ಇರುತ್ತದೆ. ಇದನ್ನು ಕೃತಿಯಿಂದ

ಬೇರ್ಪಡಿಸಿ ಅಮೂರ್ತ ರೂಪದಲ್ಲಿ ಸಂಗ್ರಹಿಸಿ ಹೇಳಬಹುದು. ಇದು ಆ ಕತೆ-ಕಾದಂಬರಿಯ 'ವಸ್ತು' ಎನಿಸಿಕೊಳ್ಳುತ್ತದೆ. ಈ ವಸ್ತುವೇ ಕಥನ ಸಾಹಿತ್ಯ ಕೃತಿಯೊಂದರ ಆತ್ಮ. ಇದಕ್ಕೆ ಭಾಷೆ, ತಂತ್ರಗಳ ದೇಹವಿಲ್ಲದೆ ಮೂರ್ತವಾಗಿ ಕಾಣಿಸಿಕೊಳ್ಳಲು ಸಾಧ್ಯವಿಲ್ಲ. ಕತೆಯನ್ನು ಗ್ರಹಿಸುವಷ್ಟು ಸುಲಭವಾಗಿ ಅದರಲ್ಲಿ ಅಂತರ್ಗತವಾಗಿರುವ 'ವಸ್ತು'ವನ್ನು ಗುರುತಿಸುವುದು ಬಹಳ ಕಷ್ಟ.

'ವಸ್ತು' ಎಂಬುದು ಸಾಹಿತ್ಯ ಕೃತಿಯ ಧೋರಣೆ ಮತ್ತು ವಿಚಾರಗಳನ್ನು ಸೂಚಿಸುತ್ತದೆ. ವಸ್ತು ಯಾವಾಗಲೂ ಒಂದು 'ವಿಷಯ'ವನ್ನು ಕೇಂದ್ರಿಕರಿಸಿರುತ್ತದೆ. 'ವಸ್ತು'ವು ಹೀಗೆ ಕೇಂದ್ರಿಕರಿಸಿದ ವಿಷಯವೊಂದರ ಅಂಗವಾಗಿದ್ದು ಘಟನೆ, ಸಂಕೇತ, ಪ್ರತಿಮೆ, ನುಡಿಗಟ್ಟುಗಳ ಪುನರುಕ್ತಿಯಲ್ಲಿ ಪರೋಕ್ಷವಾಗಿ ಅಭಿವ್ಯಕ್ತವಾಗುತ್ತದೆ. ವಸ್ತುವು ಪ್ರತಿಮೆ, ಸಂಕೇತಗಳ ಹಿಂದಿರುವ ವಿಚಾರಧಾರೆಯಾದ್ದರಿಂದ ಅದನ್ನು ತರ್ಕದ ಮೂಲ ಗ್ರಹಿಸಬೇಕಾಗುತ್ತದೆ. "ಕತೆ ಹಾಗೂ ಕಾದಂಬರಿಗಳಲ್ಲಿ ವಸ್ತುವನ್ನು ಸರಿಯಾಗಿ ಗ್ರಹಿಸುವುದು ಬದುಕಿನಲ್ಲಿ ಅನುಭವಗಳ ಅರ್ಥವನ್ನು ಗ್ರಹಿಸುವಷ್ಟೇ ಕಠಿಣವಾದ ಕೆಲಸ. ಆದರೆ ಅದನ್ನು ಸರಿಯಾಗಿ ಗ್ರಹಿಸದ ಹೊರತು ಒಂದು ಕೃತಿಯ ಅಂಗಗಳಾದ ಘಟನೆ, ಪಾತ್ರ, ಸಂಘರ್ಷ, ಸಾಂಕೇತಿಕತೆ, ವ್ಯಂಗ್ಯ ನಿರೂಪಣೆಯ ಕೋನ ಮುಂತಾದವುಗಳ ಔಚಿತ್ಯವನ್ನು ನಿರ್ಧರಿಸಲಿಕ್ಕೆ ಆಗುವುದಿಲ್ಲ. ಅಂದರೆ ವಸ್ತುವೇ ಕತೆಗೆ ಐಕ್ಯವನ್ನು, ಸಂಗತಿಗಳಿಗೆ ಅರ್ಥವನ್ನು ಒದಗಿಸುವ ಕೇಂದ್ರವಾಗಿರುತ್ತದೆ. ಅಂತೆಯೇ ವಸ್ತು ಕೃತಿ ರಚನೆಯಲ್ಲಿ ಮಹತ್ವದ ಪಾತ್ರವಹಿಸುತ್ತದೆ". (ಗಿರಡ್ಡಿ ಗೋವಿಂದರಾಜು, ಸಮಗ್ರ ವಿಮರ್ಶೆ, ೨೦೦೧, ಪುಟ ೧೩೦)

ಮನುಷ್ಯನು ವ್ಯವಸ್ಥಿತ ಸಮಾಜದ ಅಂಗ. ಸಾಹಿತ್ಯಕ್ಕೆ ವಸ್ತು 'ಮನುಷ್ಯನ ಜೀವನ'. ಸಾಹಿತ್ಯವೆಂಬುದು ಮಾನವ ಜೀವನದ ಅನುಕರಣೆಯೇ ಆಗಿದೆ. ಅನುಕರಣೆಗೆ ಕಲೆಯ ರೂಪ ಕೊಡುವುದರಿಂದ ಓದುಗರಿಗೆ ಸಂತಸವೂ, ಶಿಕ್ಷಣವೂ ದೊರೆಯುತ್ತದೆ. ಕಲೆಗಾಗಿ ಕಲೆ ಅಲ್ಲ, ಮನುಷ್ಯನಿಗಾಗಿ ಕಲೆ ಎಂಬುದು ಸಾಹಿತ್ಯದ ಆದರ್ಶ. ಈ ಹಿನ್ನಲೆಯಲ್ಲಿ ವಸ್ತು-ಕಥಾವಸ್ತು-ಆಶಯಗಳಗಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ತಿಳಿಯುವುದು ಅವಶ್ಯ. ಲೇಖಕರು ತಾನು ಆಯ್ದುಕೊಂಡ 'ವಸ್ತು'ವನ್ನು ಸಶಕ್ತವಾಗಿ ಅಭಿವ್ಯಕ್ತಿಸಲು ಆಯ್ದುಕೊಂಡ ಕಲೆಯಲ್ಲಿ, ಅಡಕವಾಗಿರುವ ಸ್ಥಳಗಳು, ಪಾತ್ರಗಳು, ಸನ್ನಿವೇಶ, ಹಿನ್ನಲೆ, ಕಥಾಭಿತ್ತಿ, ತಂತ್ರಗಳೆಲ್ಲವೂ ಕಥಾವಸ್ತು (Fiction) ಎನಿಸುತ್ತದೆ. ಕಥಾವಸ್ತುವಿನಲ್ಲೇ ಅದರ

'ತಿರುಳು' ಸಮ್ಮಿಳಿತವಾಗಿರುತ್ತದೆ. ಪಾತ್ರಗಳು, ಸನ್ನಿವೇಶ, ಸಂಕೇತ, ಪ್ರತಿಮೆಗಳನ್ನು 'ಕಥಾಪರಿಕರ'ಗಳೆನ್ನಬಹುದು. ಈ ಕಥಾ ಪರಿಕರಗಳ ವ್ಯವಸ್ಥಿತ ಸಂಘಟನೆ ಹಾಗೂ ನಿರ್ವಹಣೆಯೊಂದಿಗೆ ಕೃತಿಯೊಂದು ನಿರ್ಮಾಣವಾಗುತ್ತದೆ. ಹೀಗೆ ನಿರ್ಮಾಣವಾದ ಕೃತಿಯಲ್ಲಿ ವಸ್ತು (theme) ಮತ್ತು ಆಶಯ ಅಡಗಿರುತ್ತದೆ.

ಕುವೆಂಪು ಮತ್ತು ಪೂರ್ಣಚಂದ್ರ ತೇಜಸ್ವಿ ಇಬ್ಬರ ಕಥನ ಸಾಹಿತ್ಯಕ್ಕೆ 'ಶ್ರೀ ಸಾಮಾನ್ಯ' ಎದುರಿಸಬೇಕಾದ ಪ್ರಮುಖ ಸಮಸ್ಯೆಗಳೇ ವಸ್ತುವಾಗಿದೆ. ಇವರ ಕೃತಿಗಳಲ್ಲಿ ತೀವ್ರವಾದ ಸಾಮಾಜಿಕ ಪ್ರಜ್ಞೆ ಸಾಂದ್ರವಾಗಿ ಅಭಿವ್ಯಕ್ತಗೊಂಡಿದೆ. ಸಾಮಾಜಿಕ ಸಂಗತಿಗಳನ್ನಷ್ಟೇ ಅಲ್ಲದೇ ವೈಚಾರಿಕತೆಯ ವಿಭಿನ್ನ ಮಗ್ಗಲುಗಳ ದರ್ಶನವನ್ನು ಕೃತಿಗಳಲ್ಲಿ ಇವರೀರ್ವರು ಚಿತ್ರಿಸಿದ್ದಾರೆ. ಇಬ್ಬರ ಕತೆ-ಕಾದಂಬರಿಗಳಲ್ಲಿ ಆಧ್ಯಾತ್ಮ, ಜೀವನ ಪ್ರೇಮ, ರಾಷ್ಟ್ರೀಯತೆ, ಕೌಟುಂಬಿಕತೆ, ಪರಿಸರ ಪ್ರಜ್ಞೆ, ಪ್ರಕೃತಿ ಪ್ರೇಮದಂತಹ ಅಂಶಗಳೇ ಪ್ರಧಾನವಸ್ತುಗಳಾಗಿ ಸ್ಥಾನ ಪಡೆದಿವೆ.

ಕುವೆಂಪು ಅವರ ಕೃತಿಗಳಲ್ಲಿ ಅವರ ಸಾಮಾಜಿಕ ಚಿಂತನೆ ಸರ್ವೋದಯ, ಸಮಷ್ಟಿಯ, ಪೂರ್ಣದೃಷ್ಟಿ, ವಿಶ್ವಮಾನವತೆಯ ಪರಿಕಲ್ಪನೆಗಳು ಸಮ್ಮಿಳಿತಗೊಂಡಿವೆ ಹಾಗೂ ಸಮಾಜವನ್ನು ಪ್ರಗತಿಪಥದತ್ತ ಕೊಂಡೊಯ್ಯುವ ಹವಣಿಕೆ ಸ್ಪಷ್ಟವಾಗಿ ಗೋಚರವಾಗುತ್ತದೆ. ತೇಜಸ್ವಿ ಅವರ ಕೃತಿಗಳಲ್ಲಿ ಕುವೆಂಪುರವರ ಕೃತಿಗಳಿಗಿಂತ ಹೆಚ್ಚಿನ ವ್ಯಾಪ್ತಿ, ವಿಸ್ತಾರವನ್ನು, ವೈವಿಧ್ಯವನ್ನು ಕಾಣಬಹುದು. ಆಧುನಿಕತೆಯ ತಲ್ಲಣಗಳು ಅದರಿಂದ ಉಂಟಾಗುವ ಸಾಮಾಜಿಕ ಸ್ಥಿತ್ಯಂತರಗಳು, ಭ್ರಷ್ಟಾಚಾರ, ಜಾತಿ ರಾಜಕೀಯ, ಪರಂಪರೆ ಮತ್ತು ವಾಸ್ತವಿಕತೆಯ ನಡುವಿನ ಸಂಘರ್ಷ ಹೀಗೆ ವರ್ತಮಾನದ ನೆಲೆಗಟ್ಟಿನಲ್ಲಿ ನೈಜ ಚಿತ್ರಣಗಳ ಮೂಲಕ ವೈವಿಧ್ಯಮಯವಾಗಿದೆ. ಇವರಿಬ್ಬರ ಕೃತಿಗಳಲ್ಲಿನ ವಸ್ತು-ವೈವಿಧ್ಯವನ್ನು ಆಶಯಗಳ ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

"ಕುವೆಂಪು ಕಥೆಗಳನ್ನು ಬರೆಯದಿದ್ದರೆ, ಮಾಸ್ತಿ ಕಾವ್ಯಗಳನ್ನು ಬರೆಯದಿದ್ದರೆ ಕನ್ನಡ ಸಾಹಿತ್ಯಕ್ಕೆ ಬಹು ದೊಡ್ಡ ನಷ್ಟವೇನೂ ಆಗುತ್ತಿರಲಿಲ್ಲ" ಎಂಬ ಅಭಿಪ್ರಾಯ ವಿಮರ್ಶಾವಲಯದಲ್ಲಿದೆ. 'ಕುವೆಂಪು ಅವರ ಕಥೆಗಳು ಸಣ್ಣಕಥೆಗಳಿಗಿರುವ 'ಚೌಕಟ್ಟು' ಮೀರಿ ಕಾವ್ಯದ ಆಯಾಮ ಪಡೆದುಕೊಳ್ಳುತ್ತವೆ ಹಾಗೂ ಮಾಸ್ತಿ ಅವರ ಕಾವ್ಯಗಳು ಕೂಡ ಕಥನದ ಆಯಾಮ ಪಡೆದುಕೊಳ್ಳುತ್ತವೆ'

ಎಂಬುದು ಈ ಆಕ್ಷೇಪದ ಹಿಂದಿರುವ ದನಿಯಾಗಿದೆ. ಆದರೆ ಈ ಅಭಿಪ್ರಾಯವನ್ನು ಒಪ್ಪಲು ಖಂಡಿತ ಸಾಧ್ಯವಿಲ್ಲ. ಕುವೆಂಪು ಅವರ ಸಣ್ಣಕತೆಗಳು ಗಾತ್ರದಲ್ಲಿ ಕಿರಿದಾದರೂ ಅವುಗಳ ಅಂತಃಸತ್ತ್ವ ಹಿರಿದಾದದ್ದು. ಮಾನವನ ಬದುಕಿನ ಸ್ವಾರ್ಥ, ದುರಾಸೆ, ಹಿಂಸಾ ಪ್ರವೃತ್ತಿ, ಸಣ್ಣತನ ಮುಂತಾದ ಕಳೆ-ಕಸಗಳನ್ನು ಕಿತ್ತೊಗೆದು ಅಲ್ಲಿ ವಿವೇಕ, ಉದಾರತೆ, ಸಮಾನತೆ, ಪ್ರೀತಿ, ಪ್ರಾಮಾಣಿಕತೆ, ಸಜ್ಜನಿಕತೆ, ಸದಭಿರುಚಿಯ ಜನಪರ ನಿಲುವನ್ನು ಹೊಂದಿವೆ. ಕಲಾತ್ಮಕತೆಯ ದೃಷ್ಟಿಯಿಂದ ಕುವೆಂಪು ಕತೆಗಳು ಗಮನಸೆಳೆಯುತ್ತವೆ. ಇವರ ಕತೆಗಳಲ್ಲಿ ಸಾಮಾಜಿಕ ಸಮಸ್ಯೆಗಳ ಅನಾವರಣವಿದೆ. ಕ್ರೌರ್ಯದ ಕರುಣಾಜನಕ ಚಿತ್ರವಿದೆ. ವಿಡಂಬನೆ ಇದೆ. ವಿಶ್ಲೇಷಣೆಯಿದೆ. ದಟ್ಟ ಜೀವನಾನುಭವದ ನಿರೂಪಣೆ ಇದೆ. ತ್ಯಾಗ-ಬಲಿದಾನಗಳ ಚಿತ್ರವಿದೆ.

ಕುವೆಂಪು ಅವರು ತಮ್ಮ ಕತೆಗಳಲ್ಲಿ ಮಲೆನಾಡಿನ ಜೀವನದ ಕಷ್ಟ-ಕಾರ್ಪಣ್ಯಗಳನ್ನು ನೈಜವಾಗಿ ಚಿತ್ರಿಸಿದ್ದಾರೆ. ಅಸಾಮಾನ್ಯ ತ್ಯಾಗ-ಸಾಹಸಗಳನ್ನು ಮೆರೆದು ಯಾರ ಕಣ್ಣಿಗೂ ಬೀಳದೆ ಹೋಗುವಂತ ವ್ಯಕ್ತಿಯ ಕತೆಯನ್ನೇ ವಸ್ತುವನ್ನಾಗಿ ಹೊಂದಿರುವ 'ಯಾರು ಅರಿಯದ ವೀರ' ಕತೆಯ 'ಲಿಂಗ' ಎಲ್ಲರ ಮನಸ್ಸಿನಲ್ಲಿಯೂ ಅಚ್ಚಳಿಯದೇ ಉಳಿಯುವ ವ್ಯಕ್ತಿತ್ವ ಹೊಂದಿದವನು. ತುಂಬು ಹೊಳೆಯಲ್ಲಿ ಸುಬ್ಬಣ್ಣಗೌಡರ ಕುಟುಂಬವನ್ನು ದಾಟಿಸುವ ಪ್ರಸಂಗದಲ್ಲಿ ದೋಣಿಯ ಭಾರ ಹೆಚ್ಚಾಗಿ ಎಲ್ಲರೂ ಮುಳುಗಿ ಹೋಗುವ ಅಪಾಯದ ಸಂಭವವನ್ನು ಅರಿತು, ತಾನೇ ನದಿಗೆ ಹಾರಿ ತನ್ನ ಒಡೆಯನ ಕುಟುಂಬವನ್ನು ಉಳಿಸುವ ಇವನ ಔದಾರ್ಯ, ವೀರತ್ವ ಮೆಚ್ಚುವಂತದ್ದು. ಆತನ ಈ ತ್ಯಾಗ ಯಾರಿಗೂ ಅರಿವಾಗದಿರುವುದು ಕತೆಯ ವೈಶಿಷ್ಟ್ಯ.

ಕತೆಯ ಯಶಸ್ಸು ಅಡಗಿರುವುದೇ ಇಲ್ಲಿ. ಇದಕ್ಕೆ ವಿರೋಧಾಭಾಸ ಎಂಬಂತೆ 'ದೆವ್ವದ ಕಾಟ' ಕತೆಯ ವಸ್ತು ಇದೆ. ತನ್ನ ಅತಿಯಾದ ದುರಾಸೆಯಿಂದ ದಣಿಯನ್ನೇ ಒಕ್ಕಲೆಬ್ಬಿಸಲು ದೆವ್ವದ ಭ್ರಮೆ ಮೂಡಿಸುವ ಮೂಲಕ ಸ್ವಾರ್ಥ ಮೆರೆಯುವುದು. ಇದಕ್ಕೆ ಪೂರಕವಾಗಿ ಜನಮನದಲ್ಲಿ ಬೇರು ಬಿಟ್ಟಿರುವ ಮೂಢನಂಬಿಕೆಯನ್ನು ಪೋಷಿಸಿಕೊಂಡು ಬರುವ ಜೋಯಿಷನ ಡಂಭಾಚಾರವನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಮಲೆನಾಡಿನ ಬದುಕಿನ ದುರ್ಬಲತೆಯನ್ನು ಕುವೆಂಪು ಕಲಾತ್ಮಕವಾಗಿ ಚಿತ್ರಿಸಿದ್ದಾರೆ.

ಜೀವಿಗಳ ಸಂಬಂಧದ ಸ್ವರೂಪ, ಮೌಢ್ಯವನ್ನೇ ವಸ್ತುವಾಗುಳ್ಳ ಅದ್ಭುತ ಕತೆ 'ಶ್ರೀ ಮನ್ಮೂಖವಾಗಿತ್ತು'. ಮಲೆನಾಡಿನ ಬೆಟ್ಟಗುಡ್ಡಗಳ ನಡುವೆ ಹುಲ್ಲುಮನೆಯಲ್ಲಿ ವಾಸಿಸುತ್ತಿದ್ದ ರಂಗನ ಸೊಟ್ಟಕೋಡೆಮ್ಮೆ ಮನೆಗೆ ಬರದಿದ್ದರಿಂದ ಅದರ ಎಳೆಗರು ಉಪವಾಸವಿರುತ್ತದೆ. ನಾಗಣ್ಣಗೌಡರ ಹೊಲದಲ್ಲಿ ಮೇಯುತ್ತಿದ್ದುದ್ದರಿಂದ, ಆ ಎಮ್ಮೆಯನ್ನು ಕಟ್ಟಿಹಾಕಲಾಗಿರುತ್ತದೆ. ಅನಾರೋಗ್ಯದಿಂದ ನರಳುತ್ತಿದ್ದ ನಾಗಣ್ಣಗೌಡರ ಮಗ ವಾಸು ಕಟ್ಟಿ ಹಾಕಿದ್ದ ಎಮ್ಮೆಯನ್ನು ಬಿಡಿಸಿಕೊಂಡು ಹೋಗಲು ಹೇಳುತ್ತಾನೆ. ಎಮ್ಮೆ ತನ್ನ ಕರುವಿನೊಂದಿಗೆ ಸೇರಿದೊಡನೆ ವಾಸುವಿನ ಜ್ವರ ಕಡಿಮೆಯಾಗುತ್ತದೆ. ಇದನ್ನೇ ಊರಿನವರು ಜೋಯಿಸರು ಕೊಟ್ಟ ವಿಭೂತಿಯ ಮಹಿಮೆ ಎನ್ನುವುದು ಅವರ ಮೌಢ್ಯಕ್ಕೆ ಸಾಕ್ಷಿಯಾಗುತ್ತದೆ. ಇಲ್ಲಿ ಎಮ್ಮೆ-ಕರುವಿನ ಸಮಾಗಮ ತಂದೆ-ಮಗನ ಪ್ರೀತಿಯ ಸಂಬಂಧದೊಂದಿಗೆ ಮೇಳೈಸುತ್ತದೆ.

ದಿಟ್ಟ ಹೆಣ್ಣೊಬ್ಬಳು ಗೃಹತ್ಯಾಗ ಮಾಡಿದ ತನ್ನ ಪತಿಯನ್ನು ಅಸಾಧಾರಣ ಚಾತುರ್ಯ ಸಾಹಸಗಳಿಂದ ಮನವೊಲಿಸಿ ಮನೆಗೆ ಕರೆತರುವುದು 'ಸನ್ಯಾಸಿ'ಕತೆಯ ವಸ್ತು, ಹಂತ ಹಂತವಾಗಿ ಕುತೂಹಲ ಕೆರಳಿಸುವ ಕತೆಯು, 'ಪ್ರಕೃತಿ ವರ್ಣನೆ' 'ಸೃಷ್ಟಿಯ ಚಂಚಲತೆ'ಯನ್ನು ಸ್ಪಷ್ಟ ಪಡಿಸುವುದರ ಜೊತೆಗೆ ಮನುಷ್ಯನ ಪ್ರವೃತ್ತಿಯನ್ನು ಸಂಕೇತಿಸುತ್ತದೆ. ನಿಜವಾದ ಸನ್ಯಾಸತ್ತ್ವ ಯಾವುದು ಎಂಬುದರ ತಾತ್ತ್ವಿಕ ಚರ್ಚೆ, ಜಿಜ್ಞಾಸೆ ಕತೆಯ ಉದ್ದಕ್ಕೂ ಆಧ್ಯಾತ್ಮಿಕತೆಯಲ್ಲಿಯೇ ಲೀನವಾಗುತ್ತದೆ. ಕುವೆಂಪು ಅವರ ದರ್ಶನವೂ ಕತೆಯಲ್ಲಿ ಗೋಚರವಾಗುತ್ತದೆ.

'ಯಾರು ಅರಿಯದ ವೀರ' ಕತೆಯಲ್ಲಿ ಲಿಂಗನಂತ ಸಾಮಾನ್ಯ ಆಳು ತೋರುವ ಧೈರ್ಯ ಸಾಹಸ, ದೊಡ್ಡ ಗುಣಗಳನ್ನು ಚಿತ್ರಿಸಿದ ಕುವೆಂಪುರವರು 'ಶ್ರೀಮನ್ಮೂಕವಾಗಿತ್ತು' ಕತೆಯಲ್ಲಿ, ಹಳೇಪೈಕದ ರಂಗನ ಸಾಕು ಪ್ರಾಣಿಗಳ ಮೇಲಿನ ಅಗಾಧ ಪ್ರೀತಿಯನ್ನು, 'ಎಮ್ಮೆಯ ಆನಂದದ ಆಶೀರ್ವಾದ ನಾಲ್ಕೂರ ಗೌಡರ ಮಗ ವಾಸುವಿಗೆ ಹಿಡಿದ ಜ್ವರವನ್ನು ಶಮನಗೊಳಿಸಿತು' ಎಂಬ ದರ್ಶನವನ್ನು ಕಾಣುವಂತೆ ಮಾಡುತ್ತಾರೆ. ನದಿಯ ಪ್ರವಾಹದಲ್ಲಿ ಚಿಕ್ಕ ದೋಣಿಯ ಮೂಲಕ ಬೇರೆ ಊರಿಗೆ ರಕ್ಷಣೆಗಾಗಿ ಹೊರಟ ಸುಬ್ಬಣ್ಣಗೌಡರ ಕುಟುಂಬವನ್ನು ರಕ್ಷಿಸಬೇಕೆಂಬ ಇಚ್ಛೆ ಲಿಂಗನದು. ಅದಕ್ಕಾಗಿ ನದಿಯ ಏರು ಪ್ರವಾಹದಲ್ಲಿ ಹಾರಿದ ಲಿಂಗನ ತ್ಯಾಗ, ಬಲಿದಾನ, ಸಾಹಸಗಳು, ಅಚ್ಚರಿ ಮೂಡಿಸುತ್ತವೆ. ತನ್ನ ಮುದ್ದಿನ ಕರುವನ್ನು ನೋಡಲು, ಅದಕ್ಕೆ ಹಾಲು ಕೊಡಲು ಅವಕಾಶ ಮಾಡಿಕೊಟ್ಟ ವಾಸುವಿಗೆ ಪ್ರತಿಯಾಗಿ ಎಮ್ಮೆ ಪ್ರೀತಿಯ ಸಂತೋಷದ, ಶುಭದ ಹರಕೆಯನ್ನು ನೀಡುವುದು. ಆ

ಮೂಲಕ ವಾಸುವಿಗೆ ವಾಸಿಯಾಗುವುದು ಅದ್ಭುತವಲ್ಲ, ಪವಾಡವಲ್ಲ, ನಿಸರ್ಗದ ನಿಯಮ. ಈ ಎರಡೂ ಕತೆಯಲ್ಲಿ ಹಳ್ಳಿಯ ಕಷ್ಟ-ಕಾರ್ಪಣ್ಯದ ಬದುಕು ಮನೋಜ್ಞವಾಗಿ ಮೂಡಿಬಂದಿದೆ.

ವೈದ್ಯರು ಧನ ಪಿಶಾಚಿಗಳಾಗಿ ಕೇವಲ ಹಣಕ್ಕಾಗಿ ವೃತ್ತಿ ಮಾಡದೆ, ಮಾನವೀತೆಯನ್ನು ಮೈಗೂಡಿಸಿಕೊಳ್ಳಬೇಕೆಂಬ ಆಶಯವನ್ನು ತೋರುವ 'ಮಾಯದ ಮನೆ' ಹೆಚ್ಚು ಕಾಲ್ಪನಿಕವೆಂದು ತೋರುತ್ತದೆ. 'ದೆವ್ವದ ಕತೆ' ಮುತ್ತಣ್ಣನಂತ ಮೋಸಗಾರರು ಭೂತ ಪಿಶಾಚಿಗಳ ಕಾಟವನ್ನು ಸೃಷ್ಟಿಸಿ, ನಂಬಿದವರಿಗೆ ಅನ್ನ ಹಾಕುವ ಧಣಿಗೆ ಮೋಸ ಮಾಡುವ ಕುತಂತ್ರವನ್ನು ಚಿತ್ರಿಸುತ್ತದೆ. ಮುಗ್ಧ ಹಳ್ಳಿಯ ಜನರು ಭೂ-ಪ್ರೇತಗಳ ಕಾಟದಿಂದ ಮುಕ್ತವಾಗಲು ಅನುಸರಿಸುವ ಮಾರ್ಗಗಳ ರೋಮಾಂಚಕಾರಿ ಚಿತ್ರಣ ಈ ಕತೆಯಲ್ಲಿದೆ. ಈ ಮೌಢ್ಯಗಳಿಂದ ಜನರನ್ನು ಹೊರತರುವ ಆಶಯ ಇಲ್ಲಿ ಪ್ರಧಾನವಾಗಿದೆ.

'ನನ್ನ ದೇವರು ಮತ್ತು ಇತರ ಕತೆಗಳು' ಸಂಕಲದ ಕತೆಗಳು ಹೆಚ್ಚು ಕಲಾತ್ಮಕತೆಯಿಂದ ಕೂಡಿದ್ದು, ವಿಶಿಷ್ಟ ವಸ್ತು ಹಾಗೂ ಆಶಯಗಳಿಂದ ಪ್ರಸಿದ್ಧವಾಗಿದೆ. ಮಲೆನಾಡಿನ ಜೀವನವನ್ನು ಚಿತ್ರಿಸುವ 'ಸಾಲದ ಮಗು' ಕತೆಯು ತಂದೆಯ ಸಾಲದ ಹೊರೆಯನ್ನು ತೀರಿಸಲು ಎಂಟು ವರ್ಷದ ಸುಬ್ಬಗೌಡರ ಮನೆಯಲ್ಲಿ ಜೀತದಾಳಾಗಿ ದುಡಿದು ದುರಂತವನ್ನಪ್ಪುವುದನ್ನೇ ವಸ್ತುವನ್ನಾಗಿ ಒಳಗೊಂಡಿದೆ. ಸುಬ್ಬನ ಸಾವು ಗೌಡನಿಗೆ ಮುಖ್ಯವಾಗುವುದಿಲ್ಲ. ಬದಲಾಗಿ 'ಆಯಾ ಮುನ್ನೂರು ರೂಪಾಯಿ ಮನೆಗೆ ಬಂತು' ಎಂದು ವ್ಯಸನಪಡುವುದು. ಸುಬ್ಬನ ದುರಂತದ ಮೂಲಕ 'ಶೋಷಕ ಸಮಾಜ'ವನ್ನು ಬಿಂಬಿಸುತ್ತಾರೆ. ಕಾವಿಯ ಮಹತ್ತ್ವವ'ನ್ನು ಬಹಳ ವಿಡಂಬನಾತ್ಮಕವಾಗಿ ಬಿಂಬಿಸುವ ಕತೆಗಳೆಂದರೆ 'ಗುಪ್ತಧನ ಹಾಗೂ 'ವೈರಾಗ್ಯದ ಮಹಿಮೆ' ಮೌಢ್ಯದಿಂದಾಗುವ ಅನಾಹುತವೇ ಇವುಗಳ ಪ್ರಧಾನವಸ್ತು. ಜನರಲ್ಲಿ ವೈಚಾರಿಕತೆಯ ಅರಿವು ಉಂಟು ಮಾಡುವುದೇ ಇಲ್ಲಿನ ಆಶಯವಾಗಿದೆ.

ಇಡೀ ಸಮಾಜವನ್ನು ತನ್ನ ಮೂಗಿನ ನೇರಕ್ಕೆ ನೋಡುವ, ತನ್ನ ದೌರ್ಬಲ್ಯವನ್ನೇ ಜಗತ್ತಿಗೆ ಆದರ್ಶವೆಂದು ಸಾಧಿಸುವ ಮಾನಸಿಕ ಟೊಳ್ಳುತನವುಳ್ಳ ವ್ಯಕ್ತಿಯ ಕುಬ್ಜತನವನ್ನು 'ಆದರ್ಶ ಸಾಧನೆ' ಎಂಬ ಕತೆಯಲ್ಲಿ ಚಿತ್ರಿಸಿದ್ದಾರೆ.

ವಾಸ್ತವಿಕತೆಯ ಅರಿವು ಪ್ರತಿಯೊಬ್ಬರಿಗೂ ಇರಬೇಕು ಎಂಬ ಆಶಯ ಇಲ್ಲಿ ವ್ಯಕ್ತವಾಗುತ್ತದೆ.

ಸ್ವಗತದಲ್ಲಿಯೇ ಸಾಗುವ 'ಔದಾರ್ಯ' ಎಂಬ ಕತೆ 'ಅತಿಯಾದ ಔದಾರ್ಯದಿಂದ ಬದುಕು ನಾಶ'ವಾಗುತ್ತದೆ. ಎಂಬ ವಸ್ತುವನ್ನು ಒಳಗೊಂಡಿದೆ. ಡೇವಿಡ್ ಮಾಸ್ಟರರು ತಮ್ಮ ಹೆಂಡತಿಯ ತಪ್ಪನ್ನು ಔದಾರ್ಯದಿಂದ ಮನ್ನಿಸುತ್ತಾರೆ. ಆಕೆಯ ನಿರ್ಲ್ಯಕ್ಷದಿಂದ ಮಗು ಕಣ್ಮುಚ್ಚಿದಾಗ ಆಕೆಯನ್ನು ಶಿಕ್ಷಿಸದೆ ಔದಾರ್ಯ ತೋರುತ್ತಾರೆ. ಇದರಿಂದ ಅವರು ಆತ್ಯಹತ್ಯೆ ಮಾಡಿಕೊಳ್ಳಬೇಕಾಗುತ್ತದೆ. ಈ ಕತೆ ಔದಾರ್ಯದ ಮಿತಿಯನ್ನೇ ಆಶಯವಾಗಿ ಹೊಂದಿದೆ.

ನನ್ನ ದೇವರು ಮತ್ತು ಇತರ ಕಥೆಗಳು ಸಂಕಲನದ ಕತೆಗಳನ್ನು ಗಮನಿಸಿದಾಗ "The Eight Stories of the book are in a word, eight germs" ಎಂಬ ಹೇಳಿಕೆಯ ಸತ್ಯದ ಅರಿವಾಗುತ್ತದೆ ಎಂಬ ಎಚ್.ಬಿ. ಯಶೋಧ ರವರ ಹೇಳಿಕೆ ಹೆಚ್ಚು ಔಚಿತ್ಯಪೂರ್ಣವೆನಿಸುತ್ತದೆ. ಈ ಎರಡೂ ಸಂಕಲನಗಳ ಕಥೆಗಳು ಬರಿಯ ಕಥೆಗಳಾಗಿರದೆ ಸಮಕಾಲೀನ ನಿಲುವುಗನ್ನಡಿಗಳಾಗಿವೆ. ಪ್ರತೀ ಕತೆಯಲ್ಲೂ ವಿಭಿನ್ನ ವಸ್ತು, ಆಶಯಗಳಿದ್ದು ಕತೆಗಳ ಅಂತಃಸತ್ತ್ವವನ್ನು ಹೆಚ್ಚಿಸಿವೆ. ಅಲ್ಲದೆ, ಕುವೆಂಪು ಅತ್ಯಂತ ಶಕ್ತಿಯುತವಾಗಿ ಔಚಿತ್ಯಪೂರ್ಣವಾಗಿ ಪರಿಣಾಮಕಾರಿಯಾಗಿ ಭಾಷೆಯನ್ನು ದುಡಿಸಿಕೊಂಡಿರುವುದನ್ನು ಕಾಣಬಹುದು.

ಕುವೆಂಪುರವರ ಪೂರ್ಣಸತ್ಯ, ಪೂರ್ಣದೃಷ್ಟಿಯ ಅಂಶವು, ಅವರ ಕಾದಂಬರಿಗಳೆರಡರಲ್ಲೂ ವ್ಯಕ್ತವಾಗಿದೆ. 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಎರಡೂ ಕಾದಂಬರಿಗಳ ವಸ್ತು, ಮಲೆನಾಡಿನ ಜನಜೀವನದ ಬದುಕು-ಬವಣೆ, ನೋವು-ನಲಿವು, ಆಚಾರ-ವಿಚಾರ, ಸಂಸ್ಕೃತಿಗಳನ್ನೇ ಒಳಗೊಂಡದ್ದಾಗಿದೆ. ಮಲೆನಾಡಿನ ಪರಿಸರದ ಸಹಸ್ರ ರೂಪಗಳ ಭವ್ಯತೆ, ಮಲೆನಾಡಿನ ಬದುಕಿನ ಸಂಘರ್ಷ, ಜಟಿಲತೆ, ವೈಚಿತ್ರ್ಯಗಳಿಂದ ಕೂಡಿದೆ. ಮಲೆನಾಡಿನ ಪ್ರಾದೇಶಿಕ ವಿವರಗಳನ್ನು ಒಳಗೊಂಡಿರುವುದರಿಂದ 'ಪ್ರಾದೇಶಿಕ ಕಾದಂಬರಿಗಳು' ಎಂದು ಪ್ರಸಿದ್ಧವಾಗಿದ್ದರೂ ಇಲ್ಲಿರುವ ಜೀವನ ಪ್ರೇಮ, ನೋವು-ನಲಿವುಗಳ ಅನಾವರಣ, ವಾಸ್ತವಿಕತೆ ಹಾಗೂ ಆದರ್ಶ ಸಮ್ಮಿಲನದಿಂದ ವಿಶ್ವವ್ಯಾಪಕ ಕೃತಿಗಳಾಗಿ ಮನ್ನಣೆ ಪಡೆಯುತ್ತವೆ. ಕುವೆಂಪುರವರ ಕಾದಂಬರಿಗಳ ಬಗೆಗೆ ಬಸವರಾಜ ಕಟ್ಟೀಮನಿಯವರು ಹೇಳುವ 'ಜೀವನ ಹೇಗಿದೆಯೆಂಬುದನ್ನು

ತಿಳಿಸುವುದರ ಜೊತೆಯಲ್ಲೇ ಜೀವನ ಹೇಗೆ ಇರಬೇಕು ಎಂಬುದನ್ನು ಅದು ಸೂಚ್ಯವಾಗಿ ತಿಳಿಸುತ್ತದೆ'. ಎಂಬ ಮಾತುಗಳು ಹೆಚ್ಚು ಅರ್ಥಪೂರ್ಣ ಎನಿಸುತ್ತದೆ.

ಮೊದಲಿಗೆ 'ಕಾನೂರು ಹೆಗ್ಗಡಿತಿ'ಯ ವಸ್ತು, ಆಶಯವನ್ನು ಗಮನಿಸುವುದಾದರೆ, ಹೊರಗಿನ ಸಂಪರ್ಕವೂ ತೀರ ಕಡಿಮೆಯಿರುವ ಮಲೆನಾಡಿನಲ್ಲಿ ಹುಟ್ಟಿ ಹೂವಯ್ಯ ಮೈಸೂರಿನಲ್ಲಿ ಆಧುನಿಕ ವಿಧ್ಯಾಭ್ಯಾಸ ಪಡೆಯುತ್ತಾರೆ. ಅಲ್ಲಿ ಹೊಸ ವಿದ್ಯಾಭ್ಯಾಸದ ಮೂಲಕ ಪಾಶ್ಚಿಮಾತ್ಯ ವಿಚಾರ, ನಾಗರಿಕತೆಗಳಿಗೆ ಸಾಕಷ್ಟು ತೆರೆದುಕೊಳ್ಳುತ್ತಾನೆ. ಅವುಗಳಿಂದ ಪ್ರಭಾವಿತನಾಗುತ್ತಾನೆ. ಅಲ್ಲದೇ, ರಾಷ್ಟಾದ್ಯಂತ ಆ ಸಂದರ್ಭದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ-ಸ್ವದೇಶ-ಸ್ವಸಂಸ್ಕೃತಿ ಚಳುವಳಿಗಳಿಂದಲೂ ಪ್ರಭಾವಿತನಾಗುತ್ತಾನೆ. ಓದನ್ನು ಮುಂದುವರೆಸಬೇಕೆಂಬ ಅಪೇಕ್ಷೆಯಿದ್ದರೂ ಅದು ಕೈಗೂಡದೆ ಮರಳಿ ಊರಿಗೆ ಹಿಂತಿರುಗುವ ಸನ್ನಿವೇಶ ಎದುರಾಗುತ್ತದೆ. ಬೇಸಿಗೆ ರಜೆಯ ಸಂದರ್ಭದಲ್ಲಿ ಕಾನೂರಿಗೆ ಹಿಂದಿರುಗತ್ತಿರುವ ಹೂವಯ್ಯ ಮತ್ತು ರಾಮಯ್ಯ ತುಂಗಾನದಿಯ ಕಲ್ಲುಸಾರವನ್ನು ದಾಟುವ ವರ್ಣನೆಯೊಂದಿಗೆ ಪ್ರಾರಂಭವಾಗುತ್ತದೆ.

ಇಡೀ ಕಾದಂಬರಿ ಎರಡು ತಲೆಮಾರಿನ ಜನ-ಜೀವನದ ಚಿತ್ರಣವನ್ನು ಚಿತ್ರಿಸಿದ್ದಾರೆ. ಚಂದ್ರಯ್ಯಗೌಡ, ಸಿಂಗಪ್ಪಗೌಡ, ಶಾಮಯ್ಯಗೌಡ, ಅಣ್ಣಯ್ಯಗೌಡ, ವೆಂಕಪ್ಪಯ್ಯ ಸೇರೆಗಾರ ಹಾಗೂ ಗೌರಮ್ಮ, ನಾಗಮ್ಮ ಮೊದಲಾದವರು ಒಂದು ತಲೆಮಾರಿಗೆ ಸೇರಿದವರಾದರೆ ಹೂವಯ್ಯ, ರಾಮಯ್ಯ, ಕೃಷ್ಣಪ್ಪ, ಚಿನ್ನಯ್ಯ ಮತ್ತು ಪುಟ್ಟಣ್ಣ ಮತ್ತು ಸುಬ್ಬಮ್ಮ, ಸೀತೆ ಮೊದಲಾದವರು ಇನ್ನೊಂದು ತಲೆಮಾರಿಗೆ ಸೇರಿದವರು.

ನಾಲ್ಕನೆಯ ಸಂಬಂಧವಾಗಿ ಸುಬ್ಬಮ್ಮನನ್ನು ಮದುವೆಯಾದ ಚಂದ್ರೇಗೌಡರು ತಮ್ಮ ಅತಿಯಾದ ಕಾಮಾಸಕ್ತಿ ಹಾಗೂ ದುರಾಸೆಗಳಿಂದ ದುರಂತದಲ್ಲಿ ಪರ್ಯಾವಸನವಾಗುತ್ತಾರೆ. ಅವರ ಪತ್ನಿ ಸುಬ್ಬಮ್ಮನ ಬಾಳು, ಚಂದ್ರಯ್ಯಗೌಡರ ಸಾವಿನ ಬಳಿಕ ಸೇರೇಗಾರರ ಕುಟಿಲತೆಗಳಿಂದಾಗಿ ಆಕೆ ಗರ್ಭಿಣಿಯಾಗಿ ಅಪಮಾನದಿಂದ ಪಾರಾಗಲು ಗರ್ಭಪಾತಕ್ಕಾಗಿ ನಾಟಿ ಔಷಧಿ ತಿಂದು ದುರಂತದಲ್ಲಿ ದಾರುಣ ಸಾವನ್ನಪ್ಪುತ್ತಾಳೆ. ಬಡತನದಿಂದಾಗಿ ಹುಟ್ಟಿನಿಂದ ಸಾಯುವವರೆಗೂ ಕಣ್ಣೀರಿನಲ್ಲೇ ತೇಲಿ ಮುಳುಗುವ ಹಳ್ಳಿಯ ಸ್ತ್ರೀಯ ಪ್ರತಿನಿಧಿಯಂತಿದ್ದಾಳೆ. ಮಲೆನಾಡಿನ ಪ್ರಮುಖ ಹಳ್ಳಿ ಕಾನೂರು ಹಾಗೂ ಅದರ

ಸುತ್ತ-ಮುತ್ತಲ ಕೆಳಕಾನೂರು, ಸೀತೆಮನೆ, ಮುತ್ತಳ್ಳಿ, ಹಳ್ಳಿಗಳಲ್ಲಿ ಇಡೀ ಕಾದಂಬರಿ ಕ್ಷೇತ್ರ ಹರಡಿಕೊಂಡಿದೆ. ಕಾನೂರು ಮನೆತನ ಆ ಭಾಗದಲ್ಲೆಲ್ಲಾ ಶ್ರೀಮಂತ ಹಾಗೂ ಹಿರಿಯ ಮನೆತನ ಎಂದು ಹೆಸರಾಗಿರುತ್ತದೆ.

ಈ ಮನೆತನವು ಹಲವು ಕಾರಣಗಳಿಂದ ಒಡೆದು ಮತ್ತೆ ಒಂದಾಗುವುದೇ ಕಥೆಯ ಮುಖ್ಯ ಎಳೆಯಾಗಿದೆ. ಈ ಎಳೆಯ ಸುತ್ತಲೂ ಹೆಣೆದು ಕೊಳ್ಳುವ ಕತೆ ಮಲೆನಾಡಿನ ಜೀವನವನ್ನೇ ಪ್ರಧಾನವಾಗಿ ಚಿತ್ರಿಸುತ್ತದೆ. ಚಂದ್ರಯ್ಯಗೌಡರು, ಸುಬ್ಬಮ್ಮ, ಹೂವಯ್ಯ, ರಾಮಯ್ಯ ಸೀತೆ ಈ ಐದು ಪ್ರಮುಖ ವ್ಯಕ್ತಿಗಳ ಸುತ್ತಲೂ ಕಥೆ ಸುತ್ತುತ್ತದೆ. ಮಲೆನಾಡಿನ ಮೌಢ್ಯವನ್ನು ಈ ಮೌಢ್ಯವನ್ನೇ ಬಂಡವಾಳವನ್ನಾಗಿ ಮಾಡಿಕೊಂಡಿರುವ ವರ್ಗವನ್ನು ವಿಡಂಬಿಸುತ್ತಾ ವೈಚಾರಿಕ ಪ್ರಜ್ಞೆಯನ್ನು ಮೂಡಿಸಲು ತೊಡಗುವ ಹೂವಯ್ಯ ತನ್ನ ವೈಯಕ್ತಿಕ ಜೀವನದಲ್ಲಿ ಯಾವುದೇ ಸಾಂಸರಿಕ ಸುಖವನ್ನು ಅನುಭವಿಸುವಲ್ಲಿ ವಿಫಲನಾಗುತ್ತಾನೆ. ಜನ್ಮಾಂತರದ ಸಂಬಂಧ ತನಗು-ಸೀತೆಗೂ ಇದೆ ಎಂಬ ವಿಧಿವಿಲಾಸವನ್ನು ಗ್ರಹಿಸಿದರೂ ಸೀತೆಯನ್ನು ವಿವಾಹವಾಗಲು ಆತನಿಗೆ ಸಾಧ್ಯವಾಗುವುದೇ ಇಲ್ಲ. ಸೀತೆಯೂ ಹೂವಯ್ಯನನ್ನು ಚಿಕ್ಕಂದಿನಿಂದಲೂ ಪತಿಯಂತೆ ಆರಾಧಿಸಿದರೂ ಜೋಯಿಸರ ಕುತಂತ್ರದಿಂದ ರಾಮಯ್ಯನನ್ನು ವರಿಸುವ ಸಂದರ್ಭ ಎದುರಾಗುತ್ತದೆ.

ಹೊಸ-ಹೊಸ ವಿಷಯಗಳನ್ನು, ಆಧ್ಯಾತ್ಮಿಕ ವಿಚಾರ ಧಾರೆಗಳನ್ನು ಹೂವಯ್ಯನ ಸಾನಿಧ್ಯದಿಂದ ಅರಿತು, ಹೊಸ ಭಾವಗಳನ್ನು ಮೂಡಿಸಿ ಕೊಂಡಿರುತ್ತಾಳೆ. ಹೂವಯ್ಯನಿಗೆ ತಾನು ದಮಯಂತಿಯಾಗುತ್ತೇನೆ. ಚಂದ್ರಮತಿ ಯಾಗುತ್ತೇನೆ. ಸಾವಿತ್ರಿಯಾಗುತ್ತೇನೆ. ನಿಜವಾಗಿಯೂ ಸೀತೆಯಾಗುತ್ತೇನೆ ಎಂದು ಸಂಭ್ರಮದಿಂದ ಹೇಳಿಕೊಳ್ಳುತ್ತಾಳೆ. ಆದರೆ ಇದ್ಯಾವುದೂ ಕೈಗೂಡದೆ ಆಕೆ ಮನೋರೋಗಿಯಾಗಿ ಕಡೆಗೆ ಹೂವಯ್ಯನ ಸಾನಿಧ್ಯದಲ್ಲೇ ಆಧ್ಯಾತ್ಮಿಕ ಅನುಭೂತಿ ಪಡೆಯುತ್ತಾಳೆ. ಇಡೀ ಕಾದಂಬರಿಯಲ್ಲಿ ಬರುವ ಪಾತ್ರವೈವಿಧ್ಯ ಅಚ್ಚರಿ ಮೂಡಿಸುವಂಥದ್ದು, ಮನುಷ್ಯಪಾತ್ರಗಳಲ್ಲದೆ ಟೈಗರು, ರೂಬಿ, ಡೈಮೆಂಡ್, ರೋಜಿ, ಚಾಪ್ಸ್, ಕೊತ್ವಾಲ ಮೊದಲಾದ ನಾಯಿಗಳು, ಬಲೀಂದ್ರನೆಂಬ ಹೋತ, ಲಚ್ಚನೆಂಬ ಎತ್ತು ಇವೇ ಮೊದಲಾದ ಪ್ರಾಣಿಗಳೂ ಮಲೆನಾಡಿನ ಬದುಕಿನ ಅಂಗಗಳಾಗಿ ಚಿತ್ರಿತವಾಗಿದೆ. ಈ ಕಾದಂಬರಿಯಲ್ಲಿ ವ್ಯಕ್ತವಾಗಿರುವ ಸಾಮಾಜಿಕ ಪ್ರಜ್ಞೆ, ವೈಚಾರಿಕ ಪ್ರಜ್ಞೆ, ಸಂಬಂಧಗಳ ಮೌಲ್ಯ, ಸೌಂದರ್ಯದೃಷ್ಟಿ, ಪ್ರಧಾನ ಆಶಯಗಳಾಗಿ ಮೂಡಿಬಂದಿವೆ.

ಈ ಕಾದಂಬರಿಯನ್ನು ಕುರಿತು ಅನೇಕ ವಿಮರ್ಶಕರು ಮಹಾಕಾವ್ಯ . ಮಹಾಕಾದಂಬರಿ ಎಂದೆಲ್ಲ ಕರೆದಿದ್ದಾರೆ. ರಂ ಶ್ರೀ. ಮುಗಳಿಯವರು, "ಮಲೆನಾಡಿನ ಚರಾಚರ ಸೃಷ್ಟಿಯ ಸಾರವನ್ನೆಲ್ಲ ಸೆರೆಹಿಡಿಯಲು ಪುಟ್ಟಪ್ಪನವರು ಮಾಡಿದ ಸಾಹಸವು ಅದ್ಭುತವೂ ರಮ್ಯವೂ ಆಗಿರುತ್ತದೆ. ಆಯಾ ಪ್ರದೇಶದ ಜೀವನದ ವಿವಿಧತೆಯನ್ನು ಜಟಿಲತೆಯನ್ನು ತೋರಿಸುವ ಹರವು ಇದರಲ್ಲಿ ಬಂದ ಕಾರಣ ಮಹಾಕಾದಂಬರಿ ಎಂಬ ಬಿರುದಿಗೆ ಇದು ಅರ್ಹವಾಗಿದೆ" ಎಂದು ಅಭಿಪ್ರಾಯ ಪಡುತ್ತಾರೆ. ಅಲ್ಲದೆ, ಕೀರ್ತಿನಾಥ ಕುರ್ತುಕೋಟಿಯವರು, "ಮುಖ್ಯವಾಗಿ ಇದು ಒಂದು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಮನುಷ್ಯನ ಕ್ರಿಯೆಗಳನ್ನು ಅವುಗಳ ಸಹಜತೆಯಲ್ಲೇ ವರ್ಣಿಸುವ ಕೃತಿ ಇದಾಗಿದೆ. ಈ ಕಾದಂಬರಿಯಲ್ಲಿ ಉಕ್ಕುವ ಚೈತನ್ಯಪ್ರವಾಹ ಬೇರೆ ಯಾವ ಕನ್ನಡ ಕಾದಂಬರಿಯಲ್ಲೂ ಇಲ್ಲ. ಕುವೆಂಪು ಬರೆದ ಮಹಾಕಾವ್ಯ ಇದೊಂದೇ" ಎಂದು ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯಗಳನ್ನು ಒಪ್ಪಿಕೊಳ್ಳಬಹುದಾದರೂ ಕುವೆಂಪುರವರ ಸಣ್ಣ ಕತೆಗಳು ಹಾಗೂ 'ಮಲೆಗಳಲ್ಲಿ ಮದುಮಗಳು'. 'ಹೆಗ್ಗಡಿತಿ'ಗಿಂತಲೂ ಹೆಚ್ಚಿನ ಪ್ರಶಂಸೆ ಪಡೆದಿವೆ. ವಿಭಿನ್ನ ಚಿಂತನಾಕ್ರಮ, ಭಾವುಕತೆ, ರಮ್ಯತೆಗಳ ದೃಷ್ಟಿಯಿಂದ 'ಹೆಗ್ಗಡಿತಿ'ಗಿಂತಲೂ ಪ್ರಧಾನ ಪಾತ್ರ ವಹಿಸುತ್ತವೆ. ಕನ್ನಡ ಸಾಹಿತ್ಯದಲ್ಲಿ ಸ್ಥಾಯಿಯಾಗಿ ನಿಂತಿವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿ 'ಕಾನೂರು ಹೆಗ್ಗಡಿತಿ' ರಚನೆಯಾದ ಮೂರು ದಶಕಗಳ ನಂತರ ಬಂದ ಕಾದಂಬರಿ. 'ಕಾನೂರು ಹೆಗ್ಗಡಿತಿ'ಗೆ ಹೋಲಿಸಿದಾಗ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದಟ್ಟವಾದ ಜೀವನ ಚಿತ್ರಣ ಮೂಡಿಬಂದಿದೆ. ಕಾದಂಬರಿಯ ಬಂಧವನ್ನು ನಿಯಂತ್ರಿಸುವ ಯಾವ ಕೇಂದ್ರ ಪಾತ್ರವೂ ಇಲ್ಲಿಲ್ಲ. 'ಇಲ್ಲಿ ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ!' ಎಂದು ಕುವೆಂಪು ಪ್ರಾರಂಭದಲ್ಲಿ ಓದುಗರಿಗೆ ನಿವೇದಿಸಿರುವುದನ್ನು ನೋಡಿದಾಗ ಮನವರಿಕೆಯಾಗುತ್ತದೆ. 'ಇಲ್ಲಿ ಎಲ್ಲಕ್ಕೂ ಇದೆ ಅರ್ಥ: ಯಾವುದೂ ಅಲ್ಲ ವ್ಯರ್ಥ: ನೀರೆಲ್ಲ ಊ ತೀರ್ಥ !'. ವ್ಯಕ್ತಿಯೊಬ್ಬನ ಜೀವನಕ್ಕೆ ಆದಿ ಮಧ್ಯ ಅಂತ್ಯಗಳಿವೆ. ಆದರೆ ಇವುಗಳನ್ನು ನಿಖರವಾಗಿ ಗುರುತಿಸುವುದು ಬಹಳ ಕಷ್ಟ. ನಿರಂತರವಾದ ಜೀವನದ ಓಟದಲ್ಲಿ ಇಂದು ಮುಖ್ಯವೆಂದು ಕಂಡು ಬರುವುದು, ನಾಳೆ ಅರ್ಥಹೀನವಾಗಿ ಕಾಣಬಹುದು. ಆದರೆ, ಇದೆಲ್ಲದರ ಹಿಂದೆ ಮೂಲಸತ್ತ್ವವೊಂದು ನಿರಂತರವಾಗಿ ಅಂತರ್ಗಾಮಿಯಾಗಿ ಹರಿಯುತ್ತಿರುತ್ತದೆ. ಜೀವಿಯ ಬದುಕು ನಿರಂತರತೆಯಲ್ಲಿ ಪರ್ಯಾವಸಾನಗೊಳ್ಳುವಂತೆ ಮಾಡುವ ಶಕ್ತಿ

ಎಂದರೆ 'ಕಾಮ'. ಅದರ ಬಹುಮುಖಗಳನ್ನು ಮಲೆನಾಡಿನ ಪರಿಸರದಲ್ಲಿ ಗುರುತಿಸುವುದೇ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಧಾನ ಆಶಯವಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿನ ಪ್ರಣಯ-ಪ್ರಸಂಗಗಳ ಚಿತ್ರಣ, ಸಮಾಜದ ವಿವಿಧ ಸ್ತರಗಳ ಸಂಬಂಧಗಳ ಚಿತ್ರಣ, ನೈತಿಕ ವಿಕಾಸದ ಚಿತ್ರಣ-ಎಲ್ಲವುದಕ್ಕೂ ಒಂದು ಸಮಗ್ರತೆಯ ಒದಗಿಸಿಕೊಡುವುದರ ಮೂಲಕ ಒಂದು ಬಂಧನವನ್ನೊದಗಿಸುವ 'ಕೇಂದ್ರ ವಸ್ತು'ವೆಂದರೆ, ಎಲ್ಲ ಮುಖ್ಯ ಪಾತ್ರಗಳೂ ಕಾದಂಬರಿಯಲ್ಲಿ ಮತ್ತೊಬ್ಬ ವ್ಯಕ್ತಿ ಸಂಕಟಕ್ಕೆ ವಿಷಯ ಪರಿಸ್ಥಿತಿಗೆ ಸಿಕ್ಕಾಗ ಅವರನ್ನು ಪಾರು ಮಾಡುವುದಕ್ಕೆ ಸಹಾಯಕವಾಗಿರುವುದೇ ಆಗಿದೆ.

ಪ್ರಣಯದ ಸ್ತರದಲ್ಲಿ, ತಿಮ್ಮಿಯನ್ನು ವಿಷಯಪರಿಸ್ಥಿತಿಯಿಂದ ಪಾರು ಮಾಡುವ ಪಣತೊಟ್ಟು ಧೃಢತೆಯಿಂದ ಅದನ್ನು ಸಾಧಿಸುವ, ಆದರೆ ಪರಿಸರವನ್ನೆದುರಿಸಿ ನಿಲ್ಲಲಾರದೆ ಅಲ್ಲಿಂದ ತಿಮ್ಮಿಯೊಡನೆ ಬೇರೆಡೆಗೆ ಹೋಗುವ 'ಗುತ್ತಿ', ಚಿನ್ನಮ್ಮನನ್ನು ಪಾರು ಮಾಡುವ 'ಮುಕುಂದಯ್ಯ', ಅದಕ್ಕೆ ಸಹಾಯಕರಾಗುವ 'ಐತ-ಪೀಂಚಲು', ಪರಿಸ್ಥಿತಿಯಿಂದ ಪಾರಾಗದೆ ದುರಂತ ಸಾವಿಗೀಡಾಗುವ 'ಕಾವೇರಿ', 'ದೇವಮ್ಮ' 'ನಾಗಕ್ಕ' 'ವೆಂಕಟಣ್ಣ' 'ನಾಗತ್ತೆ' ಹಾಗೂ 'ರಂಗಪ್ಪಗೌಡ-ಅಕ್ಕಣಿ' ಮುಂತಾದ ಜೋಡಿಗಳ ಏಳು-ಬೀಳುಗಳನ್ನು ಕಥಾವಸ್ತುವವನ್ನಾಗಿ ಒಳಗೊಂಡಿದೆ. ಮಾನವನ ಬದುಕಿನ ವಿವಿಧ ಮುಖಗಳನ್ನು ತೆರೆದಿಡುವ ಕುವೆಂಪುರವರ ಕಲಾದೃಷ್ಟಿ ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಹೀಗೆ ಕುವೆಂಪುರವರ ಕತೆಗಳು, ಕಾದಂಬರಿಗಳು ವಿಭಿನ್ನ ವಸ್ತು-ಕಥಾವಸ್ತು-ಆಶಯಗಳಿಂದ ವೈವಿಧ್ಯವಾಗಿವೆ. ಕತೆಗಳಲ್ಲಿ ಕಾದಂಬರಿಗಳಲ್ಲಿ ಸಮಾಜಮುಖಿ ಚಿಂತನೆ ವ್ಯಕ್ತವಾಗುತ್ತದೆ. ಅಲ್ಲದೇ, ಇವುಗಳಲ್ಲಿ ವೈಚಾರಿಕ ದೃಷ್ಟಿಕೋನ, ಧರ್ಮನಿರಪೇಕ್ಷ ಪ್ರಜ್ಞೆ ಶೋಷಣೆಯ ವಿರೋಧಿ ಪ್ರಜ್ಞೆಗಳು ಕಥೆ-ಕಾದಂಬರಿಯ ಪಾತ್ರಗಳ ಮುಖೇನ ವ್ಯಕ್ತವಾಗಿದ್ದು, ಭಾವೀ ಭಾರತದ ಭವಿತವ್ಯದ ಕಾಣ್ಕೆಯನ್ನು ಒಳಗೊಂಡಿವೆ. ಇಲ್ಲಿನ ಬಹುತೇಕ ಕತೆಗಳನ್ನು ವಿಶ್ಲೇಷಿಸಿದಾಗ ವಸ್ತು, ಆಶಯಗಳ ದೃಷ್ಟಿಯಿಂದ ಎಲ್ಲಾ ವರ್ಗದ, ಎಲ್ಲಾ ಪ್ರದೇಶದ ಜೀವಿಗಳಿಗೆ ಸಂಬಂಧಪಟ್ಟಿದ್ದರೂ 'ಪ್ರಾದೇಶಿಕತೆ' ಎಂಬ ಬಿಗಿ ಚೌಕಟ್ಟನ್ನು ಒಳಗೊಂಡಿರುವುದು

ಮಲೆನಾಡಿನ ಜೀವನದ ಬಗೆಗೆ ಕುವೆಂಪು ಹೊಂದಿರುವ ಕಾಳಜಿ, ಪ್ರೀತಿಯ ಸಂಕೇತವೇ ಆಗಿದೆ.

ವಸ್ತು-ಆಶಯಗಳ ದೃಷ್ಟಿಯಲ್ಲಿ ಇಟ್ಟು ಕೊಂಡಾಗ ನಮಗೆ ಕುವೆಂಪು ಅವರಿಗಿಂತ ತೇಜಸ್ವಿ ಹೆಚ್ಚು ಮುಖ್ಯವಾಗುತ್ತದೆ. ಏಕೆಂದರೆ, ತೇಜಸ್ವಿಯವರ ಕಥೆಗಳು-ಕಾದಂಬರಿಗಳೂ ಕೂಡ ಕುವೆಂಪುರವರ 'ವೈಚಾರಿಕ ಪ್ರಜ್ಞೆ', 'ಸಾಮಾಜಿಕ ಪ್ರಜ್ಞೆ', 'ಧರ್ಮನಿರಪೇಕ್ಷ ಭಾವ' ಇತ್ಯಾದಿ ಅಂಶಗಳನ್ನು ಒಳಗೊಂಡಿದ್ದರೂ ಅವು ಇಲ್ಲಿ ಭಿನ್ನ ಆಯಾಮ ಪಡೆದುಕೊಳ್ಳುತ್ತವೆ.

ಚಿದಂಬರ ರಹಸ್ಯದಲ್ಲಿ ತೇಜಸ್ವಿಯವರು ಜಾತಿ ಸಮುದಾಯಗಳ ಅಸಂಬದ್ಧ ಶ್ರೇಣೀಕರಣ ಹಾಗೂ ಶೋಷಣೆಗಳ ಚಿತ್ರವನ್ನು ಬಹಳ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಇಡೀ 'ಕೆಸರೂರು' ಜಾತಿ-ಮತಗಳೆಂಬ ಅಂಧಶ್ರದ್ಧೆಯಿಂದ ಉರಿದು ಭಸ್ಮವಾಗುವುದನ್ನು ಹೇಳುವ ಜೊತೆಗೆ ಈ 'ಜಾತಿ'ಎಂಬ ಪೆಡಂಭೂತವನ್ನು ಶಾಶ್ವತವಾಗಿ ನಿರ್ನಾಮ ಮಾಡುವ 'ದರ್ಶನ'ವನ್ನು ರಫೀ ಮತ್ತು ಜಯಂತಿ ಪಾತ್ರಗಳ ಮೂಲಕ ವ್ಯಕ್ತಪಡಿಸುತ್ತಾರೆ. ಈ 'ಆಶಯ'ವನ್ನು ಬಿಂಬಿಸುವ 'ಅವನತಿ' 'ಕುಬಿ ಮತ್ತು ಇಯಾಲ' ಹಾಗೂ 'ಅಬಚೂರಿನ ಪೋಸ್ಟಾಫೀಸು' ಕತೆಗಳು ತೇಜಸ್ವಿಯವರ 'ಧರ್ಮನಿರಪೇಕ್ಷ ಪ್ರಜ್ಞೆ'ಗೆ, 'ವೈಚಾರಿಕ ಪ್ರಜ್ಞೆ'ಗೆ ಸಾಕ್ಷಿಯಾಗಿದೆ. ಮೂಢನಂಬಿಕೆಯಿಂದ ಪ್ರಾಣ ಕಳೆದುಕೊಳ್ಳುವ ನತದೃಷ್ಟೆ ಇಯಾಲ, ಕುಬೇರಪ್ಪರವರ ಕೈಗುಣದಿಂದಲೇ ಸರ್ವರೋಗವೂ ವಾಸಿಯಾಗುತ್ತದೆಂಬ ಕುರುಡುನಂಬಿಕೆಯ ಜನಗಳು, ಸಮಕಾಲೀನ ಭಾರತವನ್ನು ಸಂಕೇತಿಸುತ್ತಾರೆ. ಅಧಿಕಾರಿ ಶಾಹಿ ಕೌರ್ಯ, ಜಾತಿಯ ಅನಾಹುತಗಳನ್ನು ಸಶಕ್ತವಾಗಿ ಬಿಂಬಿಸಿದ್ದಾರೆ ತೇಜಸ್ವಿ.

ತೇಜಸ್ವಿಯವರು ನವೋದಯ, ನವ್ಯ, ನವ್ಯೋತ್ತರ ಘಟ್ಟಗಳಲ್ಲಿ ಕೃತಿಗಳನ್ನೂ ರಚಿಸುತ್ತಾ ಬಂದರೂ ಯಾವುದೇ ಪಂಥದ ಹಣೆಪಟ್ಟಿಯನ್ನು ಅಂಟಿಸಿಕೊಳ್ಳದೇ ಸೃಜನಶೀಲ ಬರಹಗಾರರೆನಿಸಿದ್ದಾರೆ. ಅತೀ ಸೂಕ್ಷ್ಮವಾದ ವಿವರಗಳೂ ಕೂಡ ಇವರ ಬರೆಹದಲ್ಲಿ ವಿಶಿಷ್ಟತೆಯನ್ನು ಪಡೆದುಕೊಳ್ಳುತ್ತವೆ. ಸ್ವತಃ ಕೃಷಿಕರಾದ ಇವರ ಕತೆ, ಕಾದಂಬರಿಗಳಲ್ಲಿ ಕೃಷಿಕರ ಬವಣೆಗಳು, ಕಷ್ಟ-ನಷ್ಟಗಳೂ ಕೂಡ ವಸ್ತುವಾಗಿ ಬರುತ್ತವೆ. 'ಚಿದಂಬರ ರಹಸ್ಯ' ಹಾಗೂ 'ಜುಗಾರಿ ಕ್ರಾಸ್' ಕಾದಂಬರಿಗಳಲ್ಲಿ ಏಲಕ್ಕಿ ಬೆಳೆಗಾರರ ಬದುಕು-ಬವಣೆ, ಏಲಕ್ಕಿ ಬೆಳೆಗೆ ತಗುಲುವ

ರೋಗಗಳು, ಅವುಗಳಿಗೆ ನೀಡುವ ಔಷಧಗಳ ವಿವರ, ಮಧ್ಯಸ್ಥಿಕೆಗಾರರ ಹಾವಳಿಯಿಂದ ಕೃಷಿಕರು ಶೋಷಣೆಗೆ ಬಳಗಾಗುವ ವಾಸ್ತವ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಅಲ್ಲದೆ, ಜೇನುಕೃಷಿ, ಅದರ ವೈವಿಧ್ಯ, ಸಂಸ್ಕರಣೆಗೆ ಸಂಬಂಧಪಟ್ಟ ವಿವರಗಳನ್ನು ಕರ್ವಾಲೋ ಕಾದಂಬರಿ ಒಳಗೊಂಡಿದ್ದು, ಸ್ವತಃ ಅನುಭವವಿದುದ್ದರಿಂದ ತೇಜಸ್ವಿ ಇವುಗಳನ್ನು ಸಶಕ್ತವಾಗಿ ಚಿತ್ರಿಸಲು ಸಾಧ್ಯವಾಯಿತು. ಅಲ್ಲದೇ 'ಮಾಯಾಲೋಕ' ಕೃತಿಯಲ್ಲಿ 'ಮೆಣಸಿನ ಬೇಸಾಯ', 'ಕಾಫಿ ಬೇಸಾಯ'ದ ಬಗೆಗಿನ ವಿವರಗಳೂ ಸಾಕಷ್ಟಿವೆ. ಕುವೆಂಪುರವರ ಕೃತಿಗಳಲ್ಲಿ ಈ ರೀತಿಯ ನಿಖರವಾದ ಸವಿಸ್ತಾರವಾದ ಬೇಸಾಯದ ಅಂಶಗಳನ್ನು ಕಾಣಲು ಸಾಧ್ಯವಿಲ್ಲ. ಸ್ವತಃ ಬೇಸಾಯದ ಅನುಭವದ ಕೊರತೆ ಇದಕ್ಕೆ ಕಾರಣವಿರಬಹುದು. ಮೈಸೂರಿನ ನಗರ ಬಿಟ್ಟು ಮಲೆನಾಡಿನಲ್ಲಿ ಪ್ರಧಾನವಾಗಿ ಕೃಷಿಯನ್ನು ಮಾಡಿಕೊಂಡಿರಲು ಬಂದ ತೇಜಸ್ವಿಗೆ ತಮ್ಮ ಕೃತಿಗಳಲ್ಲಿ ಈ ಬಗೆಯ ಜೀವಂತಿಕೆ ತರಲು ಸಾಧ್ಯವಾಗಿದೆ. ಕುವೆಂಪು ಹಾಗೂ ತೇಜಸ್ವಿ ಬರವಣಿಗೆಯಲ್ಲಿ ಗಮನಿಸಬಹುದಾದ ಪ್ರಮುಖ ಅಂಶ ಇದಾಗಿದೆ.

ತೇಜಸ್ವಿಯವರ ಮೊದಲ ಕಥಾಸಂಕಲನ 'ಹುಲಿಯೂರಿನ ಸರಹದ್ದು' ಇದರಲ್ಲಿ ಲಿಂಗ ಬಂದ, ಪಂಜ್ರೋಳ್ಳಿ ಪಿಶಾಚಿಯ ಸವಾಲು, ಗುಡುಗು ಹೇಳಿದ್ದೇನು, ಊರ್ವಶಿ, ಹುಲಿಯೂರಿನ ಸರಹದ್ದು ಮತ್ತು ಗಾಂಧೀಜಿ ದೆಸೆಯಿಂದ ಎಂಬ ಆರು ಕತೆಗಳಿವೆ. ಇಲ್ಲಿರುವ ಕತೆಗಳನ್ನು ವಸ್ತುವಿನ ದೃಷ್ಟಿಯಿಂದ ವಿವೇಚಿಸಿದಾಗ ಯಾವುದೇ ಒಂದು ಬಗೆಯ ನಿರ್ಧಿಷ್ಟ ಧೋರಣೆ ಇಲ್ಲ. ನವಿರಾದ ಹಾಸ್ಯ, ಪ್ರೇಮ-ಕಾಮುಗಳ ಬಗೆಗೆ ಲೇಖಕರು ಕೊಡುವ ಅರ್ಥವಂತಿಕೆ ವ್ಯಕ್ತವಾಗಿದೆ.

ಭಯವನ್ನು ಸ್ಥಾಯಿಯನ್ನಾಗಿ ಉಳ್ಳ ಕಥೆ 'ಲಿಂಗ ಬಂದ' ಚಿಕ್ಕ ಮಕ್ಕಳಲ್ಲಿ ಭಯದ ಕಲ್ಪನೆ ಹೇಗೆ ಮೊಳಕೆಹೊಡೆಯುತ್ತದೆ. ಚಿಗುರುತ್ತದೆ ಬೆಳೆಯುತ್ತದೆ ಮತ್ತು ಬೇರೂರುತ್ತದೆ ಎಂಬುದನ್ನು ಸೂಕ್ಷ್ಮವಾಗಿ, ಮನೊವೈಜ್ಞಾನಿಕವಾಗಿ ಚಿತ್ರಿಸಿದ್ದಾರೆ. ಮನೆಯ ಆಳು ಲಿಂಗ ಮಲೆನಾಡಿನ ಪರಿಸರದಲ್ಲಿ ರಾತ್ರಿಯ ಹೊತ್ತಿನಲ್ಲಿ ಹಲಸಿನ ಬಿತ್ತವನ್ನು ಸುಡುತ್ತ ಕುಳಿತಿದ್ದಾಗ ಕಿಟ್ಟಿಗೆ ಈ ಕತೆಯನ್ನು ಹೇಳುತ್ತಾನೆ. ಕಿಟ್ಟಿ ತನ್ನ ತಂಗಿ ಸುಭದ್ರೆಗೆ ಈ ಕತೆಯನ್ನು ಹೇಳುತ್ತಾನೆ. ಆ ನೀರವವಾದ ಕತ್ತಲೆಯಲ್ಲಿ ಮಕ್ಕಳಲ್ಲಿ ರಾಕ್ಷಸ ಕಲ್ಪನೆ ಮಾಡಿ ಕಿಟ್ಟನೆ ಕಿರಚಿಕೊಳ್ಳುತ್ತವೆ. ಪ್ರಕೃತಿಯ ಬಗ್ಗೆ

ಮನುಷ್ಯನಲ್ಲಿ ಆವರಿಸಿರುವ ನಿಗೂಢತೆ, ಭಯದ ಭಾವನೆಗಳನ್ನು ಕತೆಯಲ್ಲಿ ಚಿತ್ರಿಸಿದ್ದಾರೆ. ಇದೇ ರೀತಿಯ 'ಭಯ'ದ ವಸ್ತುವನ್ನಾಗಿ ಉಳ್ಳ ಕತೆ 'ಪಂಜ್ರೊಳ್ಳಿ ಪಿಶಾಚಿಯ ಸವಾಲು'. ಸಂಪ್ರದಾಯವೇ ಮೈವೆತ್ತಂತಿದ್ದ ಅಜ್ಜ ಹೇಳುವ ಪಂಜ್ರೊಳ್ಳಿಯ ಕಥೆ. ಮಕ್ಕಳಲ್ಲಿ ಸುಳ್ಳು, ಕಳ್ಳತನ, ಕ್ಷುಲ್ಲಕತನ ನಡೆಯ ಕೂಡದೆಂದು 'ಪಿಶಾಚಿ'ಯ ಕಲ್ಪನೆಯನ್ನು ಹುಟ್ಟು ಹಾಕಿರಬಹುದೆಂಬ ಜಿಜ್ಞಾಸೆ ಕತೆಯಲ್ಲಿದೆ.

ಮಾನವೀಯ ಮೌಲ್ಯಗಳು ಆಧುನಿಕ ಪ್ರಪಂಚದಲ್ಲಿ ಮೌಲ್ಯಗಳನ್ನು ಕಳೆದುಕೊಳ್ಳುತ್ತಿವೆ. ಸ್ವಾರ್ಥ, ದುರಾಸೆಯ ಗುಣಗಳು ಮನುಷ್ಯರಲ್ಲಿದ್ದಾಗ ಎಂತಹ ಹೀನ ಕೃತ್ಯಕ್ಕೂ ಹಿಂಜರಿಯುವುದಿಲ್ಲ, ಎಂಬ ಅಂಶವೇ ವಸ್ತುವಾಗಿದೆ 'ಗುಡುಗು ಹೇಳಿದ್ದೇನು' ಕತೆಯಲ್ಲಿ. ಈ ಸಂಕಲನದ ಪ್ರಮುಖ ಕತೆ 'ಹುಲಿಯೂರಿನ ಸರಹದ್ದು' ವ್ಯಕ್ತಿಯ ವಿಕಸನಕ್ಕೆ ಮಿತಿಯಾಗಿ ನಿಲ್ಲಬಲ್ಲ ಪ್ರೀತಿ, ರಕ್ತಸಂಬಂಧ, ದೇವರು, ಧರ್ಮ, ಜಾತಿಗಳೇ ಇಲ್ಲಿ ಒಂದಕ್ಕೊಂದು ಹೆಣೆದುಕೊಂಡು ನಿಂತು ಸರಹದ್ದು ಗಳಾಗಿವೆ. ಹುಲಿಯೂರಿನ ಸರಹದ್ದನ್ನು ದಾಟಿ ಹೋಗಬೇಕೆನ್ನುವ, ತನ್ನನ್ನು ಬಂಧಿಸಿ ಹಿಡಿದಿರುವ ಶಕ್ತಿಯನ್ನು ಕಿತ್ತೊಗೆದು ತಾನು ಪ್ರೀತಿಸುವ ಅನ್ಯಜಾತಿಯ ನಳಿನಾಕ್ಷಿ ಎಂಬ ಹುಡುಗಿಯ ಜೊತೆ ಓಡಿ ಹೋಗಬೇಕೆಂಬ ಬಯಕೆ ಸೋಮುವಿನದು.

ಆದರೆ ಸುತ್ತಲಿನ ವಾತಾವರಣ, ಸಮಾಜದ ಬಂಧನ, ಜಾತಿಯ ಸಂಕೋಲೆ, ತಂದೆಯ ಅಧಿಕಾರಶಾಹಿ ವರ್ತನೆ, ತನಗೆ ಮದುವೆ ಮಾಡಬೇಕೆಂದಿರುವ ಇನ್ನೊಂದು ಹುಡುಗಿ–ಇವೆಲ್ಲಾ ಅವನಿಗೆ ಸಂಕೋಲೆಗಳಾಗುತ್ತವೆ. ಸೋಮು ಗರಡನಂತೆ ತಾನೂ ಸ್ವಚ್ಛಂದವಾಗಿ ಹಾರಾಡುತ್ತಾ ಬಾಳಬೇಕು. ಸಂಪ್ರದಾಯದ ಬಿಗಿ ಸಂಕೋಲೆಯನ್ನು ದಾಟಿ ಬಾಳಬೇಕು ಎಂದು ವೈಚಾರಿಕವಾಗಿ ಆಲೋಚಿಸುತ್ತಾನೆ. ಆದರೆ ಅದು ಸಾಧ್ಯವಾಗದೆ ಅಲ್ಲೇ ಅದೇ ಜಾಡಿನಲ್ಲಿ ಜೀವಿಸಬೇಕಾದ ಪರಿಸ್ಥಿತಿ ಉಂಟಾಗುತ್ತದೆ. ಬದಲಾವಣೆ ಒಬ್ಬನಿಂದ ಸಾಧ್ಯವಾಗುವುದಿಲ್ಲ. ಬದಲಾವಣೆಗೆ ಸಮುದಾಯ ಒತ್ತಾಸೆ ಬಹಳ ಅಗತ್ಯ ಎಂಬ ಆಶಯ ವ್ಯಕ್ತವಾಗುತ್ತದೆ. ಕುವೆಂಪುರವರ 'ವೈಚಾರಿಕ ನಿಲುವು', 'ವಿಶ್ವಮಾನವತಾ ಪ್ರಜ್ಞೆ' ಇಲ್ಲಿ ಸೂಚ್ಯವಾಗಿ ಬಂದಿದೆ.

'ಅಬಚೂರಿನ ಪೋಸ್ಟಾಫೀಸು' ಏಳು ಕತೆಗಳನ್ನು ಒಳಗೊಂಡಿರುವ ಸಂಕಲನ. ಇಲ್ಲಿ 'ತ್ಯಕ್ತ' 'ಅವನತಿ' 'ಕುಬಿ ಮತ್ತು ಇಯಾಲ' 'ತುಕ್ಕೋಜಿ'

'ಡೇರ್‌ಡೆವಿಲ್ ಮುಸ್ತಾಫ' 'ತಬರನ ಕಥೆ' ಮತ್ತು 'ಅಬಚೂರಿನ ಪೋಸ್ಟಾಫೀಸು' ಎಂಬ ಕತೆಗಳಿವೆ. ಈ ಕತೆಗಳಲ್ಲಿ ಆಧುನಿಕತೆಯಿಂದ ಉಂಟಾಗುವ ಅವಾಂತರಗಳು, ನಾಗರೀಕತೆ ಮತ್ತು ವ್ಯಕ್ತಿ ಸಮಸ್ಯೆಗಳ ನಡುವಿನ ತಾಕಲಾಟ, ಸಮಾಜದಲ್ಲಿ ಬೇರೂರಿರುವ ಭ್ರಷ್ಟಾಚಾರ, ಮೂಢನಂಬಿಕೆ, ಅಜ್ಞಾನ, ಕೊಳಕು, ಸ್ವಾರ್ಥ ರಾಜಕೀಯ, ಬಡತನ, ಜಾತಿ ವೈಷಮ್ಯ- ಇವೇ ಪ್ರಧಾನ ವಸ್ತುವಾಗಿದೆ. ಸಮಕಾಲೀನ ಸಮಾಜದ ವಾಸ್ತವತೆಯನ್ನು ಈ ಕತೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ.

ಅಬಚೂರಿನಲ್ಲಿ 'ಪೋಸ್ಟಾಫೀಸು' ಹೊಸದಾಗಿ ಬಂದುದರಿಂದ ಬೋಬಣ್ಣನ ಸಾಂಸಾರಿಕ ಜೀವನದ ನೆಮ್ಮದಿ ಹಾಳಾಗಿ ಇಡೀ ಊರಿಗೆ ಊರೇ ದುರಂತವಾಗುವುದೇ ಪ್ರಧಾನ ವಸ್ತು. ದುರಂತ ಮತ್ತು ವಿನೋದ ಎರಡೂ ಈ ಕತೆಯ ಪ್ರಧಾನ ಆಶಯ. ಹಂಗಾಮಿಯಾಗಿ ಪೋಸ್ಟ್ ಮಾಸ್ತರನಾಗಿ ನೇಮಕವಾದ ಬೋಬಣ್ಣನ ನೆಮ್ಮದಿಯಾದ ಸಂಸಾರದಲ್ಲಿ ಅಶಾಂತಿಯ ಅಲೆಗಳು ಹುಟ್ಟಿ ಆತನನ್ನು ದುಃಖಭರಿತನನ್ನಾಗಿ ಮಾಡುತ್ತದೆ. ಜಾನ್ ಸಾಹೇಬರ ಮಗ ಆಜೀಜನಿಗೆ ಬಂದ ಕವರನ್ನು ಹಣವಿರಬಹುದೆಂದು ಕದ್ದು ಒಡೆದು ನೋಡಿದಾಗ ಬೋಬಣ್ಣನಿಗೆ ನಗ್ನ ಸ್ತ್ರೀಯೊಬ್ಬಳ ಚಿತ್ರ ಸಿಗುತ್ತದೆ. ಆ ಚಿತ್ರದಿಂದ ಅವನಲ್ಲಿ ನಡವಳಿಕೆ ಬದಲಾಗುತ್ತದೆ. ಹೆಣ್ಣಿನ ಬಗೆಗೆ ಅವನಲ್ಲಿದ್ದ ಮೂಲ ಪ್ರವೃತ್ತಿಗಳು ಕೆರಳುತ್ತವೆ. ಇದರಿಂದ ಕಾವೇರಿ ಮತ್ತು ಬೋಬಣ್ಣನ ಮಧುರ ದಾಂಪತ್ಯ ದಿನೇ ದಿನೇ ಹದಗೆಡುತ್ತದೆ.

ಬೋಬಣ್ಣನ ವೈಯಕ್ತಿಕ ಸಂಸಾರದಲ್ಲಿ ಉಂಟಾದ ಅಶಾಂತಿ ಕೊನೆಗೆ ಇಡೀ ಅಬಚೂರಿನ ಜನತೆಯನ್ನೇ ತನ್ನ ತೆಕ್ಕೆಗೆ ತೆಗೆದುಕೊಂಡು ಬೋಬಣ್ಣ ಅಬಚೂರಿನಿಂದ ಓಡಿಹೋಗುವ ಅನಿವಾರ್ಯತೆ ಬರುತ್ತದೆ. ಜೀವನದ ಅಸಂಬದ್ಧತೆ ಹಾಗೂ ಆಧುನಿಕತೆಯಿಂದಾಗುವ ಅವಾಂತರಗಳನ್ನು ಹಾಸ್ಯ ಶೈಲಿಯಿಂದ ತೇಜಸ್ವಿ ಚಿತ್ರಿಸಿದ್ದಾರೆ. ಇದೇ ವಸ್ತುವನ್ನೇ ಪ್ರಧಾನವಾಗುಳ್ಳ ಮತ್ತೊಂದು ಕತೆ 'ತುಕ್ಕೋಜಿ'.

ಆಧುನಿಕತೆಯ ಆಕ್ರಮಣದಿಂದ ಹಳ್ಳಿಯ ಪರಿಸರದಲ್ಲಿ ಉಂಟಾಗುವ ಸಾಮಾಜಿಕ ತಲ್ಲಣ, ವೈಯಕ್ತಿಕವಾದ ದುರಂತಗಳು ಒಂದು ಸಮಾಜವನ್ನು ಹೇಗೆ ಕದಡಬಲ್ಲವು ಎಂಬುದನ್ನು ಕತೆ ಒಳಗೊಂಡಿದೆ. ಹಳ್ಳಿಯಲ್ಲಿ ಟೈಲರ್ ಆಗಿ ಕೆಲಸ ಮಾಡುವ ತುಕ್ಕೋಜಿಯ ವೈಯಕ್ತಿಕ ಜೀವನದಲ್ಲಿ ಉಂಟಾದ ಕೆಲವು ವೈಪರೀತ್ಯಗಳು ಹಾಗೂ ರೈಲ್ವೆ ನಿಲ್ದಾಣದ ಆಗಮನದಿಂದ ಊರಿನ ಮೇಲಾಗುವ

ಪರಿಣಾಮವನ್ನು ಕತೆಯಲ್ಲಿ ಚಿತ್ರಿಸಲಾಗಿದೆ. ಮಗುವಾದ ಮೇಲೆ, ಅತಿಯಾದ ಒತ್ತಡದ ಪರಿಣಾಮವಾಗಿ ಹೆಸರುವಾಸಿಯಾಗಿದ್ದ ತುಕ್ಕೋಜಿ ಗಿರಾಕಿಗಳಿಂದ ತೆಗಳಿಕೆಗೆ ಗುರಿಯಾಗುತ್ತಾನೆ. ಅವನ ಸಂಸಾರ ವಿರಸದ ಕೊಂಪೆಯಾಗುತ್ತದೆ. ದಿನೇ ದಿನೇ ತುಕ್ಕೋಜಿಗೆ ಕೆಲಸದ ರೂಪದಲ್ಲಿ ನಾಗರಿಕತೆಯ ಭಾರ ಬೀಳತೊಡಗಿ ಅವನ ಮನಸ್ಸು ಹದಗೆಡುತ್ತಾ ಸಾಗುತ್ತದೆ. ನಾಗರಿಕತೆ ಮತ್ತು ವೃತ್ತಿ ಸಮಸ್ಯೆಗಳ ತಾಕಲಾಟ ಕಥೆಯ ವಸ್ತುವಾಗಿದೆ.

ಸಮಾಜದ ಅವನತಿಯನ್ನು ಚಿತ್ರಿಸುವ ಕತೆ 'ಕುಬಿ ಮತ್ತು ಇಯಾಲ'.ಈ ಅವನತಿಯು ಬರೀ ವಿಚಾರವಾದಿ ಕುಬಿ ಮತ್ತು ಇಯಾಲಳ ಅವನತಿ ಮಾತ್ರವಾಗಿರದೆ, ಇಡೀ ಸಮಾಜದ ಅವನತಿಯೂ ಆಗಿದೆ. ಕುಬಿ ಡಾಕ್ಟರು ರೋಗದ ವಿರುದ್ದ ಹೋರಾಡುವುದೆಂದರೆ, ಭೈರಾಪುರದ ಜನರ ಅಜ್ಞಾನ, ಬಡತನ ಹಾಗೂ ಮೌಢ್ಯತೆಯ ವಿರುದ್ಧ ಹೋರಾಡುವುದೆಂದು ಭಾವಿಸುತ್ತಾನೆ. ಡಾ.ಕುಬಿಯ 'ಅಜ್ಞಾನ ನಿವಾರಣೆಯ ಪ್ರಯತ್ನ' ಹೆಚ್ಚಾದಂತೆಲ್ಲಾ ಭೈರಾಪುರದ ಜನರ ಮೂಢನಂಬಿಕೆ, ಅಜ್ಞಾನಗಳು ಹೆಚ್ಚು ಆಗುತ್ತಾ ಸಾಗುವುದು ವ್ಯವಸ್ಥೆಯ ವ್ಯಂಗ್ಯವಾಗಿ ಕಾಣುತ್ತದೆ. ಭೈರಾಪುರ ಧೂಪದ ಬಂಡೆಯ ಹತ್ತಿರ ಕೊಲೆಯಾದ ಇಯಾಲಳ ಸಾವಿನ ಸುತ್ತ ಬೆಳೆಯ ತೊಡಗಿದ ಕತೆ ನಿಗೂಢ ಶೋಧನೆಯ ಪತ್ತೇದಾರಿ ರೀತಿಯಲ್ಲಿ ಪ್ರಾರಂಭವಾಗುತ್ತದೆ. ಮೌಢ್ಯ ತುಂಬಿದ, ನಗರೀಕರಣ ಗೊಂಡಿರುವ ಭೈರಾಪುರ ಇಡೀ ಸಮಾಜವೇ ಆಕೆಯ-ಸಾವಿಗೆ ಕಾರಣವಾಗುತ್ತದೆ.

ಭ್ರಷ್ಟ ಅಧಿಕಾರಿಗಳು, ಪುಡಾರಿ ರಾಜ ಕಾರಣಿಗಳು ಅಸಹನೀಯ ಬದುಕಿನ ಪಾತ್ರಗಳಾದ ದಲಿತರು, ಹಮಾಲಿಗಳು ಹೇಗೆ ಭೈರಾಪುರದ ಆಗು ಹೋಗುಗಳ ವಕ್ತಾರವಾಗುತ್ತಾರೆ ಎಂಬುದನ್ನು ಕತೆಯಲ್ಲಿ ಗುರುತಿಸಲಾಗಿದೆ. ಯಾರೋ ಮಾಡಿದ ತಪ್ಪಿಗಾಗಿ ಯಾರಿಗೋ ಶಿಕ್ಷೆ ನೀಡುವ ಪೋಲೀಸ್ ಇಲಾಖೆ, ಜಾತಿ ರಾಜಕಾರಣಿಗಳು, ಮಾನವೀಯ ಅನುಕಂಪಗಳಿಗೆ ಭೈರಾಪುರ'ದ ಜನರೇ ಬೆಂಕಿ ಇಡುವುದು ಇವೆಲ್ಲ ಸಂಕೀರ್ಣ ಸಮಸ್ಯೆಗಳೆಂಬಂತೆ ಚಿತ್ರಿತವಾಗಿದ್ದು, ಭೈರಾಪುರದ ಅವನತಿಗೆ ಕಾರಣವಾಗುತ್ತವೆ. ಇಡೀ ಕತೆ ಇಯಾಲಯ ಸಾವು ಹಾಗೂ ಕುಬಿಯ ಸೋಲನ್ನೇ ಕೇಂದ್ರವಾಗಿ ಹೊಂದಿದ್ದು, ಅಜ್ಞಾನ ಮತ್ತು ಮೂಡನಂಬಿಕೆಗಳ ಸಂಕೀರ್ಣ ಬದುಕಿನಲ್ಲಿ ವೈಜ್ಞಾನಿಕ ಸತ್ಯಗಳು ಅನುಭವಿಸುವ ಸೋಲನ್ನು ಹಾಗೂ ಸಮಾಜದ ರಚನೆಯಲ್ಲಿ ಗಾಢವಾಗಿ ಬೇರು ಬಿಟ್ಟಿರುವ ಇವುಗಳ ವಿನ್ಯಾಸವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವೇ ಪ್ರಧಾನ ಆಶಯವಾಗಿದೆ.

'ತಬರನ ಕತೆ' ತನ್ನ ವಸ್ತು ಹಾಗೂ ನೈಜತೆಯ ಕಾರಣದಿಂದ ಅತ್ಯುತ್ತಮ ಕತೆಗಳಲ್ಲಿ ಒಂದಾಗಿದೆ. ಇದರ ವಸ್ತು 'ದುರಂತ' ಪಡುಗೆರೆಯ ತಬರಶೆಟ್ಟಿ ಬ್ರಿಟೀಷರ ಕಾಲದಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಸ್ವಾತಂತ್ರೋತ್ತರ ಭಾರತದಲ್ಲಿ ನಿವೃತ್ತನಾಗುತ್ತಾನೆ. ನಾಲ್ಕನೇ ದರ್ಜೆ ನೌಕರನಾಗಿ ಮೂವತ್ತು ವರ್ಷಗಳ ಕಾಲ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಮಾಡಿದ ಈತನಿಗೆ ನಿವೃತ್ತಿ ವೇತನ ದೊರಕಿರುವುದಿಲ್ಲ, ತನ್ನ ಹೆಂಡತಿಗೆ ಆಗಿರುವ ಗ್ಯಾಂಗ್ರಿನ್‌ಗೆ ಶೂಶ್ರುಷೆ ಮಾಡಿಸಲಾಗದೇ ಮತಿಭ್ರಷ್ಟನಾದ ತಬರನ ನೋವಿನ ಕತೆ ಇಲ್ಲಿ ಅನಾವರಣಗೊಂಡಿದೆ.

ಸರಿಯಾದ ವೈದ್ಯೋಪಚಾರ ದೊರೆಯದೆ ತಬರನ ಹೆಂಡತಿ, 'ಔಷಧ ಬೇಡ ಏನೂ ಬೇಡ. ನಾಕಾಣೆ ಪಾಷಾಣ ತಂದು ಕೊಡಿ' ಎಂದು ನೋವಿನಿಂದ ಹೇಳಿದಾಗ ಅವನ ಬಳಿ ನಾಲ್ಕಾಣೆಯು ಇರುವುದಿಲ್ಲ. ಇದು ಜೀವನದ ವಾಸ್ತವಿಕತೆಯನ್ನು ಭರ್ಬರತೆಯನ್ನು ಸೂಚಿಸುತ್ತದೆ. ಅಧಿಕಾರ ಶಾಹಿಯ ದರ್ಪ, ಕ್ರೂರತೆ, ವ್ಯವಸ್ಥೆಯ ವಿಡಂಬನೆ ಹಾಗೂ ತಬರನ ವ್ಯಕ್ತಿತ್ವ ವಿನಾಶ ಇವುಗಳನ್ನೇ ಪ್ರಧಾನ ಆಶಯವನ್ನಾಗಿ ಹೊಂದಿದೆ.

ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ಅತ್ಯುತ್ತಮ ಕಥಾಸಂಕಲನವಾಗಿದ್ದು ಇದರಲ್ಲಿ ಕಿರಗೂರಿನ ಗಯ್ಯಾಳಿಗಳು ಮತ್ತು ಕೃಷ್ಣೇಗೌಡರ ಆನೆ ಎಂಬ ನೀಳ್ಗತೆಗಳೂ ಮಾಯಾಮೃಗ, ರಹಸ್ಯವಿಶ್ವ ಎಂಬ ಸಣ್ಣಕತೆಗಳೂ ಇವೆ. ತೇಜಸ್ವಿಯವರ ಹಿಂದಿನ ಬರವಣಿಗೆಯಲ್ಲಿನ ವಸ್ತುವೇ ಬೇರೆ ವಿವರಗಳಲ್ಲಿ ಮತ್ತೆ ಕಾಣಿಸುತ್ತದೆ. ಮನುಷ್ಯನ ಅಸಂಬದ್ಧತೆ, ಅರ್ಥಹೀನತೆ, ಹಿಂಸೆ ಮತ್ತು ಕೌರ್ಯ, ಪುರುಷರ ದಬ್ಬಾಳಿಕೆಗೆ ಬೇಜವಾಬ್ದಾರಿತನ ಇವುಗಳೇ ಇಲ್ಲಿನ ಪ್ರಧಾನ ವಸ್ತುವಾಗಿವೆ.

ಅತ್ಯಂತ ಭಯಂಕರವಾದ ಬಿರುಗಾಳಿಯಿಂದ ಆರಂಭವಾಗುವ ಈ ಕತೆ ಕೊನೆಯಲ್ಲಿ ಇನ್ನೂ ಮುಗಿಯದ ಕತೆಯಾಗಿದೆ. ಕಿರಗೂರಿನ ಗಂಡಸರು ಸೋಮಾರಿಗಳು. ಜಾತಿ ಜಗಳದಲ್ಲಿ ಮುಳುಗಿದವರು. ಹೆಂಗಸರು ಮಾತ್ರ ಸುರಸುಂದರಿಯರು, ಬಲಿಷ್ಟರು, ಮಾನಿಗಳಾದರೂ ಗಯ್ಯಾಳಿಗಳು. ಕಥೆಯ ಕೇಂದ್ರ ಪಾತ್ರವಾದ ದಾನಮ್ಮ ಕಿರಗೂರಿನ ಗೌರವಾನ್ವಿತ ಕುಟುಂಬದ ಸೊಸೆ. ಆದರೆ ಆಕೆ ಎಚ್ಚೆತ್ತ ಮಹಿಳೆ. ಊರಿನ ಮುಗ್ಧ ಹೆಂಗಸರನ್ನು ಸಂಘಟಿಸಿ ಸೋಮಾರಿ ಗಂಡಸರಿಗೆ ಬುದ್ಧಿ ಕಲಿಸುತ್ತಾಳೆ. ಗ್ರಾಮಸೇವಕ ಶಂಕರಪ್ಪನ ಅವಾಂತರಗಳು.

ಕಿರಗೂರಿನ ವೈಷಮ್ಯ, ಜಾತಿ-ಜಗಳ, ಕಿರಗೂರಿನ ಹೆಂಗಸರ ಬಂಡಾಯ ಪ್ರಜ್ಞೆ ಪ್ರಧಾನ ಆಶಯವಾಗಿದೆ. ಪ್ರಸ್ತುತ ಸಮಾಜದ ರಾಜಕೀಯ, ಸಾಂಸ್ಕೃತಿಕ ಹಾಗೂ ಅಧಿಕಾರ ಶಾಹಿ ವ್ಯವಸ್ಥೆಯ ಕರಾಳ ಸತ್ಯವನ್ನೇ ಪ್ರಧಾನ ಆಶಯವನ್ನಾಗಿ ಹೊಂದಿರುವ ಕತೆ 'ಕೃಷ್ಣೇಗೌಡರ ಆನೆ'ಯದು. ಮನುಷ್ಯ ತನ್ನ ಬೇಜವಾಬ್ದಾರಿಯನ್ನು, ಅಸಹಾಯಕತೆಯನ್ನು ಮುಚ್ಚಿಕೊಳ್ಳುವುದಕ್ಕಾಗಿ ಅದನ್ನೆಲ್ಲ ಬೇರೊಂದು ಜೀವಿಯ ಮೇಲೆ ಆರೋಪಿಸಿ, ತಾನು ಮತ್ತೆ ಕರ್ತವ್ಯದ ವೃತ್ತದಿಂದ ಹೊರಗುಳಿಯುವ ವಸ್ತುಸ್ಥಿತಿಯೇ ಇಲ್ಲಿನ ಪ್ರಧಾನ ವಸ್ತುವಾಗಿದೆ.

'ಮಾಯಾಮೃಗ'ದ ವಸ್ತು 'ಸಾವು'. ದೆವ್ವದ ಬಗೆಗೆ ನಂಬಿಕೆ ಇಲ್ಲದ ಸ್ನೇಹಿತರಿಬ್ಬರು ಸ್ಮಶಾನದಲ್ಲಿ ದೆವ್ವದ ಅಸ್ತಿತ್ವವನ್ನು ಪರೀಕ್ಷಿಸಲು ಹೋಗಿ, ಕೊನೆಗೆ ಅವರು ಎದುರಿಸುವ ಸಂಶಯ, ಗುಮಾನಿಗಳು ಈ ಕಥೆಯಲ್ಲಿ ಸಮರ್ಥವಾಗಿ ನಿರೂಪಿತವಾಗಿವೆ. ದೆವ್ವದ ಅನ್ವೇಷಣೆಗೆ ಸ್ಮಶಾನಕ್ಕೆ ಹೋದಾಗ ಅಲ್ಲೊಂದು ನಾಯಿಮರಿ 'ಮಾಯಾಮೃಗ'ದಂತೆ ಇವರ ಬೆನ್ನುಹತ್ತಿ ಬರುತ್ತದೆ. ಓಡಿಸಿದರೂ ಮರಳಿ ಮರಳಿ ಬೆನ್ನಹತ್ತುವ ನಾಯಿ ದೆವ್ವವೇ ಆಗಿರಬಹುದೆಂದು ಭಾವಿಸಿರುತ್ತಾರೆ. ಬೆದರಿಸಿದರೂ ಬಿಡದಂತೆ ಬೆನ್ನಹತ್ತುತಿದ್ದ ನಾಯಿಮರಿಯನ್ನು ಹಿಡಿದು, ಒಂದು ಮನೆಯ ಕಾಂಪೌಂಡಿನಲ್ಲಿ ಹಾಕುತ್ತಾರೆ. ಅದು ಕುಂಯ್ ಗುಟ್ಟಿ ಒದರುವ ಸದ್ದು ಕಿರಿಕಿರಿಯಾಗಿ ಮನೆಯ ಮಾಲೀಕ ಅದನ್ನು ಮತ್ತೆ ಗೇಟಿನಾಚೆ ಕಳಿಸುತ್ತಾನೆ. ಈ ಕ್ರಮ ನಾಲ್ಕಾರು ಸಾರಿ ಪುನಾರಾವೃತ್ತಿಕೊಂಡಾಗ ಆ ಮಾಲೀಕ ಇದು ದೆವ್ವವೇ ಇರಬೇಕೆಂದು ಭಾವಿಸಿ ಹೆದರಿ ಸತ್ತುಹೋಗುತ್ತಾನೆ. ದೆವ್ವವಿರುವುದು ಸ್ಮಶಾನದಲ್ಲಿ ಅಲ್ಲ, ತಮ್ಮ ಮನದಲ್ಲೇ ಎನ್ನುತ್ತಾರೆ ಲೇಖಕರು. ಮೆದುಳು ಹುಟ್ಟುಹಾಕುವ ಕಲ್ಪಿಸುವ ಭಯವೇ ದೆವ್ವ ಪಂಚೇಂದ್ರಿಯಾತೀತವಾದದ್ದು ಎಂಬುದನ್ನು ತಾರ್ಕಿಕನೆಲೆಯಲ್ಲಿ ಈ ಕತೆ ಬಿಂಬಿಸುತ್ತದೆ.

ಸಣ್ಣಕತೆಗಳಷ್ಟೇ ಅಲ್ಲದೆ ಕಾದಂಬರಿ ಕ್ಷೇತ್ರದಲ್ಲೂ ತೇಜಸ್ವಿ ವಿಶೇಷ ಸಾಧನೆ ಮಾಡಿದ್ದಾರೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಹೊಸತೊಂದು ಅಭಿವ್ಯಕ್ತಿಯ ಬಗೆಯನ್ನೇ ಹುಟ್ಟು ಹಾಕಿದ ಕಾದಂಬರಿ 'ಸ್ವರೂಪ' 'ನಿಗೂಢ ಮನುಷ್ಯರು' 'ಕರ್ವಾಲೋ' 'ಜುಗಾರಿಕ್ರಾಸ್' 'ಚಿದಂಬರ ರಹಸ್ಯ' ಮತ್ತು 'ಮಾಯಾಲೋಕ' ಇವರ ಇತರ ಕಾದಂಬರಿಗಳು.

ಕರ್ವಾಲೋ ಕಾದಂಬರಿಯ ಬಹಳಷ್ಟು ಘಟನೆಗಳು ಹಾರುವ ಓತಿಕ್ಯಾತವನ್ನು ಹಿಡಿಯಹೋಗುವ 'ಯಾತ್ರೆ'ಗೆ ಪೂರಕವಾಗಿದೆ ಎನಿಸಿದರೂ ಅದು ಸೃಷ್ಟಿಸುವ ಮಾನವೀಯ ಸಂದರ್ಭಗಳೇ ಬಹಳ ಆಸಕ್ತಿ ಹುಟ್ಟಿಸುತ್ತವೆ. ಏಕೆಂದರೆ ಒಟ್ಟು ಬದುಕಿನ ಸಂದರ್ಭದಲ್ಲಿ ಈ ಯಾತ್ರೆಯೂ ಕೇವಲ ಒಂದು ಅನುಭವ. 'ಎಷ್ಟೊಂದನ್ನು ನಾವು ಕಣ್ಣಿಗೆ ಕಂಡೂ ನೋಡದೇ ಬಿಟ್ಟಿದ್ದೀವೋ ಏನೋ' ಎಂಬ ನಿರೂಪಕನ ಮಾತು ಈ ಕಾರಣದಿಂದಲೇ ತುಂಬ ಮುಖ್ಯವಾಗುತ್ತದೆ. ಮತ್ತು ತಮ್ಮೆಲ್ಲರ ಕ್ರಿಯೆಗಳನ್ನೂ ವಿಚಾರಗಳನ್ನೂ ಬೇರೊಂದು ದೃಷ್ಟಿಕೋನದಿಂದಲೂ ನೋಡಲು ಸಾಧ್ಯ ಎಂಬುದರ ಬಗ್ಗೆ ನಿರೂಪಕ ಯಾವಾಗಲೂ ಎಚ್ಚರದಿಂದ್ದಾನೆ. ಆದ್ದರಿಂದ ಇಡೀ ಕಾದಂಬರಿಯಲ್ಲಿ ಹಾರುವ ಓತಿಯನ್ನು ಹಿಡಿಯ ಹೋಗುವ ಯಾತ್ರೆ, ಅದರ ಹಿನ್ನೆಲೆ, ನಿರೂಪಕ ಕಾಣದ ವಿವಿಧ ಮುಖಗಳನ್ನು ಆತನಿಗೆ ತೋರಿಸುತ್ತಾ ಹೋಗುತ್ತದೆ. ಈ ವಿವಿಧ ಮುಖಗಳನ್ನು ಬಿಡಿ ಬಿಡಿ ಎಳೆಗಳನ್ನು ಒಟ್ಟು ಬದುಕಿನ ಸಂದರ್ಭದಲ್ಲಿ ಸಮಗ್ರವಾಗಿ ಹಿಡಿಯಲು ನಿರೂಪಕ ಪ್ರಯತ್ನಿಸುತ್ತಾನೆ. ಹಾರುವ ಓತಿಯ ಬಗ್ಗೆ ರಹಸ್ಯ ಹಾಗೂ ಕುತೂಹಲ ಕಾದಂಬರಿಯ ಕೇಂದ್ರಬಿಂದುವಾಗಿ ಸೆರೆಹಿಡಿದು ನಿಲ್ಲಿಸುತ್ತದೆ.

ಮೂಡಿಗೆರೆಯಲ್ಲಿ ಭತ್ತದ ಸಂಶೋಧನಾ ಕೇಂದ್ರದಲ್ಲಿ ಭತ್ತಕ್ಕೆ ಕೀಟಗಳಿಂದ ತಗಲುವ ರೋಗಗಳಿಗೆ ಪರಿಹಾರ ಕಂಡುಹಿಡಿಯಲು ಬಂದವರು ಕರ್ವಾಲೋ. ಅಲ್ಲದೇ, ಜೇನ್ನೊಣಗಳ ವರ್ಣನೆ ಕಾದಂಬರಿಯಲ್ಲಿ ಮಡುಗಟ್ಟಿದೆ. ವಿಕಾಸಪಥದ ಜೀವಿಗಳ ಸ್ಥಿತಿ-ಗತಿಯನ್ನು ಆ ಹುಳುಗಳು ಸೂಚಿಸುತ್ತವೆ. ಈ ಜೇನು-ಸೊಸೈಟಿಯಲ್ಲಿ ಹಂಗಾಮಿಯಾಗಿ ಬೀ ಕೀಪರ್ ಆಗಿರುವ ಮಂದಣ್ಣ ಬಯಸುವ ಬದುಕು, ನಿರೂಪಕ ಹಾಗೂ ಕರ್ವಾಲೋರವರಿಗೆ ಆತ ತೋರಿಸುವ ಅದ್ಭುತ ಜಗತ್ತು ಕಾದಂಬರಿಯಲ್ಲಿ ಗಾಢವಾಗಿ ಪರಸ್ಪರ ಮುಖಾಮುಖಿಯಾಗುತ್ತದೆ. ಜೀವ ವಿಕಾಸದ ಅವಸ್ಥಾಂತರಗಳನ್ನು ಭೇದಿಸುತ್ತ ಭೇದಿಸುತ್ತಲೇ ವಿವಿಧ ಜೀವಸಂಕುಲಗಳ ನಾಶ ಮತ್ತು ಅವುಗಳನ್ನು ಹಿಡಿಯಲು ಯತ್ನಿಸುವ ಮನುಷ್ಯನ ವಿಫಲತೆಯನ್ನು ಈ ಕಾದಂಬರಿ ಧ್ವನಿಸುತ್ತದೆ.

ಕರ್ವಾಲೋ ನಂತರ ಬಂದ ತೇಜಸ್ವಿಯವರ 'ಚಿದಂಬರರಹಸ್ಯ' ಕಾದಂಬರಿ ಬದುಕಿನ ಸಂಕೀರ್ಣವಾದ ಸಮಸ್ಯೆಗಳನ್ನೇ ವಸ್ತುವನ್ನಾಗಿ ಒಳಗೊಂಡಿದೆ. ಮಲೆನಾಡಿನ 'ಕೆಸರೂರು' ಗ್ರಾಮದಲ್ಲಿ ಘಟಿಸುವ ಸಂಗತಿಗಳೇ

ಕಥಾವಸ್ತು. ಕೆಸರೂರು ಕ್ಷುದ್ರತೆಗೆ ಸಂಕೇತವಾಗಿದೆ. ಈ ಕ್ಷುದ್ರತೆಯ ಹಿಂದಿರುವ ಸತ್ಯವನ್ನು ಹುಡುಕುವುದೇ ಇಲ್ಲಿನ ಆಶಯವಾಗಿದೆ.

ಕೆಸರೂರಿನ ಏಲಕ್ಕಿಗೆ ಹೇಗೆ ರೋಗ ತಗಲಿದೆಯೋ ಹಾಗೇ ಇಲ್ಲಿನ ಸಂಸ್ಕೃತಿಗೆ ವೈರಸ್ ತಗುಲಿದೆ. ಕೆಸರೂರಿನ ಹೈಬ್ರಿಡ್ ಏಲಕ್ಕಿ ಗಿಡದ ಬಗ್ಗೆ ಸಂಶೋಧನೆ ಮಾಡುತ್ತಿದ್ದ ಜೋಗಿ ಹಾಳರ ಕೊಲೆಯಾಗುತ್ತದೆ. ಅವರ ಕೊಲೆಯನ್ನು ಪತ್ತೆಹಚ್ಚಲು ದೆಹಲಿಯ ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರ್ ಶಮಾನಂದ ಅಂಗಾಡಿ ಬರುತ್ತಾನೆ. ಜೋಗಿಹಾಳರ ಸಾವು, ಅರ್ಥಶಾಸ್ತ್ರದ ಪ್ರಾಧ್ಯಾಪಕ ರಾಮಚಂದ್ರನ ಸಾಮಾಜಿಕ-ಕ್ರಾಂತಿ, ಕೃಷ್ಣೇಗೌಡನ ರಾಜಕೀಯ ಹಂಬಲ, ಸುಲೇಮಾನ್ ಬೇರಿಯ ಕರಾಳ ಭೂಗತ ಚಟುವಟಿಕೆಗಳು, ಕೆಸರೂರಿನ ಜಾತಿ-ವೈಷಮ್ಯ ಇವೆಲ್ಲದರ ಕಾರಣವಾಗಿ ಕೆಸರೂರು ಅವನತಿ ಹೊಂದುತ್ತಿರುತ್ತದೆ. ಕೆಸರೂರಿನ ಬದುಕು ಅತ್ಯಂತ ಜಟಿಲವೂ ರಹಸ್ಯಾತ್ಮಕವೂ ಆದ ವೈರುಧ್ಯಗಳಿಂದ ಕೂಡಿದೆ.

ಊರಿನ ರಾಜಕಾರಣಕ್ಕೂ ಏಲಕ್ಕಿ ಸಂಶೋಧನಾ ಕೇಂದ್ರಕ್ಕೂ ಪರಿಸರ ನಾಶಕ್ಕೂ ಶೋಷಣೆ ದೌರ್ಜನ್ಯಗಳಿಗೂ ಪರಸ್ಪರ ಸಂಬಂಧವಿದೆ. ಜೊತೆಗೆ ಅಂಗಾಡಿ ಬರೀ ಕೈಯಲ್ಲಿ ದೆಹಲಿಗೆ ಹಿಂದುರುಗಬೇಕಾಗುತ್ತದೆ. ರಫೀ ಮತ್ತು ಜಯಂತಿ ಅವರ ಪ್ರೇಮವು ಜಾತಿ ವಿನಾಶ ದತ್ತ ದಾಪುಗಾಲು ಹಾಕುತ್ತದೆ. ಕೊನೆಗೆ ಊರಿಗೆ ಸುಲೇಮಾನ್ ಬೇರಿಯವರ ಕಡೆಯಿಂದ ಬೆಂಕಿ ಬೀಳುತ್ತದೆ. ಹೊಲಗೇರಿಗೆ ಹಾಗೂ ಇಡೀ ಕಾಡಿಗೆ ಬೆಂಕಿ ಹಚ್ಚಲಾಗುತ್ತದೆ. ಇದು ಇಡೀ ಕೆಸರೂರನ್ನೇ ಬಲಿ ತೆಗೆದುಕೊಳ್ಳುತ್ತದೆ. ಜಯಂತಿ ಮತ್ತು ರಫೀ ಈ ಬೆಂಕಿಯ ವ್ಯೂಹದಿಂದ ಪಾರಾಗುತ್ತಾರೆ. ಸಾಮಾಜಿಕ ಅಧಃಪತನವನ್ನು ಕೆಸರೂರಿನ ಜೀವನದ ಪ್ರತೀ ಹಂತದಲ್ಲೂ ಗುರುತಿಸಬಹುದಾಗಿದೆ.

'ಜುಗಾರಿಕ್ರಾಸ್' ಕಾದಂಬರಿಯ ವಸ್ತು 'ಮನುಷ್ಯ ಲೋಕದ ವಿದ್ಯಮಾನಗಳೆಲ್ಲಾ ಒಂದು ಲೀಲೆ' ಯಾಗಿರುವುದೇ ಆಗಿದೆ. "ಕಾದಂಬರಿಯ ಎಲ್ಲಾ ಘಟನೆಗಳೂ ಕೇವಲ ಇಪ್ಪತ್ತ ನಾಲ್ಕು ಘಂಟೆಗಳ ಅವಧಿಯಲ್ಲಿ ಸಂಭವಿಸಿದ ಹಾಗೆ ಕಾಣುವ ಸಂಯೋಜನೆ. ಮೇಲು ನೋಟಕ್ಕೆ ಪರಸ್ಪರ ಸಂಬಂಧವಿರದ ಹಲವು ಬಗೆಯ ಪಾತ್ರಗಳು ಸನ್ನಿವೇಶಗಳು ಸಂದರ್ಭಗಳು ಆದರೆ ಇವೆಲ್ಲಕ್ಕೂ ನಮ್ಮ ಊಹೆ ತರ್ಕಗಳಿಗೂ ಮೀರಿದ ಸಂಬಂಧಗಳ ಸಾಧ್ಯತೆಗಳು: ಯಾರು ಯಾರನ್ನು

ನಿಯಂತ್ರಿಸುತ್ತಿದ್ದಾರೆ ? ಎಲ್ಲರನ್ನೂ ನಿಯಂತ್ರಿಸುವ ಒಟ್ಟು ಬಾಸ್ ಇದ್ದಾರೆಯೇ ? ಈ ಎಲ್ಲ ಚಟುವಟಿಕೆಗಳ ಆದಿ ಯಾವುದು, ಅಂತ್ಯ ಯಾವ ಕಡೆಗೆ ! ಮುಂತಾದ ಅಂಶಗಳ ನಮಗೆ ಪರಿಚಿತವಿರುವ ಅಸ್ತಿತ್ವವಾದದ ದೃಷ್ಟಿಕೋನವೂ ಅಲ್ಲದ ಚಾರಿತ್ರಿಕ ದೃಷ್ಟಿಕೋನವೂ ಅಲ್ಲದ ಒಂದು ಅವಲೋಕನ ಇಲ್ಲಿದೆ". (ಅಶೋಕ ಟಿ.ಪಿ., ತೇಜಸ್ವಿ ಕಥನ,೨೦೦೪, ಪುಟ – ೯೪)

ಈ ಕಾದಂಬರಿಯಲ್ಲಿ ಭೂಗತ ಜಗತ್ತು, ಕಾಳಸಂತೆಕೋರರ ಜಗತ್ತು ಭಯಾನಕತೆಯಿಂದ ಕೂಡಿದೆ. ಏಲಕ್ಕಿ ವ್ಯಾಪಾರ ಕೇಂದ್ರಬಿಂದುವಾಗಿದೆ. ಸುರೇಶ ಸ್ನಾತಕೋತ್ತರ ಪದವೀಧರ ಮಲೆಯ ದೇಶದಿಂದ ಮಲೆನಾಡಿಗೆ ಬಂದು ಕುವರಿಹತ್ತಿರ ಏಲಕ್ಕಿ ಬೆಳೆಯಲು ನಿಲ್ಲುತ್ತಾನೆ. ಅವನಿಗೆ ಬೆಂಬಲವಾಗಿ ಹೆಂಡತಿ ಗೌರಿ ನಿಲ್ಲುತ್ತಾಳೆ. ಏಲಕ್ಕಿ ಮಾರಾಟ ಮಾಡಲು ಇಬ್ಬರೂ ಜುಗಾರಿ ಕ್ರಾಸ್ ನಿಂದ ದೇವಪುರಕ್ಕೆ ಹೊರಟಲ್ಲಿಂದ ಕಾದಂಬರಿ ಆರಂಭವಾಗುತ್ತದೆ. ಇಪ್ಪತ್ನಾಲ್ಕು ಘಂಟೆಗಳಲ್ಲಿ ನಡೆಯುವ ಕಥೆ ಇದು. ಏಲಕ್ಕಿ ಮಾರಾಟ ಮಾಡಲು ಹೋಗಿ ಭೂಗತ ಜಗತ್ತಿನ ವ್ಯೂಹದೊಳಗೆ ಸಿಕ್ಕಿಕೊಳ್ಳುವ ಸುರೇಶ–ಗೌರಿ ದಂಪತಿ, ಆದರಿಂದ ಬಿಡಿಸಿಕೊಳ್ಳುವುದು, ಗುರುರಾಜಕವಿಯ ಕೆಂಪು ಮಾಣಿಕ್ಯಧಾರಾ ಕಾವ್ಯದಿಂದ ಉದ್ಭವಿಸುವ 'ನಿಧಿಶೋಧ'ದ ಆಸೆ, ಕೊನೆಗೆ ಜೀರಾಜಕಾವ್ಯ ದೋಣಿಹೊಳೆ ಪಾಲಾಗಿ ಸುರೇಶ ಗೌರಿ ದಂಪತಿಗಳು ಸುರಕ್ಷಿತವಾಗಿ ಹಿಂದಿರುಗುವುದು ಎಲ್ಲವೂ ಒಂದು ವಿಧಿಲೀಲೆಯಂತೆ ತೇಜಸ್ವಿ ಚಿತ್ರಿಸಿದ್ದಾರೆ.

ವಿಧಿಯ ಈ ನಿಯಂತ್ರಣಕ್ಕೆ ಧಕ್ಕೆ ಬರದಂತೆ ನಡೆಯುವುದೇ ಪ್ರತಿಯೊಬ್ಬ ಧರ್ಮ, ಈ ಧರ್ಮಕ್ಕೆ ಚ್ಯುತಿಬಾರದ ಹಾಗೆ ನಡೆಯುವುದರಲ್ಲಿ, ಅವರ ಜೀವನದ ಸಾಫಲ್ಯ–ವೈಫಲ್ಯದ ಸಾಧ್ಯತೆಗಳು ಅಂತರ್ಗತವಾಗಿರುತ್ತದೆ ಎಂಬ ಆಶಯವನ್ನು ಈ ಕಾದಂಬರಿ ಹೊಂದಿದೆ.

ತಾನು ನಿಯಂತ್ರಿಸಲಾಗದ ಅಮೂರ್ತದ ಅಗಾಧತೆಯ ಎದುರು ಮನುಷ್ಯರ ಕ್ರಿಯೆಗಳು ಅರ್ಥಹೀನವಾಗಿಯೂ ಹಾಸ್ಯಾಸ್ಪದವಾಗಿಯೂ ಕಾಣುತ್ತವೆ. ಜುಗಾರಿಕ್ರಾಸ್‌ನಲ್ಲಿರುವ ಈ ಎಳೆಯನ್ನು 'ನಿಗೂಢ ಮನುಷ್ಯರು' ಹಾಗೂ 'ಸ್ವರೂಪ' ಕಾದಂಬರಿಗಳಲ್ಲೂ ಕಾಣಬಹುದು.

ಈ ಅಂಶಗಳನ್ನು ಗಮನಿಸಿದಾದ ಕುವೆಂಪು ಮತ್ತು ತೇಜಸ್ವಿ ಕಥನ ಸಾಹಿತ್ಯದ 'ವಸ್ತು' 'ಆಶಯ'ಗಳಲ್ಲಿ ಸಾಮ್ಯತೆಯಿದ್ದು, ಸಮಕಾಲೀನ ಪ್ರಪಂಚದ ಕೊಳಕು ರಾಜಕೀಯ, ಭ್ರಷ್ಟಾಚಾರ, ಮೂಢನಂಬಿಕೆ, ಅಧಿಕಾರ ಶಾಹಿಗಳ ದಬ್ಬಾಳಿಕೆಯನ್ನು ಸಶಕ್ತವಾಗಿ ಚಿತ್ರಿಸಿದ್ದಾರೆ. ಅಲ್ಲದೇ, ಈ ಸಾಮಾಜಿಕ ಅವ್ಯವಸ್ಥೆಯನ್ನು ಬದಲಾಯಿಸುವ 'ಧನಾತ್ಮಕ ಚಿಂತನೆ', 'ಊರ್ಧ್ವಮುಖಿ ಚಿಂತನೆ'ಗಳು ಕೃತಿಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. ರೂಢಿಗತ ಮೌಲ್ಯಗಳನ್ನು ವಿಮರ್ಶಿಸುತ್ತಾ ಅವುಗಳಲ್ಲಿರುವ ಲೋಪ-ದೋಷಗಳನ್ನು ತೀಕ್ಷ್ಣವಾಗಿ ಟೀಕಿಸುತ್ತಾ ಉತ್ತಮ ಸಾಸ್ಥ್ಯ ಸಮಾಜದ ನಿರ್ಮಾಣದ ಆಶಯವನ್ನು ಇಬ್ಬರೂ ಲೇಖಕರು ಚಿಂತಿಸಿರುವುದನ್ನು ಇವರ ಕಥನ ಸಾಹಿತ್ಯದಲ್ಲಿ ಗುರುತಿಸಬಹುದು.

**೮.೨. ಭಾಷೆ :**

ಅನುಭವದ ಅಭಿವ್ಯಕ್ತಿ ಮಾಧ್ಯಮವಾದ ಭಾಷೆ ನಿರಂತರ ಚಲನಶೀಲವಾದುದು. ಭಾಷೆ ಇಂದು ಕೇವಲ ಸಂವಹನ ಮಾಧ್ಯಮವಾಗಿ ಉಳಿದಿಲ್ಲ. ಅದು ಜೀವನವನ್ನು ನಿರ್ವಹಿಸುವ ಸಾಧನವೂ ಆಗಿದೆ. ನಿರಂತರವಾಗಿ ಪ್ರವಹಿಸುವ ನದಿಯಂತೆ ನಿರಂತರವಾಗಿ ಕಾಲ-ದೇಶಗಳ ವ್ಯತ್ಯಾಸದಿಂದ ಭಾಷೆಯ ರೂಪ ಬದಲಾಗುತ್ತಾ ಸಾಗುತ್ತದೆ. ಭಾಷೆಯ ಈ ಪರಿವರ್ತನಶೀಲ ಗುಣದಿಂದಲೇ ಅದು ಜೀವಂತವಾಗಿ ಉಳಿಯಲು ಸಾಧ್ಯವಾಗಿದೆ. ಭಾಷೆ ಸಾಹಿತ್ಯದ ಮಾಧ್ಯಮವಾಗಿ ಬದುಕಿನ ಬಹುನೆಲೆಗಳನ್ನು ಹೊರಹಾಕುತ್ತದೆ. ಸಂವಹನ ಮಾಧ್ಯಮವಾಗಷ್ಟೇ ಅಲ್ಲದೇ ಸಂಸ್ಕೃತಿಯ ವಾಹಕವೂ ಆಗಿದೆ. ಸಾಹಿತ್ಯ ರಚನೆಯ ಸಂದರ್ಭದಲ್ಲಿ ಭಾಷೆ ಸಂಸ್ಕೃತಿಯ ಸಾಧನವಾಗಿಯೇ ಬಳಕೆಯಾಗಿದೆ.

ಸಾಹಿತಿಯೊಬ್ಬನಿಗೆ ಭಾಷೆ ಅಭಿವ್ಯಕ್ತಿ ನೆಲೆಯಾಗಿಯೂ ಸಂವಹನಗೊಳಿಸುವ ನೆಲೆಯಾಗಿಯೂ ಮುಖ್ಯವಾಗುತ್ತದೆ. ಕೃತಿಕಾರನೊಬ್ಬ ತನ್ನ ಕೃತಿಯಲ್ಲಿ ಏನು ಹೇಳಬೇಕೆಂದು ನಿರ್ಧರಿಸುವುದರ ಜೊತೆಯಲ್ಲಿಯೇ ಅದನ್ನು ಹೇಗೆ ಹೇಳಬೇಕೆಂದು ನಿರ್ಧರಿಸಬೇಕಾಗುತ್ತದೆ. ಅದು ಸೃಜನಶೀಲ ಪ್ರಕ್ರಿಯೆಯ ಗುಣ. ಸೃಜನಶೀಲ ಲೇಖಕ ಯಾವಾಗಲೂ ಅನುಭವದ ಅಭಿವ್ಯಕ್ತಿಗಾಗಿ ಹಂಬಲಿಸುತ್ತಿರುತ್ತಾನೆ. ತನ್ನ ಕತೆ-ಕಾದಂಬರಿಗಳಲ್ಲಿ ಭಾಷಾ ಬಳಕೆಯ

ಸಾಧ್ಯತೆಗಳ ಕುರಿತು ತನ್ನದೇ ಆದ ಕಲ್ಪನೆಗಳನ್ನು ಇರಿಸಿಕೊಂಡಿರುತ್ತಾರೆ. ಹೀಗಾಗಿ ವಸ್ತುವಿನ ಪ್ರಾಮುಖ್ಯತೆ ಭಾಷಾಬಳಕೆಯಲ್ಲಿ ಸಾರ್ಥಕಗೊಳ್ಳಬೇಕಾಗುತ್ತದೆ.

"ಒಂದು ಸಾಹಿತ್ಯ ಕೃತಿಯಲ್ಲಿ ಜೀವನ ಸಂಬಂಧಿಯಾದ ವಸ್ತು, ಅಭಿವ್ಯಕ್ತಿಯ ತಂತ್ರ ವಿಧಾನಗಳನ್ನು ಒಳಗೊಂಡೇ ಬೆಳೆಯಬೇಕಾಗುತ್ತದೆ. ಈ ಕಾರಣಗಳಿಂದಾಗಿ ಯಾವುದೇ ಕಥನದೊಳಗೆ ಮೂಲತಃ ವಸ್ತುದ್ರವ್ಯ ಸಾಮಾಜಿಕ, ಸಾಂಸ್ಕೃತಿಕವಾದುದೇ ಆಗಿದ್ದರೂ, ಅದು ಅನಿವಾರ್ಯವಾಗಿ ಭಾಷಿಕ ಬಂಧವನ್ನು (Texture) ಪಡೆಯುತ್ತದೆ. ಕಥಾವಸ್ತು ರೂಪುಗೊಳ್ಳುತ್ತಾ ಹೋದಂತೆ ಅದರೊಂದಿಗೆ ಸಹಜವಾಗಿ ಭಾಷೆ, ತಂತ್ರ, ನಿರೂಪಣೆ ಮುಂತಾದ ಅಂಶಗಳು ಅಳವಡುತ್ತಾ ಸಾಗುತ್ತವೆ. ಇಲ್ಲಿ ಈ ಹೇಳಿಕೆ ಪ್ರಸ್ತುತವೆನಿಸುತ್ತದೆ. ನನ್ನ ಕಥೆ ನನ್ನ ತರಹ-ನನ್ನ ಚರ್ಮ ಸುಲಿದು ನಿಮ್ಮ ಚರ್ಮದೊಳಕ್ಕೆ ತುರುಕೋದಿಕ್ಕೆ ಆಗುವುದಿಲ್ಲ. ನಾನು ಮತ್ತು ನನ್ನ ಚರ್ಮ ಒಂದೇ. ನಾನು ಬರೆಯುವ ರೀತಿಯಲ್ಲಿ ಕತೆ ಇರಬೇಕು. ವಸ್ತು ಮತ್ತು ಶೈಲಿಯನ್ನು ಬೇರ್ಪಡಿಸುವುದಕ್ಕೆ ಆಗುವುದಿಲ್ಲ.

ಈ ಮಾತುಗಳು ಕೃತಿಯೊಂದರ ಸಾವಯವ ಅನನ್ಯತೆಯನ್ನು ಸೂಚಿಸುತ್ತಲೇ ಒಂದು ಕತೆಯ ಶಿಲ್ಪ ಹಾಗೂ ಬಂಧವೇ ಆಯಾಯ ಕಥೆಗಾರರ 'ಶೈಲಿ'ಯನ್ನು ರೂಪಿಸುತ್ತದೆ. ಎಂಬುದನ್ನು ಪ್ರತಿಪಾದಿಸುವಂತಿದೆ. ಒಂದು ರೀತಿಯಲ್ಲಿ ಅದು ನಿಜ. ಏಕೆಂದರೆ ಸಾಹಿತ್ಯ ಪ್ರಕಾರವೊಂದರಲ್ಲಿ ವಸ್ತು, ಭಾಷೆ ಪರಸ್ಪರ ಅವಲಂಬಿಸಿಯೇ ಇರುತ್ತದೆ". (ಪ್ರಸಾದ ಸ್ವಾಮಿ ಎಸ್., ಕಥೆ ಕಥನ, ೨೦೦೭, ಪುಟ ೨೩೮) ಮಲೆನಾಡಿನ ಪ್ರಾದೇಶಿಕ ಅಂಶಗಳ ದಟ್ಟ-ಅನುಭವಗಳ ಕಥಾನಕಗಳನ್ನೇ ವಸ್ತುವಾಗಿ ಹೊಂದಿರುವ ಕುವೆಂಪು ಮತ್ತು ತೇಜಸ್ವಿ ಕತೆ-ಕಾದಂಬರಿಗಳು ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಹೆಚ್ಚಿನ ಅನನ್ಯತೆಯನ್ನು ಸಾಧಿಸಿವೆ.

ನವೋದಯ ಸಂದರ್ಭದಲ್ಲಿ ರಚಿತವಾದ ಕುವೆಂಪು ಅವರ ಕತೆ-ಕಾದಂಬರಿಗಳು ಹಾಗೂ ನವೋದಯ, ನವ್ಯ, ಸಂದರ್ಭದಲ್ಲಿ ರಚಿತವಾದ ತೇಜಸ್ವಿ ಕೃತಿಗಳೂ ಆಯಾ ಕಾಲಘಟ್ಟದ ಸಾಮಾಜಿಕ, ರಾಜಕೀಯ, ಕೌಂಟುಬಿಕ ಸಂಗತಿಗಳನ್ನು ಒಳಗೊಂಡಿವೆ. ಈ ಅಂಶಗಳನ್ನು ನಿರ್ವಹಿಸುವಾಗ ಇಬ್ಬರು ಲೇಖಕರು ದುಡಿಸಿಕೊಂಡಿರುವ ಭಾಷಾ ವಿನ್ಯಾಸಗಳು ಗಮನಾರ್ಹವಾದವು. ಗ್ರಾಮೀಣ ಬದುಕು, ಮಧ್ಯಮವರ್ಗದ ಜನರ ಬವಣೆ, ಜಮೀನ್ದಾರಿ ಪದ್ಧತಿ,

ಬಡತನ, ಕ್ರೌರ್ಯ, ಭ್ರಷ್ಟಾಚಾರ, ಮುಂತಾದ ವಿಭಿನ್ನ ಕಥಾವಸ್ತುಗಳನ್ನು ಸಹಜವಾಗಿ ಅದಕೊಪ್ಪುವ ಭಾಷಾ ಮಾದರಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಕುವೆಂಪು ಮತ್ತು ತೇಜಸ್ವಿ ಅವರ ಕಥನ ಸಾಹಿತ್ಯದ ಭಾಷಿಕ ವಿನ್ಯಾಸಗಳನ್ನು ವಿಶ್ಲೇಷಣೆ ಮಾಡುವುದು ಪ್ರಮುಖ ಉದ್ದೇಶವಾಗಿದೆ.

ಕುವೆಂಪು ಮತ್ತು ತೇಜಸ್ವಿ ಕಥನದಲ್ಲಿ ಭಾಷಾ ವೈವಿಧ್ಯವನ್ನು ಕಾಣಬಹುದು. ಒಂದು ಭಾಷೆಯನ್ನಾಡುವ ಜನಾಂಗದಲ್ಲಿಯೇ ಅನೇಕ ಉಪಭಾಷೆಗಳಿರುತ್ತವೆ. ಸೃಜನಶೀಲ ಲೇಖಕ ತನ್ನ ಕಥನದಲ್ಲಿ ಉಪಭಾಷೆಯನ್ನು ಬಳಸಿಕೊಳ್ಳುತ್ತಾನೆ. ಆದರೆ ಅದನ್ನು ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ತಾಂತ್ರಿಕ ರೂಪದಲ್ಲಿ ಬಳಸಿಕೊಳ್ಳಬೇಕು ಎಂಬುದರ ಮೇಲೆ ಕೃತಿಯ ಯಶಸ್ಸು ನಿರ್ಧಾರವಾಗುತ್ತದೆ. ತೇಜಸ್ವಿಯವರ ಬರವಣಿಗೆಯಲ್ಲಿ ಮೇಲುಸ್ತರದಲ್ಲಿ ಹಾಸ್ಯ, ವಿನೋದದ ಧಾಟಿ ಕಂಡುಬಂದರೂ ಅದರಲ್ಲಿ ಅಡಗಿರುವ ಅಂತಃಸತ್ತ್ವ, ಗಂಭೀರ ಚಿಂತನೆಗಳು ಎಂತಹವರನ್ನು ಚಿಂತನೆಗೀಡು ಮಾಡುತ್ತವೆ. ಹಾಗೆಯೇ ಕುವೆಂಪುರವರು ಪರಂಪರಾಗತ ಸಿದ್ಧ ಮಾದರಿಗೆ ಜೋತುಬೀಳದೆ ಭಿನ್ನವಾದ ಭಾಷಿಕ ಅಭಿವ್ಯಕ್ತಿಯ ಮೂಲಕ ಗಮನ ಸೆಳೆಯುತ್ತಾರೆ.

ಈ ದೃಷ್ಟಿಯಿಂದ ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಮುಖ್ಯವಾದವು. ಈ ಕಾದಂಬರಿಗಳಲ್ಲಿ ಕುವೆಂಪು ಅವರ ಭಾಷಾ ಪ್ರಯೋಗ ಅಚ್ಚರಿಯುಂಟುಮಾಡುತ್ತದೆ. ಮೇಲುವರ್ಗದ ವೆಂಕಪ್ಪ ಜೋಯಿಸರಿಂದ ಹಿಡಿದು ಅತ್ಯಂತ ಕೆಳವರ್ಗದ ಬಾಡುಗಳ್ಳ ಸೋಮ, ಕಿಲಸ್ತರ ಜಾಕಿ, ಕುಂಬಾರ ನಂಜ ಈ ಎಲ್ಲಾ ಪಾತ್ರಗಳ ಭಾಷೆ ಅವರವರಿಗೆ ಮೀಸಲಾದುದು. ವೆಂಕಪ್ಪ ಜೋಯಿಸರ ಭಾಷೆಯನ್ನು ಚಂದ್ರೇಗೌಡರು ಮಾತನಾಡಲಾರರು. ಚಂದ್ರೇಗೌಡರ ಭಾಷೆಯನ್ನು ಆ ಕೆಳಗಿನ ಮೂವರು ಮಾತನಾಡಲಾರರು. ಈ ಕಾದಂಬರಿಯ ಒಂದೊಂದು ಪಾತ್ರವೂ ಕುವೆಂಪು ಅವರ ಭಾಷೆಯ ವೈವಿಧ್ಯತೆಗೆ ಸಾಕ್ಷಿಯಾಗುತ್ತೆ. ಉದಾಹರಣೆಗೆ ವೆಂಕಪ್ಪ ಜೋಯಿಸರ ಈ ಮಾತುಗಳನ್ನು ಗಮನಿಸಬಹುದು.

"ನಾನು ಹೇಳ್ದೆ ನಿನಗೆ ಮೊದಲೇ ಈ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ ಎಂದು ! ದೇವರು ದಿಂಡರು ಭಕ್ತಿ ಗಿಕ್ತಿ ಎಲ್ಲ ನಿರ್ನಾಮ ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತು ಬಿಡುತ್ತಾರೆ. ನಿನ್ನ ಮನೆ ಜಮೀನು

ಉಳಿಯಬೇಕಾದರೆ ಅವರ ಓದು ನಿಲ್ಲಿಸಿ ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹೆಚ್ಚು. ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ.

ಹಾಂಗೆ ಮಾಡೋದೆ ಸೈ ಅಂತ ಕಾಣ್ತದೆ ಈಗ ನೋಡಿ ಆ ಹೂವಯ್ಯ. ಅವನ ದೆಸೆಯಿಂದ ರಾಮಯ್ಯ ಇಬ್ಬರೂ ಸೇರಿ ದೈಯ್ಯ ದ್ಯಾವರು ಭೂತ ಗೀತ ಜಕಣಿ ಗಿಕಣಿ ಒಂದೂ ಬ್ಯಾಡ ಅಂತ ಬೋದ್ನೋಕೆ ಸುರು ಮಾಡಿದ್ದಾರೆ. ಆ ಹೂವಯ್ಯನಂತೂ ಅದೆಂತೆಂತದೊ ಭಗವದ್ಗೀತೆಯಂತೆ ಉಪ್ನಿಷಂತೆ ಓದಿ ತಲೆ ಕೆಡಿಸಿಕೊಳ್ಳುತ್ತಿದ್ದಾನೆ.... ಮನೆಗೆ ಬಂದವನು ಒಂದು ಆಳು ಕಾಳಿನ ಕೆಲಸ ಕೂಡ ನೋಡೋದಿಲ್ಲ. ಉಪ್ಪರಿಗೆ ಮೇಲೆ ಓದುತ್ತಾ ಕುಳಿತು ಬಿಡ್ತಾನೆ.

'ಹೌದು ದುಡಿದು ಹಾಕುವವರು ಒಬ್ಬರಿದ್ದರೆ ಮತ್ತೇನು ಮಾಡುತ್ತಾನೆ? ಅವನ ಪಾಲು ಅವನಿಗೆ ಕೊಟ್ಟು ಬೇರೆ ಹಾಕು ! ಆಗೆಲ್ಲ ಸರಿಹೊಗುತ್ತದೆ ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೇ ನಮಗೆ ಗೊತ್ತಾಗುವುದಿಲ್ಲ.' ಗೌಡರು ನಗುತ್ತಾ "ನಿಮಗೆ ಗೊತ್ತಾಗದೆ ಏನು? ". (ಕುವೆಂಪು., ಕಾನೂರು ಹೆಗ್ಗಡಿತಿ. ೨೦೦೭, ಪುಟ ೧೭೫) ಎಂದರು.

ಮೇಲಿನ ಸಂಭಾಷಣೆಯಲ್ಲಿ ವೆಂಕಪ್ಪಯ್ಯ ಜೋಯಿಸರ ಭಾಷೆ ಅಗ್ರಹಾರವನ್ನು ಪ್ರತಿನಿಧಿಸುತ್ತದೆ. ಚಂದ್ರಯ್ಯಗೌಡರ ಭಾಷೆಯು ಸೀತೆಮನೆ ಸಿಂಗಪ್ಪಗೌಡರು ಹಾಗೂ ಮುತ್ತಳ್ಳಿ ಶ್ಯಾಮೇಗೌಡರನ್ನು ಪ್ರತಿನಿಧಿಸುತ್ತದೆ. ಇಲ್ಲಿ ಕೂಡ ಚಂದ್ರಯ್ಯಗೌಡರ ದರ್ಪದ ಭಾಷೆ. ಸಿಂಗಪ್ಪಗೌಡರ ಹಾಸ್ಯ ಮಿಶ್ರಿತ ಭಾಷೆ. ಶ್ಯಾಮಯ್ಯಗೌಡರ ಸಾತ್ವಿಕ ಭಾಷೆ ಈ ವ್ಯತ್ಯಾಸಗಳನ್ನು ಗುರುತಿಸಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಲ್ಲೂರು ಮಂಜುಭಟ್ಟರು ಅತ್ಯಂತ ಮೇಲುವರ್ಗದ ಭಾಷೆಗೆ ಸಂಕೇತವಾಗುತ್ತಾರೆ. ಸುಬ್ಬಣ್ಣ ಹೆಗ್ಗಡೆ ಕಲ್ಲಯ್ಯಗೌಡರು. ರಂಗಪ್ಪಗೌಡರು ಭರಮಯ್ಯ ಹೆಗ್ಗಡೆ ಇವರು ಮಧ್ಯಮ ಮೇಲುವರ್ಗದ ಭಾಷಾಪ್ರತಿನಿಧಿಗಳು. ಎರಡು ಕಾದಂಬರಿಗಳಲ್ಲಿ ಅನೇಕ ಕೆಳಸ್ತರದ ಪಾತ್ರಗಳು ತಮ್ಮದೇ ಆದ ಉಪಭಾಷೆಗಳನ್ನು ಮಾತನಾಡುತ್ತಾರೆ. ಸೇರೆಗಾರರು ಮೇಸ್ತ್ರಿಯಾಗಿ. ಅಧಿಕಾರ ದರ್ಪದಿಂದ ಭಾಷೆಯನ್ನು ಪ್ರಯೋಗಿಸಿದರೆ ಘಟ್ಟದ ಕೆಳಗಿನಿಂದ ಬಂದವರ ಸಹಾಯಕರು ದೈನ್ಯದ ಭಾಷೆಗೆ ಪ್ರತಿನಿಧಿಗಳಾಗುತ್ತಾರೆ. ಗುತ್ತಿ. ಚೀಂಕ್ರ, ಐತ. ಪುಟ್ಟಾಚಾರಿ ಇವರೆಲ್ಲಾ ಕೆಳಸ್ತರದ ಭಾಷೆಗಳ ಪ್ರತಿನಿಧಿಗಳಾಗುತ್ತಾರೆ. ಇವರಲ್ಲದೆ ನಾಯಕರು. ಹಲಸರು. ದೀವರು ಮುಂತಾದ

ಅನೇಕ ಬುಡಕಟ್ಟು ಸ್ವರೂಪದ ಜನಗಳ ಭಾಷಾ ಪ್ರಭೇದಗಳೂ ಇಲ್ಲಿ ಸೇರಿಕೊಂಡಿವೆ. ಇಂತಹ ಒಂದು ಪ್ರಶಾಂತ ಗ್ರಾಮ ಸೊಡಗಿನ ಭಾಷೆಯ ಮಧ್ಯೆ ಗಡ್ಡದಯ್ಯನಂತಹ ಜಗತ್‌ಮುಖಿಯಾದ ವ್ಯಕ್ತಿಯ ಭಾಷೆಯು ಇಲ್ಲಿ ಇಣುಕುತ್ತದೆ.

ಕೆಲವು ಮಹಿಳಾ ಪಾತ್ರಗಳು ಅವರದೇ ಆದ ಭಾಷಾ ಪ್ರಯೋಗ ಮಾಡುತ್ತಾರೆ. ಜಕ್ಕಮ್ಮ-ಲಕ್ಷ್ಮಮ್ಮರ ಜಗಳ, ಮರಾಠಿ ಮಂಜನ ಧೀರ್ಘ ಸ್ವರದ ಭಾಷೆ ಹೀಗೆ ಹಲವು ಭಾಷಿಕ ವಿನ್ಯಾಸಗಳ ಸಮ್ಮಿಳನವಾಗಿದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಹೊನ್ನಾಳ್ಳಿಯ ಸಾಬರು, ಕೇರಳದ ಸಾಬರು ಎರಡು ವಿಭಿನ್ನ ಮುಸಲ್ಮಾನರು ಕನ್ನಡ ಭಾಷೆಯನ್ನು ಉಪಯೋಗಿಸುವ ರೀತಿಯನ್ನು ಗ್ರಹಿಸಿರುವುದು ಲೇಖಕರ ಭಾಷಾ ಪ್ರಭುತ್ವಕ್ಕೆ ಸಾಕ್ಷಿಯಾಗಿದೆ.

"ಹೋಗಲಿ ಬಿಡು, ಹಮೀರಣ್ಣ, ನೀನು ನಿಕಾ ಮಾಡಿಕೋ ಸಂತೋಷ.... ಅಲ್ಲಯ್ಯ, ನನ್ನ ಕುದುರೆ ಬೇಡ ಅಂತಾ ಹೇಳಿಬಿಟ್ಟಂತೆ ?..... ನನ್ನ ಕುದುರೆ ಸ್ವಲ್ಪ ಬಡಕಲಾದ ಮಾತ್ರಕ್ಕೆ ನಿನ್ನ ಹೊರೋದಕ್ಕೆ ಆಗ್ತಿರಲಿಲ್ಲವೆ ಅದಕ್ಕೆ ? ನಿನೇನು ಭಾರಿ ಆಳೇ ? ಮದುವೆ ಗಂಡಾದ ಕೂಡ್ಲೆ ನಿನ್ನ ತೂಕ ಹೆಚ್ಚಿ ಬಿಡುತ್ತದ್ಯೋ? ಕೇಳಿದನು ಅಜ್ಜಿ ಸಾಬು. 'ಕುದುರೇನೇ ನಿಕಾ ಮಾಡಿಕೊಳ್ತಾನೇನೋ ?' ಗಹಗಹಿಸಿ ನಗುತ್ತಾ ಕೇಳಿದನು ಇಜಾರದ ಸಾಬು.

ನಾಲ್ವರ ನಗೆಯ ಮಧ್ಯೆ ಲುಂಗೀ ಸಾಬು ವಿವರಿಸಿದನು 'ಅವನು ಮಾಡಿಕೊಳ್ತೇನೆ ಅಂದ್ರೂ ಕುದುರೆ ಒಪ್ಪಬೇಕಲ್ಲಾ ? ಅದಕ್ಕಾಗಲೇ ಗಂಡು ಸಿಕ್ಕಯ್ತೆ ಅಲ್ಲಿ ನೋಡಿ ಕಾಣ್ತದಲ್ಲಾ ! ಭರ್ಜರಿ ಗಂಡು ! ಇವರ ಹಾಗೆ ಬಡಕಲಲ್ಲ !' ಎಲ್ಲರೂ ಆ ಕಡೆ ಕಣ್ಣಾದರೂ ಪ್ರಣಯ ಸಿದ್ಧತೆಯ ಪೂರ್ವ ಲೀಲೆಯಲ್ಲಿ ತೊಡಗಿದ್ದ ಕುದುರೆಗಳ ಕಡೆ..... ಮತ್ತೆ ? ನೀವು ಹೇಳಾದೇನು ಸುಳ್ಳಾ ? ಕರ್ಮೀನು ಸಾಬರ ಕುದುರೆ ಹ್ಯಾಂಗದೆ ನೋಡಿ ! ಅದರ ಕಾಲು ಮುರಿಯೊಕೆ ಬಂದೋರಿಗೆ ಒಂದು ಒದೆ ಒದ್ದರೆ ಸಾಲ್ದೇನು ? ಹಲ್ಲು ಮುರಿದೋಗ್ತಾರೆ !...."

ಅವನು ಇನ್ನೂ ಮುಂದುವರಿಯುತ್ತಿದ್ದನೋ ಏನೋ ? ಎಲ್ಲರೂ ಗೊಳ್ಳೆಂದು ನಕ್ಕುದನ್ನು ನೋಡಿ, ಪಿಚ್ಚನೆ ಹಲ್ಲು ಬಿಡುತ್ತಾ ತೆಪ್ಪಗಾದನು.

'ಅದೆಲ್ಲಾ ಸೈ ನೀನು ಕುದುರೆ ಮೇಲೆ ಯಾವಾಗಲಾದರೂ ಹತ್ತಿದ್ದಿಯಾ' ಇಜಾರದ ಸಾಬಿ ಲೇವಡಿ ಮಾಡಿದನು.

'ಕುದುರೆ ಮ್ಯಾಲೆ ಹತ್ತದಿದ್ರೆ ಏನಂತೆ ?.... ನಾ ಹುಡುಗನಾಗಿದ್ದಾಗ ದನಾಕಾಯೊಕೆ ಹೊಗ್ತಿದ್ದಾಗ ದನದ ಮೇಲೆ ಎಮ್ಮೆ ಮೇಲೆ ಎಷ್ಟು ಸಾರಿ ಹತ್ತಿಲ್ಲ ?....' ಪ್ರತಿಭಟಿಸುವಂತೆ ಮಾತಾಡಿದನು ಹಮೀರ.

'ಹಂಗಾರೆ ನೀ ಅದನ್ನು ಮಾಡಿದ್ದೀಯಾ ಅನ್ನು ಹೋರಿ ಕೆಲಸಾನ ?' ಇಜಾರ ಸಾಬಿಯ ಅಶ್ಲೀಲದ ಮಾತಿನ ಇಂಗಿತವನ್ನು ಗ್ರಹಿಸಲಾರದೆ ನಿಂತಿದ್ದ ಹಮೀರನಿಗೆ ಅದನ್ನು ಸ್ಪಷ್ಟ ಪಡಿಸಲೆಂಬಂತೆ ಒತ್ತಿ ವಿವರಿಸಿದನು. 'ಅಯ್ಯೋ ಬೆಪ್ಪಾ ! ಕುದುರೆ ಮೇಲೆ ಹತ್ತೋದು ಅಂದರೆ ಬೆನ್ನಮೇಲೆ ಹತ್ತಿ ಸವಾರಿ ಮಾಡೋದೋ ? ಅದರ ಬಾಲ ಎತ್ತಿ ಹಿಂದುಗಡೆಯಿಂದ ಹತ್ತೊದಲ್ಲ. ನೀ ದನಕ್ಕೆ ಎಮ್ಮೆಗೆ ಹತ್ತಿದ ಹಾಂಗೆ !". (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೯೮, ಪುಟ ೩೬೧)

ಇಜಾರದ ಸಾಬಿಯಿಂದ ಹೊನ್ನಾಳಿ ಹೊಡೆತ ತಿಂದ ಸಣ್ಣ ಬೀರ ಅವನ ಮೇಲೆ ಸೇಡುತಿರಿಸಿಕೊಳ್ಳುವ ಸಂದರ್ಭದಲ್ಲಿ ಹಾಸ್ಯದ ಲೇಪನ ಒದಗಿಸುವುದು ಕುವೆಂಪು ಅವರ ಪ್ರತಿಭೆಗೆ ಸಾಕ್ಷಿಯಾಗಿದೆ.

"ಅಂತೂ ಈ ಸಾಬರ ತಂಡದ ದೆಸೆಯಿಂದ ಸುಖಾ ಇಲ್ಲ".

'ಆ ದುಣ್ಣ ಮುಂಡೇಗಂಡ ! ಇಜಾರದ ಸಾಬೀ ! ಅವನ್ನ ಯಾರಾದರೂ ಕಡಿದು ಹಾಕಿದ್ರೆ ಎಂದು ಹಂಡೇ ಹಾಲು ಕುಡೀತಿದ್ದೆ !'

ಪ್ರತೀಕಾರ ಮಾಡಲಾರದ ನಿಟ್ಟಿನಿಂದ ಸಣ್ಣಬೀರ ಹೇಳಿದ್ದನ್ನು ಕೇಳಿ ನಕ್ಕು ಅವನ ತಂದೆ ದೊಡ್ಡಬೀರ ವಿಷಯದ ಕಟುತ್ವವನ್ನು ವಿನೋದದಿಂದ ಕಡಿಮೆ ಮಾಡಲೆಂಬಂತೆ ಹೇಳಿದನು.

ಎಲ್ಲಿಂದ ತರ್ತಿಯೋ ಅಷ್ಟೊಂದು ಹಾಲ್ನ ? ನಿನ್ನ ಹೇಣ್ತಿ ಹಡದ್ರೆ ಬಾಲೆಗೆ ಕುಡಿಸಾಕೆ ಒಂದು ಒಳಾಲೆ ಹಾಲಿಗೆ ಗತಿ ಇಲ್ಲ ?" (ಕುವೆಂಪು. ಮಲೆಗಳಲ್ಲಿ ಮದುಮಗಳು. ಪುಟ ೩೫೮)

ಈ ಸಂಭಾಷಣೆಯನ್ನು ಗಮನಿಸಿದಾಗ ಕುವೆಂಪು ಪ್ರೌಢ ಭಾಷೆಯನ್ನು ಬಳಸುವಷ್ಟೇ ಸಶಕ್ತವಾಗಿ ಹಾಸ್ಯ ಪ್ರಜ್ಞೆಯನ್ನು ಅಶ್ಲೀಲತೆಯ ಸೋಂಕಿಲ್ಲದೆ ಬಿಂಬಿಸಿರುವುದು ಕಂಡು ಬರುತ್ತದೆ. ಗಂಭೀರ ಭಾಷೆಯನ್ನು ಬಳಕೆ ಮಾಡುವಷ್ಟೇ ಸರಳವಾಗಿ ಕೆಳಸ್ತರದ ಭಾಷೆಯನ್ನು ಬಳಸುವಷ್ಟು ಸಶಕ್ತರು. ಭಾಷಾಬಳಕೆಯ ಅವರ ಪ್ರೌಢಿಮೆಗೆ ಇದು ಸಾಕ್ಷಿಯಾಗಿದೆ.

ಅಲ್ಲದೇ ಕುವೆಂಪು ಅವರು ತಮ್ಮ ನಿರೂಪಣಾ ತಂತ್ರದಲ್ಲಿ ಭವ್ಯತೆ ತರುವುದಕ್ಕೋಸ್ಕರ ಸಂಸ್ಕೃತ ಹಾಗೂ ಕಾವ್ಯ ಭಾಷೆಯಲ್ಲಿ ವರ್ಣಿಸುತ್ತಾರೆ. ಅದರಲ್ಲೂ ನಿಸರ್ಗದ ವರ್ಣನೆಯಲ್ಲಿ ಸಂಸ್ಕೃತ ಭೂಯಿಷ್ಟವಾದ ಕಾವ್ಯ ಭಾಷೆಯನ್ನು ಬಳಸುತ್ತಾರೆ.

"ಬೇಸಗೆಯ ಮಧ್ಯಾಹ್ನದ ಸೂರ್ಯನ ತಪ್ತ ತಾಮ್ರಬಿಂಬವು ಕಠೋರ ನಿಷ್ಕಾರುಣ್ಯದಿಂದ ಕರೆಯುತ್ತಿದ್ದ ಪ್ರಖರ ಕಿರಣ ವರ್ಷದಲ್ಲಿ ದಟ್ಟವಾಗಿ ಕಾಡು ಬೆಳೆದು ತೆರೆತೆರೆಯಾಗಿ ಹಬ್ಬಿದ ಮಲೆನಾಡಿನ ಬೆಟ್ಟ-ಗುಡ್ಡಗಳು ಆಯಾಸದಿಂದ ಮೂರ್ಛೆಗೊಂಡಂತೆ ಶ್ಯಾಮಲ ನಿದ್ರಾಸಕ್ತವಾಗಿದ್ದವು. ಧೂಳುಗೆಂಪಿನ ರಸ್ತೆ ಸಹ್ಯಾದ್ರಿಯ ಅರಣ್ಯದೇವಿಯ ಮಹಾಮಸ್ತಕದೆ ಸುಧೀರ್ಘವಾದ ಬೈತಲೆಯ ಸರಳ ವಕ್ರ ನಿಮ್ನೋನ್ನತ ರೇಖಾವಿನ್ಯಾಸದಂತೆ ಮೆರೆದಿತ್ತು.

ರಸ್ತೆಯಲ್ಲಿ ಅಲ್ಲಲ್ಲಿ ತಂತಿ ಕಂಬಗಳಿದ್ದು, ಬಾನಿಗೆದುರಾಗಿ ತಂತಿಯ ಕರಿಯಗೆರೆ ಕಂಬದಿಂದ ಕಂಬಕ್ಕೆ ಪ್ರವಹಿಸಿ ಓಡುವಂತಿತ್ತು. ಹೆದ್ದಾರಿಯ ಇಕ್ಕೆಲಗಳಲ್ಲಿಯೂ ಪ್ರಾರಂಭವಾಗಿ ಸ್ವಚ್ಛಂದ ಕಾನನಶ್ರೇಣಿ ದೃಷ್ಟಿದೂರದವರೆಗೂ ಪ್ರಸರಿಸಿತ್ತು. ಯಾವುದೊಂದು ಪ್ರಾಣಿಯ ಸಂಚಾರವೂ ಇರಲಿಲ್ಲ. ಆಗಾಗ ನೇರಿಲೆಲೆಯ ಪೊದರು ಮರಗಳಲ್ಲಿ ಪಿಕರಾಳ ಹಕ್ಕಿಗಳು ಮಾತ್ರ ಚಿಮ್ಮುತ್ತಿದ್ದುದು ಕಾಣಬರುತ್ತಿತ್ತು. ಆ ಮಟ-ಮಟ ಮಧ್ಯಾಹ್ನದಲ್ಲಿ ಅವುಗಳ ಆ ಕಾರ್ಯವೂ ಧೂರ್ತತನವಲ್ಲದೆ ಲೀಲೆಯಾಗಿರಲಿಲ್ಲ. ಅವು ಕೂಗುತ್ತಿದ್ದವೂ ಏನೋ ? ಆದರೆ ಕೇಳಿಸುತ್ತಿರಲಿಲ್ಲ. ಎರಡು ಎತ್ತುಗಳ ಕುತ್ತಿಗೆಯಲ್ಲಿದ್ದ ಸುಮಾರು ನಾಲ್ವತ್ತು ಐವತ್ತು ಕಿರುಗಂಟೆಗಳು ಇಂಪಾಗಿ ನಾದಗೈದು ಮಹಾರಣ್ಯ ಮೌನವನ್ನು ಮಥಿಸುತ್ತಿದ್ದವು.

ಆ ಹಗಲು ಆ ಬಿಸಿಲು, ಆ ಕಾಡಿನ ಹಸುರು ಶಾಂತಿ, ಆ ವಿಜನತೆ ಆ ಗಾಡಿಯ ಡೋಲಾಯಮಾನತೆ, ಘಂಟಾನಾದದ ಜೋಗುಳದುಲಿ ಇವುಗಳಲ್ಲಿ ಗಾಡಿಯೊಳಗಿದ್ದ ಹಸಿದು ಆಯಾಸಗೊಂಡಿದ್ದ ಜನಗಳು ಮಾತುಬಿಟ್ಟು ತೂಕಡಿಸ ಲಾರಂಭಿಸಿದರು. ಗಾಡಿ ತೂಗಿದಂತೆಲ್ಲಾ ತೂಗುತ್ತಿತ್ತು. ಆ ಮಹಾ ನಿಶ್ಚಲ ಜಗತ್ತಿನಲ್ಲಿ ಗಾಡಿಯೊಂದೇ ಚಲಿಸುವ ಕ್ಷುದ್ರ ವಸ್ತುವಾಗಿತ್ತು". (ಕುವೆಂಪು., ಕಾನೂರು ಹೆಗ್ಗಡಿತಿ. ೧೯೯೮. ಪುಟ ೧೨)

“ಜಗತ್ತು ರಾತ್ರೀಯ ನೀರವ ನಿದ್ದೆಗೆ ಸನ್ನಾಹಗೊಳಿಸುತ್ತಿತ್ತು. ಸೂರ್ಯನಾಗಲೆ ಮುಳುಗಿ, ಪಶ್ಚಿಮದಿಕ್ಕಿನ ಪರ್ವತ ವಿರಚಿತ ದಿಗಂತದಲ್ಲಿ ಅಪರಾಸ್ತದ ಕೆನ್ನೀಲಿಯ ಬೈಗುಬಣ್ಣವು, ತೆಳು ಮುಗಿಲುಗಳ ಹೃದಯ ಮಧ್ಯೆ ಅಂತರ್ಯಾಮಿಯಾಗಿತ್ತು. ಅರಣ್ಯಾವೃತವಾದ ಗಂಭೀರ ಸಹ್ಯಾದ್ರಿ ಶ್ರೇಣಿಗಳ ಗಿರಿಕಂದರಗಳ ಮೇಲೆ ಇರುಳದೇವಿ ತನ್ನುಡುಗೆಯ ಕರಿಸೆರಗನ್ನು ಮೆಲ್ಲಗೆ ಹೊದಿಸುತ್ತಿದ್ದಳು. ಗೂಡಿಗೆ ಹೋಗುವ ಹಕ್ಕಿಯ ಹಾಡು ಮುಗಿದಿತ್ತು. ಹಟ್ಟಿಗೆ ಹೋಗುವ ದನದ ಕೂಗು ನಿಂತಿತ್ತು. ಓಂಕಾರದಂತೆ ನಾಡನ್ನೆಲ್ಲ ತುಂಬಿ ತುಳುಕುವ ಸಾವಿರಾರು ದುಂಬಿ ಜೇನುಹುಳುಗಳ ಝೇಂಕಾರದ ನಿರಂತರ ನಾದವಾಹಿನಿ ಅಥವಾ ವಾರಿಧಿ ಮೊರೆಯತೊಡಗಿತ್ತು. ಮರಗಿಡಗಳ ಸ್ಪಷ್ಟಾಕೃತಿಗಳು ಮಾದು ಅನ್ನುಭಚಾಕಾರವು ಮಸಿ ಮಸಿ ಮಾಸಲು ಮಾಸಲಾಗಿ ತೋರುತ್ತಿತ್ತು”. (ಕುವೆಂಪು, ಕಾನೂರು ಹೆಗ್ಗಡಿತಿ, ೧೯೯೮, ಪುಟ ೬೫)

ಈ ಮೇಲಿನ ಭಾಗಗಳನ್ನು ವಿಶ್ಲೇಷಿಸಿದಾಗ ನಮಗೆ ಕುವೆಂಪು ಅವರ ವರ್ಣನೆ ಸಂಸ್ಕೃತ ಭೂಯಿಷ್ಟವಾದ, ಕಾವ್ಯಾತ್ಮಕ ಭಾಷಾಭಿವ್ಯಕ್ತಿಯ ಕಲಾತ್ಮಕತೆಯಿಂದ ಕೂಡಿದೆ. ಇದು ಸನ್ನಿವೇಶಕ್ಕೆ ಪೂರಕವಾಗಿ ಗ್ರಂಥಸ್ಥಶೈಲಿಯಲ್ಲಿ ಮೂಡಿಬಂದಿದೆ. ಸಾಮಾನ್ಯವಾಗಿ ವಸ್ತುನಿಷ್ಟವಾದ ಸಿದ್ಧಮಾದರಿಯ ಶೈಲಿ ಇರುವ ಕಥೆಯಲ್ಲಿ ಭಾಷೆ ಕ್ರಿಯಾತ್ಮಕಗೊಳ್ಳುವುದಿಲ್ಲ ಎಂಬ ಮಾತಿಗೆ ಕುವೆಂಪು ಹೊರತಾಗಿದ್ದು, ಶಿಷ್ಟಭಾಷೆಯ ಅಳವಡಿಕೆ ಸತ್ವಯುತವಾಗಿದೆ ಹಾಗೂ ಕುವೆಂಪು ಅವರ ನೈಜ ಅನುಭವದ ಆಳವನ್ನು ಸ್ಪರ್ಶಿಸುವ ರೀತಿ ವರ್ಣಿತವಾಗಿದೆ.

ಸಾಮಾನ್ಯವಾಗಿ ಪರಿಸರದ ವರ್ಣನೆಯ ಸಂದರ್ಭದಲ್ಲಿ ಈ ಬಗೆಯ ಭಾಷೆಯನ್ನು ಬಳಸುವುದು ಅವಶ್ಯಕ. ಅದು ಅನುಭವದ ಭಾವಪರವಶತೆಯನ್ನು ಸೂಚಿಸುತ್ತದೆ. ಕುವೆಂಪು ಸಾಹಿತ್ಯದ ಈ ಭಾಷೆಯನ್ನು ಅದರಲ್ಲಿಯೂ ಕಾವ್ಯಭಾಷೆಯನ್ನು ‘ಭಾವೋಪಯೋಗಿ’ ಎನ್ನಲಾಗಿದೆ. ಪ್ರತಿಭೆ, ದಟ್ಟ ಜೀವನಾನುಭವ, ಮೂರ್ತರೂಪದ ಗ್ರಹಿಕೆಯಿಂದಾಗಿ ಕುವೆಂಪುರವರು ತಮ್ಮ ಭಾವುಕ ಶೈಲಿಯನ್ನು ತಮ್ಮ ಕಾವ್ಯಗಳಷ್ಟೇ ಅಲ್ಲದೇ ಗದ್ಯದಲ್ಲಿಯೂ ನೈಜಶೈಲಿಯನ್ನಾಗಿಸಿಕೊಂಡು ಅದಕ್ಕೊಂದು ‘ಸಾಂಸ್ಕೃತಿಕ ಆಯಾಮ’ವನ್ನು ನೀಡಿದ್ದಾರೆ.

ಮನುಷ್ಯ ಸಂಬಂಧದ ಅಂತರವನ್ನು ಸೂಚಿಸುವ ಪಾರದರ್ಶಕವೂ, ಶುದ್ಧ ಗ್ರಂಥಸ್ಥವೂ ಅಷ್ಟೇ ನೇರ ಮತ್ತು ಸರಳವಾದ ಭಾಷೆ ಕುವೆಂಪು ಅವರ ಕತೆಗಳಲ್ಲಿ ಬಳಕೆಗೊಂಡಿದೆ. ಅವುಗಳಲ್ಲಿನ ವರ್ಣನೆ ಮತ್ತು ಸಂಭಾಷಣೆಗಳನ್ನು ಗಮನಿಸಿದಾಗ ಇದು ತಿಳಿಯುತ್ತದೆ.

"ಮೀನಾಕ್ಷಿಯ ವಯಸ್ಸು ಲಂಗಕ್ಕೂ ಸೀರೆಗೂ ನಡುವೆ ಉಯ್ಯಾಲೆಯಾಡುತ್ತಿತ್ತು. ಆದರೆ ಈಗ ಲಂಗಕ್ಕಿಂತ ಸೀರೆಯೇ ಚೆನ್ನಾಗಿ ಒಪ್ಪುತ್ತಿತೆಂದು ಆಕೆಯ ಮನೆ ಮೇಷ್ಟರ ಅಭಿಪ್ರಾಯವಾಗಿತ್ತು. ಅದೂ ನಿಜವೇ, ಸೀರೆ ಹೊಸ ಪರಿಚಯವಾಗಿದ್ದುದರಿಂದ ಅದನ್ನು ಉಟ್ಟುಕೊಂಡಾಗಲೆಲ್ಲಾ ಆಕೆಯ ಮುಖ ನಾಚಿನಿಂದ ಕೆಂಪೇರುತ್ತಿತ್ತು. ಆ ನಾಚಿಕೆಗೆ ಎಲ್ಲರೂ ತನ್ನನ್ನೇ ನೋಡುತ್ತಾರೆಂಬ ಚಿಂಕ ಬೇರೆ ಸೇರುತ್ತಿತ್ತು. ಬಾಲ್ಯವೂ ಕೌಮಾರ್ಯಕ್ಕೆ ದಾಟುತ್ತಿದ್ದುದರಿಂದಲೂ ನಾಚಿಕೆ ಚಿಂಕಗಳ ದೆಸೆಯಿಂದಲೂ ಆಕೆ ಉಟ್ಟುಕೊಳ್ಳುತ್ತಿದ್ದ ತರತರದ ಬಣ್ಣಬಣ್ಣದ ಸೀರೆಗಳ ಪ್ರಭಾವದಿಂದಲೂ ಸಾಧಾರಣವಾಗಿರುತ್ತಿದ್ದ ಮೀನಾಕ್ಷಿಯ ರೂಪ ಒಂದು ತೆರನಾದ ಸೌಂದರ್ಯವಾಗಿ ಕಾಣುತ್ತಿತ್ತು. ಆ ಚೆಲುವಿನ ಬರಿಮುಗುಳ ಜೇನಿನ ನೋಟದೌತಣಕ್ಕಾಗಿಯೇ ತುಂಬಿ ಹೊತ್ತಿಗೆ ಮುಂಚೆ ಪಾಠ ಹೇಳಿಕೊಡಲು ಬರುತ್ತಿದ್ದುದು. ಈ ಸತ್ಯ ತುಂಬಿಯ ತಲೆಗೂ ಹೊಕ್ಕಿರಲಿಲ್ಲ. ಮೊಗ್ಗಿನ ಎದೆಗೂ ಸೋಂಕಿರಲಿಲ್ಲ". (ಕುವೆಂಪು., ನನ್ನ ದೇವರು ಮತ್ತು ಇತರ ಕಥೆಗಳು, ೨೦೦೫, ಪುಟ ೪೯)

"ನಾನು ಎತ್ತರವಾದ ಮಂಟಪದ ಬಂಡೆಯ ಮೇಲೆ ಕುಳಿತಿದ್ದೆ. ಅಷ್ಟರಲ್ಲಿ ಸಮೀಪವಾಗಿದ್ದ ದಿಗಂತದ ಮಲೆಗಳ ತಿಂಗಳು ಮೂಡಿದನು. ದಪ್ಪನೆ ದುಂಡಗೆ ನೀಲಾಕಾಶದಲ್ಲಿ ತೇಲುವ ಹೊನ್ನಿನ ಚೆಂಡಿನಂತೆ ಜ್ಯೋತ್ಸಾವರ್ಷವನ್ನು ವಿಶ್ವದಲ್ಲೆಡೆಗೆ ಚೆಲ್ಲುತ್ತಾ ಮೂಡಿಬಂದನು. ಪೂರ್ಣಿಮಾನಿಶಾಕಾಂತನ ಆಗಮನ ಮಹೋತ್ಸವಕ್ಕೆಂದು ಬಾನ್ದೇವಿ ಗಗನ ವೇದಿಕೆಯಲ್ಲಿ ವಿರಚಿಸಿದ ರಂಗವಲ್ಲಿಯಂತೆ ಮುದ್ದಾಗಿ ಕಂಗೊಳಿಸುತ್ತಿದ್ದ ಬಿಳಿಯ ಬಣ್ಣದ ಪುಡಿ ಮುಗಿಲು ಬಣ್ಣವೇರಿ ಸುಣ್ಣದ ನೀರಿಗೆ ಅರಸಿನ ಬೆರೆಸಿದಂತೆ ನಸುಗೆಂಪಾಯಿತು. ರಮಣೀಯವಾಗಿದ್ದ ದೃಶ್ಯ ರಮಣೀಯತರವಾಯ್ತು. ಕಲ್ಲಿಂದ ಕಲ್ಲಿಗೆ ಧುಮುಕುತ್ತಿದ್ದ ಹೊಳೆಯ ನೀರು ತಿಂಗಳ ಬೆಳಕಿನಲ್ಲಿ ಸಹಸ್ರಾರು ಮಿಣುಕು ಹುಳುಗಳಂತೆ ಮಿರುಗತೊಡಗಿತು. ಮೆಲ್ಲಗೆ ಬಹು ಮೆಲ್ಲಗೆ ತಂಗಾಳಿ ಬೀರುತ್ತಿತ್ತು. ದೂರ ಪಶ್ಚಿಮ ದಿಕ್ಕಿನಿಂದ ಪರ್ವತಗಳ ಇಡುಕಿನಲ್ಲಿ ನುಸಿದು ಕಣ್ಮರೆಯಾಗುವ ತುಂಗೆ ಅನಂತದಿಂದ ಮಿಂಚಿ ಮರಳಿ ಅನಂತರ ಮರೆಯಾಗುವ ದಿವ್ಯಭಾವದಂತೆ ಮಂಗಳ್ ಮನೋಹರವಾಗಿ ತೋರಿದಳು.

ನದಿಯ ಹಿಕ್ಕಲಗಳಲ್ಲಿ ದಿಗಂತ ಪರ್ಯಂತವಾಗಿ ಹಬ್ಬಿ ಏರಿ ಕಿಕ್ಕಿರಿದ ಶ್ಯಾಮಲ ವನಮಾಲೆಗಳು ಹುಣ್ಣಿಮೆಯಿರುಳಿನ ಹೊಂಗನಿಸಿನಲ್ಲಿ ಮಲಗಿರುವ ಪರ್ಸುಡಲ ಪೆರ್ದರೆಗಳಂತೆ ಮಾಲೆ-ಮಾಲೆಯಾಗಿ ರಂಜಿಸಿದವು". (ಕುವೆಂಪು., ನನ್ನ ದೇವರು ಮತ್ತು ಇತರ ಕಥೆಗಳು, ಪುಟ ೩೨)

ಕುವೆಂಪು ಅವರ ವಿಶಿಷ್ಟ ಅನುಭವಗಳನ್ನು ಕಥನಗಳ ಮೂಲಕ ವ್ಯಕ್ತಪಡಿಸಲು ಶಿಷ್ಟ ಹಾಗೂ ಕಾವ್ಯ ಭಾಷೆಯನ್ನು ವಿವಿಧ ಸ್ತರಗಳಲ್ಲಿ ಗಂಭೀರವಾಗಿ ದುಡಿಸಿಕೊಂಡಿರುವುದನ್ನು ಈ ಮೇಲ್ಕಂಡ ಉದ್ಧರಣೆಗಳಲ್ಲಿ ಕಾಣಬಹುದಾಗಿದೆ. ಕತೆಯೊಂದರ ಮೂಲಕ ವ್ಯಕ್ತಗೊಳ್ಳುವ ಅನುಭವ, ದರ್ಶನ, ಕಾಣ್ಕೆಗಳು ಸಹೃದಯರನ್ನು ಮುಟ್ಟಬೇಕೆಂಬ ಅಭೀಪ್ಸೆಯನ್ನು ನಾವಿಲ್ಲಿ ಗಮನಿಸಬಹುದಾಗಿದೆ. ಕುವೆಂಪು ಕತೆ-ಕಾದಂಬರಿಗಳಲ್ಲಿನ ನಿಸರ್ಗ ವರ್ಣನೆಗೆ ಬಳಕೆಯಾಗಿರುವ ಭಾಷೆ ಎಲ್ಲೂ ತೊಡಕು ಎನಿಸುವುದಿಲ್ಲ. ಭಾವ, ಅರ್ಥ, ಸಂದರ್ಭಗಳು ಸಮಯೋಚಿತ ವಿಷದೀಕರಣದಿಂದ ಹೊರ ಹೊಮ್ಮಿದೆ.

ತೇಜಸ್ವಿಯವರು ತಮ್ಮ ಕತೆ-ಕಾದಂಬರಿಗಳಲ್ಲಿ ಕುವೆಂಪು ಅವರಂತೆ ಗ್ರಂಥಸ್ಥವಾದ, ಶಿಷ್ಟ ಭಾಷೆಯನ್ನು ಬಳಕೆಮಾಡಿದ್ದಾರೆ. ಆದರೆ ಕುವೆಂಪು ಅವರ ವರ್ಣನಾ ವೈಭವ, ಕಾವ್ಯಸತ್ತ್ವವನ್ನು ಇವರ ಬರವಣಿಗೆಯಲ್ಲಿ ಕಾಣಲು ಸಾಧ್ಯವಿಲ್ಲ. ಕುವೆಂಪು ಅವರ ದರ್ಶನ, ಪೂರ್ಣದೃಷ್ಟಿಯನ್ನು ಇವರ ಭಾಷಿಕ ಅಭಿವ್ಯಕ್ತಿಯಲ್ಲಿ ಕಾಣಬಹುದು. ಹಾಸ್ಯ, ವಿಡಂಬನಾತ್ಮಕ ಶೈಲಿಯಲ್ಲಷ್ಟೇ ಅಲ್ಲದೇ ಸುಧಾರಣಾವಾದಿ ನೆಲೆಯ ಅಂಶಗಳನ್ನು ಸಶಕ್ತವಾಗಿರುವ ಇವರ ಭಾಷಾಭಿವ್ಯಕ್ತಿಯಲ್ಲಿ ಕಾಣಬಹುದಾಗಿದೆ.

"ಕುಬಿ ತನ್ನ ಕೈಚಳಕವನ್ನು ಎಂದೂ ಅತಿಮಾನುಷವೆಂದಾಗಲೀ ಅಮಾನುಷವೆಂದಾಗಲೀ ನಂಬಿರಲಿಲ್ಲ. ಅವನು ನಂಬುವುದಿರಲಿ, ನಂಬಿದವರನ್ನು ಕಂಡರೆ ಆಗುತ್ತಲೂ ಇರಲಿಲ್ಲ. ಈ ಬಗೆಯ ಶ್ರದ್ಧೆ ನಂಬುಗೆಗಳಿಂದ ಆಗುವ ಭೀಕರ ಅನಾಹುತಗಳನ್ನು ವೈದ್ಯನಾಗಿ ದಿನವೂ ಅವನು ನೋಡುತ್ತಿದ್ದ. ಅಷ್ಟೇ ಅಲ್ಲದೇ ಕಾರ್ಯಕಾರಣ ಬದ್ಧವಲ್ಲದ ಆ ಮೂಢ ಪ್ರಪಂಚವು ಅವನಿಗೆ ನಿಜಕ್ಕೂ ನರಕಸದೃಶವಾಗಿತ್ತು. ರೋಗದ ವಿರುದ್ಧ ಹೋರಾಡುವುದು ಎಂದರೆ, ಅದಕ್ಕೆ ಕಾರಣವಾದ ಅಜ್ಞಾನ ಹಿಂದುಳಿದಿರುವಿಕೆ, ಅದಕ್ಕೆ ಪೂರಕವಾದ ಅವರ ಮೂಢನಂಬಿಕೆಗಳು ಹಾಗೂ ಇವೆಲ್ಲಕ್ಕೂ ಕಾರಣವಾದ ಅವರ ಬಡತನ ಈ ಎಲ್ಲದರ

ವಿರುದ್ಧ ಹೋರಾಡುವುದು ಎಂದು ಕುಬಿಗೆ ನಿಧಾನವಾಗಿ ಅರಿವಾಗತೊಡಗಿತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ೨೦೦೯, ಪುಟ ೪೫)

"ಅಲ್ಲಿ ನಡೆಯುವ ಅರ್ಥವಾಗದ ಕ್ರಿಯಾಪರಂಪರೆಗಳಲ್ಲಿ ಸಿದ್ದಪ್ಪನ ಅಂತರ್ಧಾನ ಅವರಿಗೆ ಒಂದು ಕ್ಷಣ ಕಳವಳ ಹುಟ್ಟಿಸಿದ್ದೇನೋ ನಿಜ. ಆದರೆ ಒಮ್ಮೆ ತಮ್ಮ ಹಣೆಬರಹವನ್ನು ಅಮೂರ್ತಕ್ಕೆ ಒಪ್ಪಿಸಿದ ಮೇಲೆ ಎಲ್ಲಾ ಯಾರದೋ ಲೀಲೆಯಲ್ಲವೇ ? ಯಾರ ಲೀಲೆ ? ಯಾರು ಈ ಬಾಸ್ ? ಮಂಜುನಾಥನೋ, ಅಯ್ಯಪ್ಪನೋ ? ತಿಮ್ಮಪ್ಪನೋ ? ಯಾರೋ ಒಬ್ಬ ಯಾರೂ ತಿಳಿಯದ ಬಾಸ್ ಎಲ್ಲೋ ಕುಳಿತುಕೊಂಡು ತಮ್ಮ ಬುದ್ಧಿಗೆ ಎಂದೆಂದೂ ಅಗ್ರಾಹ್ಯವಾದ ತರ್ಕದಿಂದ ತಮ್ಮ ಭವಿಷ್ಯ ನಿರ್ಧರಿಸುತ್ತಾನೆ. ಅವರ ಪಾಲಿಗೆ ಕೋಟು ಕಛೇರಿ ಕಾನೂನು ಇವೆಲ್ಲ ತಮ್ಮ ಬದುಕಿನ ಅಂತಿಮ ಶೂನ್ಯವನ್ನು ಮರೆಯುವ ಪ್ರಯತ್ನ ಅಷ್ಟೇ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಜುಗಾರಿಕ್ರಾಸ್, ೨೦೦೯, ಪುಟ ೧೩೧)

ಈ ಮೇಲ್ಕಂಡ ಭಾಷಿಕ ವಿನ್ಯಾಸವನ್ನು ಗಮನಿಸಿದಾಗ ತೇಜಸ್ವಿಯವರು ಗ್ರಂಥಸ್ಥವಾದ ಭಾಷೆಯನ್ನು ಬಳಕೆ ಮಾಡಿದ್ದರೂ ವಾಸ್ತವಿಕ ಪ್ರಪಂಚವನ್ನು ಪ್ರಬುದ್ಧತೆಯಿಂದ ನೋಡುವ, ಕಾರ್ಯ-ಕಾರಣ ಸಂಬಂಧವನ್ನು ವಿಶ್ಲೇಷಿಸುವ ದೃಷ್ಟಿಯಿಂದ ಕಲಾತ್ಮಕ ಆಯಾಮ ಪಡೆದುಕೊಳ್ಳುತ್ತದೆ.

ಕುವೆಂಪು ಅವರಂತೆ ತೇಜಸ್ವಿಯವರೂ ಆಧ್ಯಾತ್ಮಿಕ ಅಂಶಗಳನ್ನು ಸಶಕ್ತ ಭಾಷೆಯ ಮೂಲಕ ವ್ಯಕ್ತಪಡಿಸಬಲ್ಲರು ಎಂಬುದನ್ನು ಕರ್ವಾಲೋ ಕಾದಂಬರಿಯಲ್ಲಿ ಕಾಣಬಹುದು. ಜೀವವಿಕಾಸದ ಕೀಲಿಕೈನಂತೆ ತೋರುವ 'ಹಾರುವ ಓತಿ'ಯ ದರ್ಶನಕ್ಕಾಗಿ ಹೊರಟ ಪ್ರಯಾಣದ ಮಧ್ಯೆ ಅವರಿಗೆ ಹೀಗನ್ನಿಸುತ್ತದೆ.

"ಸುತ್ತೆಲ್ಲಾ ಈಚಲು ಪೊದೆಗಳು ಅಲೆ ಅಲೆಯಾಗಿ ವಿಶಾಲವಾಗಿ ಹಬ್ಬಿದ ಬಯಲು. ಅಲ್ಲೊಂದು ಇಲ್ಲೊಂದು ಸಣ್ಣ ಗುಡ್ಡಗಳಿದ್ದರೂ, ಅದರ ಎಲ್ಲ ಪಾರ್ಶ್ವಗಳೂ ಒಂದೇ ರೀತಿಯಾಗಿದ್ದವು. ನನಗನ್ನಿಸಿತು, ನಮಗೆ ಗೊತ್ತು-ಗುರಿ ಇಂಥದೇ ಎಂದು ಏನಿದೇ ? ನಾವು ಹುಡುಕ ಹೊರಟಿರುವ ಹಾರುವ ಓತಿಯಾದರೂ ಇಂಥಲ್ಲೇ ಇದೆಯೇ ? ಅದರ ಅಮೂಲ್ಯತೆಯಾದರೂ ಕಲ್ಪಾಂತರಗಳಾಚೆಯ ಕಾಲದ ಅಗಾಧ ಸ್ತರಗಳಲ್ಲಿ ಹುದುಗಿಹೋಗಿದೆ. ಎತ್ತ ಹೋದರು ಒಂದೇ ಅನ್ನಿಸಿತು. ಕರ್ವಾಲೋರ ಕಾಲದ ಮೂಲಮಾನಗಳು, ಭೇದ ವಿಕಾಸದ ಮಹಾನ್ ಗೋಪ್ಯಗಳು ಇವನ್ನೆಲ್ಲ ನಿಲುಕಿಸಿಕೊಳ್ಳಲು ಮನಸ್ಸು ಚಾಚಿ ತಟ್ಟಕನೆ ನಮ್ಮ ಸದ್ಯದ ಪರಿಸ್ಥಿತಿ ನಮ್ಮ

ಆಧ್ಯಾತ್ಮಿಕ ಸ್ಥಿತಿಯಂತೆ ತೋರಿತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೯, ಪುಟ ೯೯) ಈ ಮೂಲಕ ಮನುಷ್ಯನ ಅಮೂರ್ತ ಹಾಗೂ ಮೂರ್ತ ಅಸ್ತಿತ್ವದ ನೆಲೆಗಳ ನಿಗೂಢತೆಯನ್ನು ತತ್ತ್ವಶಾಸ್ತ್ರದ ಭಾಷೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ಕುವೆಂಪು ಮತ್ತು ತೇಜಸ್ವಿಯವರ ಭಾಷೆಯ ಅಭಿವ್ಯಕ್ತಿ ಸಮ್ಮಿಶ್ರ ಸ್ತರದ್ದು. ಇಬ್ಬರ ಕತೆ-ಕಾದಂಬರಿಗಳಲ್ಲಿ ನಿರೂಪಣೆಯ ಶೈಲಿಯನ್ನು ಗಮನಿಸಿದಾಗ, ಕಥೆಗಾರನೇ ಹೇಳುವ ನೇರ ಕಥನದ ಶೈಲಿ ಹಾಗೂ ಕಥೆಗಾರ ಅಥವಾ ನಿರೂಪಕ ಪಾತ್ರವೂ ಕಾದಂಬರಿ-ಕತೆಯ ಒಳಗಿದ್ದು, ವರದಿ ಮಾಡುವ ಶೈಲಿಯನ್ನು ಇಬ್ಬರಲ್ಲೂ ಕಾಣಬಹುದಾಗಿದೆ.

ಕುವೆಂಪು ಅವರ 'ಕಾನೂರು ಹೆಗ್ಗಡಿತಿ' 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ಹಾಗೂ 'ಧನ್ವಂತರಿ ಚಿಕಿತ್ಸೆ' 'ಈಶ್ವರನೂ ನಕ್ಕಿರಬೇಕು', ತೇಜಸ್ವಿಯವರ 'ಕರ್ವಾಲೋ' 'ಸ್ವರೂಪ' 'ನಿಗೂಢ ಮನುಷ್ಯರು' 'ಪಂಜ್ರೋಳ್ಳಿ ಪಿಶಾಚಿಯ ಸವಾಲು' 'ಕಿರಗೂರಿನ ಗಯ್ಯಾಳಿಗಳು' ಹೀಗೆ ಬಹುತೇಕ ಎಲ್ಲಾ ಕೃತಿಗಳಲ್ಲೂ ನಿರೂಪಕನೇ ಪಾತ್ರಧಾರಿಯಂತೆ ಕಥನವನ್ನು ನಿರೂಪಣೆ ಮಾಡುವುದನ್ನು ಕಾಣಬಹುದು. ಈ ಕಥೆ-ಕಾದಂಬರಿಗಳಲ್ಲಿ ನಿರೂಪಕ ಕಥೆಯ ಕ್ರಿಯಾತ್ಮಕ ಭಾಗವಾಗಿದ್ದುಕೊಂಡು ಉಳಿದ ಪಾತ್ರಗಳಿಗಿಂತ ತುಸು ಹೆಚ್ಚು-ಕಡಿಮೆ ಸಮಾನತೆಯನ್ನು ಸ್ಥಾಪಿಸಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ಕತೆಯ ಜಗತ್ತನ್ನು ನಿಯಂತ್ರಿಸುವ ಮುಖ್ಯ ಹೊಣೆಗಾರಿಕೆಯೂ ಅವನದ್ದೇ ಆಗಿರುತ್ತದೆ. ಹಾಗೂ ಕತೆಯ ಹೊರಗೆ ಇದ್ದು ನಿರೂಪಣೆ ಮಾಡುವ ವಿಧಾನವನ್ನು ಕಾಣಬಹುದು. ಇಲ್ಲಿ ನಿರೂಪಕನಿಗೂ ಕಥಾ ಜಗತ್ತಿಗೂ ಯಾವುದೇ ಸಂಬಂಧವಿರುವುದಿಲ್ಲ. ಕತೆಯ ಚೌಕಟ್ಟಿನ ಹೊರಗಿರುವ ಆತ ಕಥೆಯನ್ನು ನಿರೂಪಿಸುವ ಕೆಲಸವಷ್ಟೇ ಆತನದು. ಕತೆಯ ಆಕೃತಿಯನ್ನು ಕಥೆಗಾರನ ಉದ್ದೇಶ ಸಾಧಿಸುವಂತೆ ರೂಪಿಸುವ ಈ ಬಗೆಯ ಶೈಲಿಯನ್ನೂ ಕುವೆಂಪು ಅವರಲ್ಲಿ ಕಾಣಬಹುದು. ಸಾಮಾನ್ಯವಾಗಿ ನಿರೂಪಕ ತನ್ನ ನಿರೂಪಣೆಯ ಸಂದರ್ಭದಲ್ಲಿ ಮಾತ್ರ ಕುವೆಂಪು ಅವರ ಶಿಷ್ಟ-ಗ್ರಂಥಸ್ಥ ಭಾಷೆಯನ್ನು ಬಳಸುತ್ತಾರೆ. ಉಳಿದಂತೆ ಆಯಾ ಪಾತ್ರಕ್ಕೆ ಅನುಗುಣವಾಗಿ ಸೂಕ್ತವಾದ ಭಾಷೆಯನ್ನು ಬಳಕೆ ಮಾಡುವುದು ಇವರ ಭಾಷಿಕ ವೈಶಿಷ್ಟ್ಯವಾಗಿದೆ. ಈ ಹಿನ್ನೆಲೆಯಲ್ಲಿ ಶಿವರಾಮು ಕಾಡನಕುಪ್ಪೆ ಹೇಳಿರುವ ಮಾತುಗಳು ಗಮನಾರ್ಹವಾಗಿದೆ.

“ಕಾದಂಬರಿಯಲ್ಲಿ ನಿರೂಪಕನ ಭಾಷೆ ಮಿಗಿಲಾದ ಸ್ಥಾನ ಪಡೆಯುತ್ತದೆ. ಈ ಭಾಷೆ ಅವನ ದೃಷ್ಟಿಕೋನವನ್ನು ನಿರ್ಧರಿಸುವುದರ ಜೊತೆಗೆ ವಸ್ತುವನ್ನು ಅತ್ಯಂತ ಅಚ್ಚುಕಟ್ಟಾಗಿ ನಿರ್ವಹಿಸುವ, ಸಕಲ ಸಸ್ಯ ಪ್ರಾಣಿ ಮಾನವ ಪ್ರಪಂಚದ ಅಂತರಂಗ ಬಹಿರಂಗ ವರ್ಣನೆಗಳಲ್ಲಿ ಕಲಾವಂತಿಕೆಯ ಮುಗಿಲು ಮುಟ್ಟುತ್ತದೆ. ಮಲೆನಾಡ ಬದುಕಿನ ಯಾವ ಪುಟ್ಟ ವಿವರವೂ ಬಿಟ್ಟು ಹೋಗದ ಹಾಗೆ ದೃಶ್ಯ ದೃಶ್ಯವಾಗಿ ಓದುಗರ ಮುಂದೆ ತೆರೆದಿಡುತ್ತದೆ”. (ಚಕ್ಕರೆ ಶಿವಶಂಕರ್ (ಸಂ.), ಸಹ್ಯಾದ್ರಿಯ ಸೂರ್ಯ, ೨೦೦೪, ಪುಟ ೨೨೨)

ಹೀಗೆ ಕುವೆಂಪು ಅವರ ಕತೆ-ಕಾದಂಬರಿಗಳಲ್ಲಿ ನಿರೂಪಕ ಅನಿವಾರ್ಯವಾಗಿ ಕಾದಂಬರಿಕಾರನೇ ಆಗಿರುವುದರಿಂದ ಮತ್ತು ಅವನ ಭಾಷೆ ಸುಶಿಕ್ಷಿತ ಭಾಷೆ ಆಗಿರುವುದರಿಂದ ಕಾದಂಬರಿಯ ನಿರೂಪಣೆ ಎಲ್ಲ ಜನರಿಗೆ ಅರ್ಥವಾಗುವ ಸಾಮಾನ್ಯ ಭಾಷೆಯಲ್ಲೇ ಆಗಬೇಕಾಗುತ್ತದೆ. ನಿರೂಪಕ ಈ ರೀತಿ ಸಾಮಾನ್ಯ ಭಾಷೆಯಲ್ಲಿ ಕಥೆಯನ್ನು ನಿರೂಪಣೆ ಮಾಡಿದಾಗ ಬರವಣಿಗೆಗೆ ವಸ್ತುನಿಷ್ಠತೆ ಪ್ರಾಪ್ತವಾಗುತ್ತದೆ. ಆದರೆ ಕಾದಂಬರಿಕಾರನ ಭಾಷೆ ಕಾದಂಬರಿ ಪಾತ್ರಗಳ ಭಾಷೆ ಎರಡೂ ಒಂದೇ ಆಗಬೇಕಾಗಿಲ್ಲ. ಆಯಾ ಪಾತ್ರಗಳ ಪರಿಸರ ಪ್ರಪಂಚದ ಹಿನ್ನಲೆಯಲ್ಲಿ ಆಯಾ ಪಾತ್ರದ ಭಾಷೆಯನ್ನು ಕೃತಿಯಲ್ಲಿ ತರಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕುವೆಂಪು ಅವರು ಕತೆ-ಕಾದಂಬರಿಗಳಲ್ಲಿ ಪ್ರಮುಖವಾಗಿ ಎರಡು ಭಾಷೆಗಳನ್ನು ಬಳಕೆ ಮಾಡುತ್ತಾರೆ. ಒಂದು ಈ ಮೊದಲೇ ಚರ್ಚಿಸಿದಂತೆ ನಿರೂಪಕನ ಭಾಷೆ. ಸುಸಂಸ್ಕೃತ ಭಾಷೆ ಮತ್ತೊಂದು ಮಲೆನಾಡಿನ ಪ್ರಾದೇಶಿಕತೆಯನ್ನೊಳಗೊಂಡ ಆಡುಭಾಷೆ. ಒಂದೇ ಭೌಗೋಳಿಕ ಪರಿಸರದಲ್ಲಿ ವಾಸಮಾಡುವ ವಿವಿಧ ಜನ ತಮ್ಮ ಪ್ರಜ್ಞೆ ಮತ್ತು ವರ್ಗದ ಆಧಾರದ ಮೇಲೆ ಭಿನ್ನವಾದ ಗೌಪ್ಯತೆ ರೂಢಿಸಿಕೊಂಡಿರುತ್ತಾರೆ ಎಂಬುದನ್ನು ತಮ್ಮ ಕೃತಿಗಳಲ್ಲಿ ಗುರುತಿಸುತ್ತಾರೆ.

‘ಕಾನೂರು ಹೆಗ್ಗಡಿತಿ’ ಕಾದಂಬರಿಯಲ್ಲಿ ಹೂವಯ್ಯ-ರಾಮಯ್ಯ ಇಬ್ಬರೂ ಗದ್ದೆಯಲ್ಲಿ ನೇಗಿಲು ಹೂಡಿ ವ್ಯವಸಾಯ ಮಾಡಲು ಹೋಗುವ ಪ್ರಸಂಗದಲ್ಲಿ ನೇಗಿಲು ಮುರಿದು ಹೋಗಿ, ಹೂವಯ್ಯ ಹಾಗೂ ರಾಮಯ್ಯ ಪೇಚಾಡುವ ಸಂದರ್ಭದಲ್ಲಿ ಆಳುಗಳಾದ ಬೈರ ಸಿದ್ಧರು ಭಯಭೀತರಾಗಿ ಮಾತನಾಡುವ ಸನ್ನಿವೇಶವನ್ನು ಗಮನಿಸಬೇಕು.

ಭೈರ ಭಯೋದ್ವಿಗ್ನ ಧ್ವನಿಯಿಂದ, "ನಾ ಹೇಳ್ದೆ ಆಗ್ಲೆ, ಬ್ಯಾಡ ಎತ್ತು ಬೆದರ್ತವೆ ಅಂತಾ.. ಎಂದನು. ಸಿದ್ಧ, 'ಬೆಳಗಾತ ಎದ್ದವ್ನೇ ಯಾರ ಮುಖಾ ನೋಡಿದ್ನೋ ಏನೋ ನನ್ನ ಗಿರಚಾರ.' ಎಂದು ಮುರಿದ ನೇಗಿಲನ್ನು ನೆಲಕ್ಕೆಸೆದು, ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತನು. 'ಇಲ್ಲಿಗೆ ಬರುವಾಗ್ಲೆ ದಾರೀಲಿ ಕಾಗಿ ಅಡ್ಡ ಬಂತು. ಏನೋ ಆಗ್ತದೆ ಅಂತಾನೆ ಬಂದೆ . ಆಗೇ ಬಿಡ್ತು ...

ನಾ ಕಲ್ಲು ಎಡಗ್ದಾಗ್ಲೇ ಮನ್ಸೀಗೆ ಹೇಳಿತು. ಇವತ್ತು ನನ್ನ ಗಿರಚಾರ ನೆಟ್ಟಗಿಲ್ಲ ಅಂತಾ". (ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೧೮೫)

ಮಲೆನಾಡಿನ ಪ್ರಾದೇಶಿಕತೆ ಪೂರಕವಾದ ನೆಲೆಯಲ್ಲಿ ಆಡುಭಾಷೆಯಲ್ಲಿ ಸಶಕ್ತವಾಗಿ ಪ್ರಕಟವಾಗಿದೆ. ಶಿಷ್ಟಭಾಷೆಯನ್ನು ಎಷ್ಟು ಪರಿಣಾಮಕಾರಿ ಬಳಸಬಲ್ಲರೋ ಅಷ್ಟೇ ಪ್ರಬುದ್ಧವಾಗಿ, ನೈಜವಾಗಿ ಶ್ರೀಸಾಮಾನ್ಯನ ಭಾಷೆಯನ್ನು ಬಳಸುತ್ತಾರೆ ಎಂಬುದಕ್ಕೆ ಸಾಕ್ಷಿಯಾಗಿದೆ. 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಬರುವ ತಿಮ್ಮಿ-ಗುತ್ತಿ ಅಲ್ಲಿನ ಪ್ರಕೃತಿಗೆ ಸಹಜವಾದ ಭಾಷೆಯನ್ನು ವ್ಯಕ್ತಪಡಿಸುವುದದನ್ನು ಕಾಣಬಹುದು.

"ಇಲ್ಲಿ ನೋಡ್ಡೇನು, ಏನಿದೆ ಅಂತಾ ? ಎಂದು ತನ್ನ ಎಡದ ತೋಳನ್ನು ಚಾಚಿ ಅದಕ್ಕೆ ಕಟ್ಟಿದ್ದ ತಾಯಿತ ತೋರಿಸುತ್ತಾ ಹಂಗಿಸಿದನು. 'ಕಣ್ಣಾ ಪಂಡಿತರು ಕೊಟ್ಟಿದ್ದು ಕಣೇ, ಅಂತ್ರ ... ಎಂಥಾ ಒಲ್ಲೆ ಅನ್ನೊ ಹೆಣ್ಣನ್ನಾದ್ರೂ ಒಲಿಯೋ ಹಾಂಗೆ ಮಾಡ್ತದಂತೆ. ಅಲ್ಲದಿದ್ರೆ ನನ್ನ ಸಂಗಡ ನೀ ಇಷ್ಟು ಸುಲಭಕ್ಕೆ ಓಡಿ ಬರ್ತಿದ್ಯಾ ? ಚುಟಿಗೆ ಹಾಕಿ ಕರದ್ರೆ ನಾಯಿ ಬರಹಂಗೆ ?'

'ನಿಂಗೊಬ್ಬನಿಗೆ ಅಂತಾ ಮಾಡಿಯೇನೂ ? ಅವನಿಗೂ ಕೊಟ್ಟಾರೆ ಅವರು ?'

'ಯಾರಿಗೇ! ಬೆಚ್ಚಿ ಕೇಳಿದನು'. ಸ್ವಲ್ಪ ಅಪ್ರತಿಭನಾದಂತೆ. 'ಯಾರಿಗೆ ? ಅವನಿಗೇ ಆ ಬಚ್ಚಗೆ' ಗೆದ್ದ ದನಿಯಲ್ಲಿ ಹೇಳಿದಳು, ಸೋತವನಿಗೆಂಬಂತೆ. 'ಅವನಿಗೂ ಹೀಂಗೇ ಅಂತ್ರಾ ಕೊಟ್ಟರಾ ? ಕಣ್ಣಾಪಂಡಿತ್ರು ?' ಬೆಪ್ಪಾಗಿತ್ತು ಗುತ್ತಿಯ ದನಿ. 'ಹೂ ಮತ್ತೆ ! ನಿನ್ನಾಂಗೇ ಅವನೂ ತೋರಿಸಿದ್ದ ನಂಗೆ !" (ಕುವೆಂಪು., ಮಲೆಗಳಲ್ಲಿ ಮದುಮಗಳು, ೧೯೯೮, ಪುಟ ೨೧೮)

ನಾಗರಿಕತೆಯ ಸೋಂಕಿಲ್ಲದ, ಶುದ್ಧ ಪ್ರಾದೇಶಿಕ ಹಿನ್ನಲೆಯಲ್ಲಿ ವ್ಯಕ್ತಗೊಳಿಸುವ ಈ ಸಂಭಾಷಣೆ ಗುತ್ತಿ-ತಿಮ್ಮಿಯರ ಮುಗ್ದತೆಯನ್ನು ಪ್ರಕಟಪಡಿಸುತ್ತದೆ. ಇವರ ಮುಗ್ಧತೆ ಕಪಟವಿಲ್ಲದ ಮನಸ್ಸು, ನಿಷ್ಕಾಮ ಪ್ರೇಮ

ಮಲೆನಾಡಿನಷ್ಟೇ ದಟ್ಟವಾದುದು ಎಂಬ ಭಾವ ಭಾಷೆಯ ಮೂಲಕ ವ್ಯಕ್ತವಾಗಿದೆ. ಭಾಷೆಯ ದುಡಿಮೆ ಈ ಪಾತ್ರಗಳ ಅಂತರಂಗ ಚಿತ್ರವನ್ನು ಎತ್ತಿ ಹಿಡಿಯುತ್ತದೆ. ಹಾಗೆಯೇ ಗುತ್ತಿ-ತಿಮ್ಮಿಯರಿಗಿಂತ ಸಾಮಾಜಿಕವಾಗಿ ಮೇಲಿನ ಸ್ತರದಲ್ಲಿರುವ ಐತ-ಪೀಂಚಲು ಅವರ ಭಾಷೆ ಅಲ್ಲದೆ, ಅವರಿಗಿಂತ ಮೇಲನ ಸ್ತರದಲ್ಲಿ ಚಿನ್ನಮ್ಮ-ಮುಕುಂದಯ್ಯರವರ ಭಾಷೆಯೂ ಭಿನ್ನಸ್ವರದಲ್ಲಿ ಕೆಲಸ ಮಾಡುತ್ತದೆ.

"ಎಲ್ಲಿ ಹೋಗಿದ್ದಿ ಮಾರಾಯ್ತಿ ಕಾದು ಕಾದು ಸಾಕಾಯ್ತು. ಎಂಬ ಪ್ರಶ್ನೆ ಹೊರಹೊಮ್ಮಿತು. ಛದ್ಮವೇಷವಾಂತ ಸ್ವಾಗತ ಗೀತೆಯಂತೆ.

ಅವಳ ಉಡುಗೆ, ಭಂಗಿ, ಚಲನವಲನ, ಹಾವಭಾವ, ಋಜತೆ, ಮುಗ್ಧತೆ - ಒಂದೊಂದು ಚೀಂಕ್ರ ಒಡ್ಡಿದ್ದ ಸಂಶಯ ಪಿಶಾಚಕ್ಕೆ ಬೆಂಬಡಿಗೆಯಾಗಿ, ಐತನ ಮನಸ್ಸು ಪ್ರಪುಲ್ಲವಾಯಿತು. ತಾನು ತಂದ ಪಾತ್ರೆ ಮತ್ತು ಬಟ್ಟೆಯ ಗಂಟನ್ನು ಒಂದೆಡೆ ಇಡುತ್ತಾ ಅವಳು 'ಅದೆಲ್ಲ ಅಮ್ಯಾಲೆ ಹೇಳ್ತಿನಿ. ಈಗ ಹೊತ್ತಾಯ್ತು, ಬಾ ಉಣ್ಣಾಕೆ' ಎಂದು ಬೇಗ ಬೇಗನೆ ಬೆಳಗ್ಗೆ ತೋಟದಿಂದ ತಂದಿದ್ದ ಹೊಂಬಾಳೆಯನ್ನು ಒಂದು ತೊಳೆದ ಹಾಳೆಯನ್ನು ಹಾಕಿದಳು.

'ಎಲ್ಲಿತೇ ಈ ಹೊಂಬಾಳೆ?'

'ಹೊತ್ತಾರೆ ತ್ವಾಟದಾಗೆ ಸಿಕ್ಕಿತ್ತಲ್ಲಾ ಅದೇ'

'ಮಜ್ಜಾನ ಉಂಡಿರಲಿಲ್ಲೇನೇ ಅದರಲ್ಲಿ ?'

'ಅದನ್ನೇ ತೊಳೆದು, ಇಟ್ಟಿದ್ದೆ, ಎಷ್ಟು ಚಂದ ಅದೆ ಅಲ್ಲಾ ?

'ಹೊಸ ಸೀರೆ ಎಲ್ಲಿತ್ತೇ ? ಯಾರು ಕೊಟ್ಟಿದ್ದೇ ?"

(ಕುವೆಂಪು., ಕಾನೂರು ಹೆಗ್ಗಡಿತಿ, ೧೯೯೮, ಪುಟ ೨೦೩)

ಹೀಗೆ ಕುವೆಂಪು ಕಥೆ-ಕಾದಂಬರಿಗಳು ಕನ್ನಡ ಕಥನಕ್ಕೆ ಒಂದು ವಿಶಿಷ್ಟವಾದ ಭಾಷಾ ವೈವಿಧ್ಯವನ್ನು ಪರಿಚಯಿಸುತ್ತದೆ. ನಿರೂಪಣಾ ಭಾಗಗಳೆಲ್ಲವೂ ಶಿಷ್ಟ ಗ್ರಂಥಸ್ಥ ಭಾಷೆಯಲ್ಲವೆ. ಆದರೆ ಕಾದಂಬರಿಕಾರ ಕಥನದೊಳಗೆ ತಾನಾಗಿ ಮಧ್ಯಪ್ರವೇಶ ಆಗುವ ಸಂದರ್ಭದಲ್ಲೆಲ್ಲಾ ಭಾಷೆಯ ಬದಲಾವಣೆಯನ್ನು ಗಮನಿಸಬಹುದು. ಆಲೋಚನಾ ಕ್ರಮದಲ್ಲಿ ಉನ್ನತವಾದುದ್ದನ್ನು ಹೇಳುವಾಗ ಕುವೆಂಪು ಬಳಸುವ ಭಾಷೆ ಗ್ರಾಂಥಿಕವಾಗಿ, ಸಂಸ್ಕೃತ ಭೂಯಿಷ್ಟವಾಗಿ

ಬದಲಾಗುತ್ತದೆ. ಸಾಮಾನ್ಯರ ಜೀವನ ಗ್ರಹಿಸಬೇಕಾದಾಗ ಸಾಮಾನ್ಯ ಭಾಷೆ ಬಳಕೆಯಾಗುತ್ತದೆ.

೧೯ನೇ ಶತಮಾನದ ಕೊನೆಯ ಕಾಲಘಟ್ಟದ ಮಲೆನಾಡಿನ ಬದುಕನ್ನು ರೂಪಿಸುತ್ತಾ ಹೊರಡುವ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಸಂಸ್ಕೃತದ ಭಾರದಿಂದ ಎಲ್ಲೂ ಸೊರಗುವುದಿಲ್ಲ. ಐತ, ಪೀಂಚಲು, ಗುತ್ತಿ, ತಿಮ್ಮಿ, ಮುಕುಂದಯ್ಯ, ಚಿನ್ನಮ್ಮ ಇವರ ಭಾಷೆಗಳಲ್ಲೇ ಕಾದಂಬರಿ ಮೈದಾಳಿರುವುದನ್ನು ಗಮನಿಸಬಹುದು. ಕಾದಂಬರಿ ಸಂಸ್ಕೃತಕ್ಕಿಂತ ಸ್ಥಳೀಯ ಭಾಷೆಯಿಂದಲೇ ಹೆಚ್ಚು ಶ್ರೀಮಂತವಾಗಿದೆ. ಇಲ್ಲಿ ಬರುವಂತಹ ಪ್ರಕೃತಿ ವರ್ಣನೆಯಲ್ಲಿ ಆದಷ್ಟು ಸ್ಥಳೀಯವಾದ ಪದಗಳನ್ನು ಕುವೆಂಪು ಬಳಸುತ್ತಾರೆ. 'ದನಗೊಳು ಮಳೆ' ಎಂಬ ಅನೇಕ ಪದಗಳು ಬಹಳ ಸ್ಥಳೀಯವೆನ್ನಿಸಿ ಶ್ರೀಮಂತಿಕೆ ಸ್ಪರ್ಶ ನೀಡಿವೆ.

ರಹಮತ್ ತರೀಕೆರೆ ಅವರು ಹೇಳುವಂತೆ, ಕುವೆಂಪು ಅವರಲ್ಲಿ ಸಂಸ್ಕೃತ ಮತ್ತು ಕನ್ನಡದ ನಡುವೆ ಇರುವ ಹೊರಳಿಕೆಯ ಪರಿಯೇ ಅದ್ಭುತ. ಅವರ 'ಶ್ರೀ ಸ್ವಾತಂತ್ರ್ಯೋದಯ ಮಹಾ ಪ್ರಗಾಥ'ದಲ್ಲಿ ದೇಶ ಮಾತೆಯ ವರ್ಣನೆ ಬರುತ್ತದೆ. ಅದು 'ಭೂವ್ಯೋಮ ಸ್ವಲೋಕ ಲೋಕಾಂತರ ವಿಹಾರೆ. ನಿಖಿಲ ಲೋಕ ಕವೀಂದ್ರಗಣ ಚಕಿಚರಿತಹಾರೆ. ಸರ್ವ ಭಾಷಾ ಸರೋವಾಙ್ಮಯ ರಸಶರೀರೆ' ಅಂತೆಲ್ಲ ಸಂಸ್ಕೃತ ಭೂಯಿಷ್ಠವಾಗಿ ಆರಂಭವಾಗುತ್ತದೆ. ಆದರೆ ಮುಂದಿನ ಸಾಲಲ್ಲೆ ಚಕ್ಕನೆ 'ಕಯ್ ಮುಗಿದು ಬೇಡುವೆನು ಏಳ್, ತಾಯೆ ಏ : ಕಾಲ್ಗೆರಗಿ ಬೇಡುವೆನು ಏಳ್ !' ಎಂದು ಅಚ್ಚಗನ್ನಡಕ್ಕೆ ಹೊರಳಿಬಿಡುತ್ತದೆ. ಕುವೆಂಪು ಗದ್ಯದಲ್ಲಿ ಸಂಸ್ಕೃತವು ವ್ಯಂಗ್ಯ, ವಿಡಂಬನೆ, ಗೇಲಿ ಮಾಡುವಾಗ ಕಾಣಿಸಿಕೊಳ್ಳುತ್ತದೆ. ಹೆಗ್ಗಡಿತಿಯಲ್ಲಿ ನಿಂಗ ಮಂತ್ರಿಸಿದ ತೆಂಗಿನಕಾಯಿ ಹಿಡ್ಕೊಂದು ಪ್ರಮಾಣ ಮಾಡಿಸೋಕೆ ಬರುವ ವರ್ಣನೆ ಸಂಸ್ಕೃತಮಯವಾಗಿದೆ. ಹುಲಿಕಲ್ಲು ನೆತ್ತಿಯ ನಿಸರ್ಗದ ವರ್ಣನೆಯಲ್ಲಿ ಬರುತ್ತದೆ. ಆಧ್ಯಾತ್ಮಿಕ ವಿಚಾರ ಹೇಳುವಾಗ ಬರುತ್ತದೆ. ರತಿಕ್ರೀಡೆಯ ವರ್ಣನೆ ಸಂದರ್ಭವು ಸಂಸ್ಕೃತಮಯವಾಗಿದೆ.

'ತಾನೂ ಮೊದಲೇ ಮಸೆದು ಹರಿತಮಾಡಿ ಇಟ್ಟಿದ್ದ ಕೆಲಸದ ಕತ್ತಿಯನ್ನು ಸೊಂಟದ ಒಡ್ಯಾಣಕ್ಕೆ ಸಿಕ್ಕಿಸಿಕೊಂಡು, ಐತ ಹತ್ತಿರದ ಒಳದಾರಿಯಿಂದ ತೋಟದ ಮೇಲೆ ಹಾದು ವಾಟೆಹಿಂಡಲನ್ನು ತಲುಪಿ, ಅಲ್ಲಿಗೆ ತುಸುವೆ ದೂರದಲ್ಲಿದ್ದು ಎಲೆ ದಟ್ಟಯಿಸಿ ಬೆಳೆದಿದ್ದ ಒಂದು ಹಲಸಿನ ಮರವನ್ನೇರಿ ಅಡಗಿ ಕುಳಿತು ಕಾದನು'.

ಎಂಬ ಧೀರ್ಘವಾಕ್ಯದಲ್ಲಿ 'ದೂರ'ಎಂಬ ಶಬ್ದವನ್ನು ಬಿಟ್ಟರೆ ಉಳಿದೆಲ್ಲವೂ ಅಚ್ಚಗನ್ನಡ ಪದಗಳು ಎಂಬ ಅಂಶವನ್ನು ರಹಮತ್ ತರೀಕೆರೆ ಅವರು ಗುರ್ತಿಸಿರುವುದನ್ನು ಕಂಡಾಗ ಕುವೆಂಪು ಅವರ ಭಾಷಾ ಬಳಕೆಯ ವೈವಿಧ್ಯವನ್ನು ಮನಗಾಣಬಹುದು.

ಅಲ್ಲದೇ, ಮದುಮಗಳು ಏಳನೂರು ಪುಟಗಳಷ್ಟು ವಿಸ್ತಾರಕ್ಕೆ ಹಬ್ಬಿರುವ ಮಹಾ ಕಾದಂಬರಿ, ಸ್ಥಳೀಯ ಭಾಷೆಯಲ್ಲೇ ರಚನೆ ಮಾಡಿದ್ದರೆ, ಒಂದು ಬಗೆಯ ಏಕತಾನತೆಯಿಂದ ಕಾದಂಬರಿ ಸೊರಗಿ ಹೋಗುತ್ತಿತ್ತು. ಈ ಏಕಾತಾನತೆಯನ್ನು ಹೊಡೆದೊಡಿಸುವ ಸಲುವಾಗಿ ಸಂಸ್ಕೃತ ಮಿಶ್ರಣ ಶೈಲಿಯ ಭಾವ ವಿಶೇಷವನ್ನು ಉಂಟುಮಾಡಿರಬಹುದು ಎಂಬ ತರೀಕೆರೆಯವರ ಅಭಿಪ್ರಾಯವನ್ನು ನಿಜಕ್ಕೂ ಒಪ್ಪಬಹುದಾಗಿದೆ. ಒಂದು ಭಾಷೆಯನ್ನಾಡುವ ಜನಾಂಗದಲ್ಲಿಯೇ ನಾಲ್ಕಾರು ಉಪಭಾಷೆಗಳನ್ನು ನಾವು ಕಾಣುತ್ತೇವೆ. ಈ ಉಪಭಾಷೆಯು ಕೂಡ ಪ್ರಾದೇಶಿಕತೆಯ ಹಿನ್ನಲೆಯಲ್ಲಿ ಕಾದಂಬರಿಯಲ್ಲಿ ಮೂಡಿಬರುತ್ತದೆ.

ಒಂದು ಬದುಕನ್ನು ಆ ಬದುಕಿನ ಭಾಷೆಯಲ್ಲೇ ಅಭಿವ್ಯಕ್ತಿಸಿದಾಗ ಬದುಕಿನ ಚಿತ್ರಣದ ಯಥಾರ್ಥತೆ ರೂಪುಗೊಳ್ಳುತ್ತದೆ ಹಾಗೂ ತಾಜಾತನ ಉಳಿಯುತ್ತದೆ ಎಂಬ ವಾದಗಳುಂಟು ಇದೇ ಹಿನ್ನಲೆಯಲ್ಲಿ ಅನೇಕ ಕಾದಂಬರಿಗಳು ಮೂಡಿಬಂದಿವೆ. ಉದಾಹರಣೆಗೆ ಮಿರ್ಜಿ ಅಣ್ಣಾರಾಯರ 'ನಿಸರ್ಗ' ಅತಿಯಾದ ಗ್ರಾಮ್ಯ ಭಾಷೆಯ ಬಳಕೆಯಿಂದಲೇ ಈ ಕಾದಂಬರಿ ಸೋತಿತು. ಚೆನ್ನಣ್ಣ ವಾಲೀಕಾರ ಅವರ 'ಬೆಳ್ಯ'ಕಾದಂಬರಿ ತನ್ನ ಪ್ರಾದೇಶಿಕ ಉಪಭಾಷೆಯ ತೊಡಕಿನಿಂದ ಜನಪ್ರಿಯವಾಗಲೇ ಇಲ್ಲ. ಆದರೆ ಕುವೆಂಪು ಈ ತೊಡಕಿನಿಂದ ಹೊರಬರಲು ಸಾಧ್ಯವಾಗುವಂತೆ ಭಾಷಾವೈವಿಧ್ಯವನ್ನು ಬಳಕೆ ಮಾಡಿದ್ದಾರೆ. ಇದನ್ನು ಅವರ ಕಥೆ-ಕಾದಂಬರಿಗಳನ್ನು ನೋಡಿದಾಗ ತಿಳಿದುಬರುತ್ತದೆ.

ಮಲೆನಾಡ ಬದುಕಿನಲ್ಲಿ ವಿವಿಧ ಸ್ತರಗಳಲ್ಲಿ ಇರುವ ಎಲ್ಲಾ ಬಗೆಯ ಭಾಷೆಯನ್ನು ಕುವೆಂಪು ದುಡಿಸಿಕೊಳ್ಳುವುದಿಂದ ಭಾಷೆಗೊಂದು ವೈವಿಧ್ಯತೆ ಬಂದಿರುವಂತೆಯೇ, ಅಲ್ಲಿನ ಬದುಕಿನ ವೈವಿಧ್ಯಮಯವೂ ಚಿತ್ರಣಗೊಂಡಿದೆ. ದುರುಸು, ಚಾಪು, ಆಯಾರ, ಸಾಸ್ವಿತ, ಅಂವ, ಭಾಂವಿ, ಔಂಸ್ತಿ, ಬಿರಾಂತು, ತರಾಂತ್ಯ, ಪರಾಯ, ಬಿರಾಂಬ್ರು, ಗಿರಚಾರ, ಸನ್ನೇಸಿ, ದ್ವೌದ್ರು, ಮೆದುಳ್ಳಿಗ ಇಂತಹ ಸಹಸ್ರಾರು ಪದ ಪ್ರಭೇದಗಳು ದೊರೆಯುತ್ತವೆ. ಹೆಂಡತಿ, ಕಲಬಿ, ದೊಡ್ಡುಕೂಣಿ, ಸಬೆ, ಮರಸು, ಬಳ್ಳೇ, ಇಂಬಳ, ಗೊತ್ತುಕೊರು, ಹಳುನುಗ್ಗು, ಗಿರ ಹಿಡಿ ಮುಂತಾದ

ಪ್ರಾದೇಶಿಕ ಪದಪುಂಜಗಳು ಪುಟಪುಟಗಳಲ್ಲೂ ಬರುತ್ತವೆ. ಮೀನು ನೀರು ಕಚ್ಚುವುದು ಮತ್ತು ಕೊಟ್ಟಿಗೆಗೆ ಹುಲಿ ಬಿದ್ದಿರಬೇಕು ಎಂಬ ನುಡಿಗಟ್ಟುಗಳು ತಮ್ಮೊಳಗೆ ಅಡಗಿಸಿಕೊಂಡಿರುವ ಪ್ರಾದೇಶಿಕ ಅರ್ಥವಂತಿಕೆ ವ್ಯಾಖ್ಯಾನ್ಯ ಬಯಸುವಂತಹದ್ದು.

ತೇಜಸ್ವಿ ಅವರ ಕಥನಗಳೂ ಸಹ ಕುವೆಂಪು ಅವರ ಕಥನಗಳ ಭಾಷಾ ವೈವಿಧ್ಯವನ್ನು ಒಳಗೊಂಡಿದೆ. ಕುವೆಂಪು ಅವರಂತೆ ತೇಜಸ್ವಿ ಕೂಡ ಶಿಷ್ಟ ಗ್ರಂಥಸ್ಥ ಭಾಷೆಯನ್ನು ಬಳಕೆ ಮಾಡಿದ್ದರೂ ಅವರ ಜನಪ್ರಿಯತೆ ಇರುವುದು ಲಘು ಹಾಸ್ಯ ಧಾಟಿಯ ಭಾಷೆ ಬಳಕೆಯಲ್ಲಿ ಹಾಸ್ಯ ಮತ್ತು ವಿನೋದ ತೇಜಸ್ವಿಯವರ ಬಹುಮುಖ್ಯ ಹಾಗೂ ಗಂಭೀರವಾದ ಅಭಿವ್ಯಕ್ತಿಗಳು ಹಾಸ್ಯ ಶೈಲಿಯಲ್ಲಿ ಬರೆಯುತ್ತಾ, ರೇಗುತ್ತಾ, ತಡವರಿಸುತ್ತಾ ಮನುಷ್ಯ ಸಂಬಂಧಗಳನ್ನು ಜೀವನ ವಿಧಾನವನ್ನೇ ಚಿತ್ರಿಸುವಲ್ಲಿ ತೇಜಸ್ವಿ ನಿಪುಣರು.

'ಕಿರಗೂರಿನ ಗಯ್ಯಾಳಿಗಳು' ಕೃತಿಯಲ್ಲಿ ಹಾಸ್ಯ, ವಿಡಂಬನೆ, ನವಿರಾಗಿ ಮೂಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದು.

'ತುತ್ ಆ ದಾನಮ್ಮನ ಗಾಳಿ ಎಲ್ಲಿಗೂ ತಾಗಿದೆ ಕಣೋ, ಗಯ್ಯಾಳಿ ಮುಂಡೇರ ಕೇರಿ ಇದು' ಎಂದು ಉಗಿಸಿಕೊಂಡ ಮಾರನನ್ನ ಸಾಂತ್ವನಗೊಳಿಸಲು ಹೇಳಿದ. "ಬಲೇ ಗಾಂಚಲಿ ಮುಂಡೇರು, ಮೊಲೆ ಬಂದೋರಿಗೆ ನೆಲಾ ಕಾಣದಿಲ್ಲಂತೆ. ಸೊಕ್ಕಿ ನೆಣಾಉಕ್ತದೆ ಅವರ ಮೈಯಾಗೆ, ಒಬ್ಬೊಬ್ರು ಹತ್ತು ಹತ್ತು ಹಡಿಯೋ ಹಂಗೆ ಮಾಡಬೇಕು. ಪುರುಸೊತ್ತೇ ಕೊಡಬಾರದ್ದು ಹಂಗಿದ್ರೆ ನೋಡಪ್ಪಾ, ಈ ಹಾಳ್ಮುಂಡೇರನ್ನ ಹದ್‌ಬಸ್ತಿಗೆ ತರಬೌದು. ಇಲ್ದಿದ್ರೆ ಊರ್ನೇ ತೆಗೀತಾರೆ ಇವ್ರು ಏನಂತೀಯ? ಎಂದು ಮಾರ ಸಿದ್ದನಿಗೆ ಪ್ರಶ್ನೆ ಹಾಕುತ್ತಾ ತನ್ನ ಪರಾಕ್ರಮ ತೋರಿಸಿದ".(ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕಿರಗೂರಿನ ಗಯ್ಯಾಳಿಗಳು, ೨೦೦೯, ಪುಟ ೧೫)

ಈ ವಾಕ್ಯದಲ್ಲಿ ಬಳಕೆಯಾಗಿರುವ ಭಾಷೆ ತೀರ ಸರಳವಾದ ಆಡು ಭಾಷೆಯಾಗಿದ್ದು ಅಶ್ಲೀಲವೆನ್ನಿಸದೆ 'ಹಾಸ್ಯ'ದ ಲೇಪವನ್ನು ಪಡೆದುಕೊಂಡಿದ್ದು ಕಥೆಗೆ ಪೂರಕವೆನಿಸುತ್ತದೆ.

'ಹಲ್ಲಂಡೆ ಮುಂಡೇಮಕ್ಳನ್ನ ಕರಕೊಂಡು ಬಂದು ಊರು ಹಾಳ್ಮಾಡಕ್ಕೆ ಮೂರು ದಿನದಿಂದ ಹುನ್ನಾರ ಮಾಡ್ತಿದ್ದೀರಾ ? ಥೂ ನಿಮ್ಮ ಜನ್ಮಕ್ಕೆ ಬೆಂಕಿ ಹಾಕ' ಎಂಬ ದಾನಮ್ಮನ ಬೈಗಳದ ಭಾಷೆ ಸ್ಪಷ್ಟವಾದ ಗ್ರಾಮ್ಯರೂಪವಾಗಿದ್ದು ಕಥೆಗೆ

ಅನುರೂಪತೆಯನ್ನು ತಂದುಕೊಟ್ಟಿದೆ. ಅಲ್ಲದೇ, ಇಲ್ಲಿ ಬರುವ ಬೈಗುಳಗಳು, ನುಡಿಗಟ್ಟುಗಳು, ಗಾದೆಗಳು ವಾಸ್ತವದ ಗ್ರಾಮ ಬದುಕನ್ನು ನೈಜವಾಗಿ ಮೂಡುವಂತೆ ಪೂರಕವಾಗಿ ಬಂದಿವೆ. ಮಾಯಾಲೋಕದ 'ಭಾಷೆ' ಸಹ ಪ್ರಾದೇಶಿಕ ಸಹಜತೆಯಿಂದ ಕೂಡಿದೆ. ಆ ಭಾಷೆಯ ಸಹಜ ದೇಸಿ ಸೊಗಡಿನಿಂದಲೇ ಇಲ್ಲಿ ಹಾಸ್ಯ ಚಿಮ್ಮುತ್ತದೆ.

ತೇಜಸ್ವಿ ಅವರು ತಮ್ಮ ಕೃತಿಗಳಲ್ಲಿ ನವಿರು ಹಾಸ್ಯವನ್ನು ತಂದಿದ್ದಾರೆಂಬುದನ್ನು ಒಪ್ಪಿಕೊಂಡರೂ ಅವರು ಎಲ್ಲೂ ಹಾಸ್ಯಕ್ಕೆಂದೇ ಸನ್ನಿವೇಶಗಳನ್ನು ಸೃಷ್ಟಿಸಿಲ್ಲ. 'ಮಾಯಾಲೋಕ'ದಲ್ಲಿಯೂ ಸಹಜ ಸನ್ನಿವೇಶಗಳಲ್ಲಿಯೇ ಹಾಸ್ಯದ ಸೆಳವಿರುವುದನ್ನು ಗುರುತಿಸಬಹುದು.

"ಲೋ ನಾಗ ನಿನಗೆ ಹೆದರಿಕೆ ಆದ್ರೆ ನೀನು ಹೊರಗೆ ಬಾ. ನಾನು ಎಳೆದು ಹಾಕುತ್ತೇನೆ. ಎಂದು ಬೊಮ್ಮನ ಕಡೆ ತಿರುಗಿ, 'ಸ್ವಲ್ಪ ತಿಕಬಾಯಿ ಮುಚ್ಚಿಕೊಂಡು ನಿಂತುಗೊಳ್ಳಯ್ಯಾ ಊರ ಹಂದಿ ಹೊಡಕೊಂಡು ಹೆಬ್ಬುಲಿ ಶಿಕಾರಿ ಮಾಡಿದೊನ ಹಂಗೆ ಮಾತಾಡಬೇಡ' ಎಂದು ಅವನ ಕಡೆ ಮೂದಲಿಸುತ್ತಿರಬೇಕಾದರೆ ಅಯ್ಯಯ್ಯೋ ಹಂದಿ ಮೈಮೇಲೆ ಬಂತಲ್ಲೋ ಅಯ್ಯಯ್ಯೋ ಅಯ್ಯಯೋ ಎಂದು ಕಿವಿಗಡಚ್ಚಕುವಂಥ ಆರ್ತನಾದ ಒಂದು ಗುಲಾಬಿ ಮಟ್ಟಿನಿಂದ ಹೊರಬಿತ್ತು. ಎಲ್ಲರೂ ಏನಾಗುತ್ತಿದೆ ಎಂದು ಸಹ ನಿರೀಕ್ಷಿಸಲು ಹೋಗದೆ ತಮಗೆ ಅತಿ ಹತ್ತಿರದ ಮರ ಹತ್ತಲು ನುಗ್ಗಿದರು. ನಾಗ ಕೊಚ್ಚಿ ಬಿಡಿಸಿದ್ದ ಸುರಂಗದ ನೇರಕ್ಕೆ ಕಿಸುಗಾಲು ಹಾಕಿ ನಿಂತಿದ್ದ ಬಾಯಮ್ಮ ನಾಗನ ಯೋಗಕ್ಷೇಮ ಮರೆತು ಕಾಲಿಗೆ ಬುದ್ಧಿ ಹೇಳಲು ಹವಣಿಸುತ್ತಿರಬೇಕಾದರೆ, ಎರಡು ಕಾಲುಗಳ ನಡುವೆ ಕಾಡು ಹಂದಿ ಗುರುಗುಟ್ಟುತ್ತಾ ನುಗ್ಗೇಬಿಟ್ಟಿತು. ಬಾಯಮ್ಮ ಕಾಟಾಚಾರಕ್ಕೆ ಸೊಂಟಕ್ಕೆ ಮೂರು ಸುತ್ತು ಸುತ್ತಿಕೊಂಡಿದ್ದ ತುಂಡು ಸೀರೆ ಹಂದಿ ಕೋರೆಗೆ ಸಿಕ್ಕಿ ಬಿಚ್ಚಿಕೊಂಡು ಹಂದಿ ತಲೆಗೆ ಮುಸುಗು ಹಾಕಿದ ಹಾಗೆ ಸುತ್ತಿತ್ತು. ಸೀರೆ ಒಳಗೆ ಒಂದು ಕೊಳಕು ಒಳಲಂಗ ಕಟ್ಟಿಕೊಂಡಿಲ್ಲದಿದ್ದರೆ ಬಾಯಮ್ಮ ಅವತ್ತು ಐದಾರು ಜನ ಗಂಡಸರ ನಡುವೆ ಬರಿ ಬೆತ್ತಲೆ ಬಿದ್ದಿರಬೇಕಾಗುತ್ತಿತ್ತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಮಾಯಾಲೋಕ ೧, ೨೦೦೮, ಪುಟ ೧೩೭)

ಇಲ್ಲಿ ಇಡೀ ಸನ್ನಿವೇಶವೇ ಹಾಸ್ಯವನ್ನು ಚಿಮ್ಮಿಸುತ್ತದೆಯೇ ಹೊರತು ಇದು ಹಾಸ್ಯ ಸನ್ನಿವೇಶವಲ್ಲ. ಅಂದರೆ ಇಲ್ಲಿನ ಭಾಷಾಬಳಕೆ ಸಹಜವಾಗಿಯೇ ಹಾಸ್ಯರಸ ಉಕ್ಕುವಂತೆ ಮಾಡುತ್ತದೆ. ಹೀಗೆ ತೇಜಸ್ವಿಯವರ ಬಹುತೇಕ ಎಲ್ಲಾ ಕಾದಂಬರಿಗಳಲ್ಲಿ ನವಿರುಹಾಸ್ಯ ಬೆರೆತುಹೋಗಿದೆ. ಗಂಭೀರ ವಿಚಾರಗಳನ್ನು ವೈನೋದಿಕವಾಗಿ ಓದುಗರಿಗೆ ತಲುಪಿಸುವ ಅಭಿವ್ಯಕ್ತಿ ಕ್ರಮ ಇದಾಗಿದೆ. 'ಹಾಸ್ಯ' ಎಂಬುದು ಕಥನ ತಂತ್ರದ ಒಂದು ತೊಡಕು ಎಂದು ಹಲವಾರು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಏಕೆಂದರೆ ಕಥೆಯು ಹೇಳಬಯಸುವ ಗಂಭೀರ ವಿಚಾರಗಳನ್ನು ಓದುಗನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಸಾಮಾನ್ಯ ಓದುಗರಿಗೆ ಈ ಹಾಸ್ಯದ ಹಿಂದಿರುವ ಗಾಂಭೀರ್ಯ ಅರ್ಥಮಾಡಿಕೊಳ್ಳಲು ಗ್ರಹಿಸಲು ಕಷ್ಟವಾಗುತ್ತದೆ. ಈ ಅಭಿಪ್ರಾಯವನ್ನು ತೇಜಸ್ವಿಯವರ ವಿಷಯದಲ್ಲಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಸಾಮಾನ್ಯ ಓದುಗನಿಗೂ ಅರ್ಥವಾಗುವ ಭಾಷಾ ಶೈಲಿಯ ಮೂಲಕ 'ಹಾಸ್ಯ' ವನ್ನು ಬಳಸಿಕೊಂಡಿದ್ದು, ಕಥನ ತಂತ್ರದ ದೃಷ್ಟಿಯಿಂದ ತೇಜಸ್ವಿ ಅವರ ಅದ್ಭುತ ಅಭಿವ್ಯಕ್ತಿ ತಂತ್ರವಾಗಿದೆ.

ಅಲ್ಲದೆ, ತೇಜಸ್ವಿ ಕೃತಿಗಳಲ್ಲಿ ಬರುವ ಬೈಗುಳದ ಭಾಷೆ ಸಹಜ ಭಾಷೆಯಂತೆ ಮೂಡಿ ಬಂದಿರುವುದನ್ನು ಕಾಣಬಹುದು. ನಾವು ಬೈಗುಳ ಎಂದು ಹೇಳಬಹುದಾದ ಪದಗಳನ್ನು ಅವರು ಬಹಳ ಸಲುಗೆಯಿಂದ ಪ್ರೀತಿಯ ದ್ಯೋತಕವೆಂಬಂತೆ ಬಳಸಿರುವುದನ್ನು ಕಾಣಬಹುದು. ಉದಾಹರಣೆಗೆ 'ಮಾಯಾಲೋಕ' ಹಾಗೂ 'ಕಿರಗೂರಿನ ಗಯ್ಯಾಳಿಗಳು' ವಾಕ್ಯಗಳನ್ನು ಗಮನಿಸೋಣ.

'ಕುಡುಕ ಸೂಳೇ ಮಗನೆ . ಸ್ವಲ್ಪ ನೀರು ಹೋರಾನ ಬಾರೋ ಅಂತ ಕರಕೊಂಡು ಬಂದರೆ ಕೊಡ ಕೆಳಗಿಟ್ಟು ನಿನ್ನ ಹರಿಕಥೆ ಶುರುಮಾಡಿದೆಯೇ ?'

'.... ಸೂಳೆ ಮಕ್ಕಳ ಹೊಟ್ಟೆಗೆ ಕೊಳ್ಳಿ ಇಡಬೇಕು, ಮಾದರಚೋತ್ ಸೂಳೆ ಮಕ್ಕಳು 'ಲೌಡಿ ಮಕ್ಕಳಿಗೆ ಪಂಚಾಯ್ತಿಗೆ ಹಾಕ್ಸಿ ಮರ್ಯಾದ ದಂಡ ಹಾಕಿಸಬೇಕು.'

'ಹುಚ್ಚು ಮುಂಡೆಗಂಡ ! ನಂಗೇನು ತಲೆ ಕೆಟ್ಟಿಲ್ಲ ನಿನ್ನ ಕಣ್ಣಿಗೆ ಬಟ್ಟೆ ಕಟ್ಟಿ ಚೌರ ಮಾಡಿಸಿಕೊಳ್ಳೊದಕೆ.....'

'ಥೂ ಹುಚ್ಚು ಮುಂಡೇಗಂಡ ಬ್ಯಾಡ ಕಣೋ ಕಾರ ಇದೆ ಅಂದರೂ ಕೇಳದೆ ಬಾಯಾಗಿ ಹಕ್ಕೊಂಡು ಅಗಿದಿದ್ದೀಯಲ್ಲಾ !'

ಕಾದಂಬರಿಗೆ ಸಹಜತೆ ಹಾಗೂ ಜೀವಂತಿಕೆ ತರುವ ಸಲುವಾಗಿ ಲೇಖಕರು ಬಯ್ಗುಳಗಳನ್ನು ಕಥನ ತಂತ್ರವಾಗಿ ಬಳಕೆ ಮಾಡಿದ್ದಾರೆ ಎನ್ನಬಹುದು. ಇದೇ ಬಯ್ಗುಳಗಳ ಕಾರಣದಿಂದಾಗಿಯೇ ಇವರ ಕೃತಿಗಳಲ್ಲಿ ತಿಳಿಹಾಸ್ಯದ ಲೇಪ ಒದಗಿ ಬಂದಿದೆ.

"ತೇಜಸ್ವಿಯವರ ವಿನೋದ ಅವರ ಬರವಣಿಗೆಯ ಲಘುದಾಟಿಗೆ ಕಾರಣವಾಗಿದೆಯೆಷ್ಟೆ. ಆದರೆ ಅದು ವಿಷಯವನ್ನು ಎಂದೂ ಸರಳೀಕರಿಸುವುದಿಲ್ಲ. ಯಾವುದನ್ನೂ ವಿಜೃಂಭಿಸುವುದು ಇಲ್ಲ. ಕೆಲವೊಮ್ಮೆ ವೈನೋದಿಕ ಅತಿಶಯೋಕ್ತಿ ವಿಷಯವನ್ನು ಮಾನವೀಕರಿಸಲು, ಅನಗತ್ಯ ಭಾರವನ್ನು ತೊಡೆದುಹಾಕಲು, ಭಾವತಿರೇಕವನ್ನು ಕೊಡವಿ ವಿಮರ್ಶಾತ್ಮಕ ದೂರವನ್ನು ಕಾಯ್ದುಕೊಳ್ಳಲು ಪ್ರಜ್ಞಾಪೂರ್ವಕ ಬಳಕೆಯಾಗುತ್ತದೆ. ಪರಿಸರ ನಾಶದ ಬಗ್ಗೆ ಒಂದು ಸಂಸ್ಕೃತಿ ಕಣ್ಮರೆಯಾಗುತ್ತಿರುವ ಬಗ್ಗೆ ವಿಷಾದದಿಂದ ಬರೆಯುವಾಗಲೂ ಅದು ಅಳುಬುರುಕು ತನವಾಗದಂತೆ ತಡೆಯುವ ಬೌದ್ಧಿಕ ವಿಧಾನವಾಗಿ ದುಡಿಯುತ್ತದೆ.

ಅನಾಗರಿಕ ಅಮಾನವೀಯ ಜಂತುಗಳೋ ಕರುಣೆಗೆ ಮಾತ್ರ ಪಾರ್ಶ್ವವಾಗಬಲ್ಲ ಮೂರ್ತಿಗಳೇ ಆಗಿ ಬಿಡುತ್ತಿದ್ದ ಜೀವಿಗಳು ಚೈತನ್ಯ ಪೂರ್ಣ ಮನುಷ್ಯರಂತೆ ತುಂಬು ಉತ್ಸಾಹ ಮಾನವೀಯತೆಗಳಲ್ಲಿ ಗೋಚರಿಸಲು ಸಾಧ್ಯವಾಗುವುದು. ಈ ವೈನೋದಿಕ ದರ್ಶನದಿಂದಾಗಿಯೇ. ಆದ್ದರಿಂದಲೇ ರಾಜಕೀಯವಾಗಿ ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಅರ್ಥಪೂರ್ಣವಾದದ್ದನ್ನು ವೈಚಾರಿಕ ಭಾರವಿಲ್ಲದ ಸರಳ ಆಪ್ತ ಧಾಟಿಯಲ್ಲಿ ಸೂಚಿಸಿಬಿಡುವುದು ಲೇಖಕರಿಗೆ ಸಾಧ್ಯವಾಗುತ್ತದೆ". (ಅಶೋಕ ಟಿ.ಪಿ., ಪುಸ್ತಕ ಪ್ರೀತಿ, ೨೦೧೦, ಪುಟ ೪೬೩)

ಇದಕ್ಕೆ ಪೂರಕವಾಗಿ 'ಪರಿಸರ ಕಥೆ'ಯಲ್ಲಿ ಹಾವುಗೊಲ್ಲರ ಎಂಗ್ಟನ ಅವಸ್ಥೆಯನ್ನು ತೇಜಸ್ವಿ ಚಿತ್ರಿಸುವ ರೀತಿಯನ್ನು ಉದಾಹರಿಸಬಹುದು.

"ಎಂಗ್ಟನನ್ನು ದೂರದಿಂದ ನೋಡಿದಾಗ ಪಾಪ ಎನ್ನಿಸಿತು ನಾಗರಿಕತೆ ಮುಂದುವರಿಯುತ್ತಾ ಎಂಗ್ಟನ ಕುಲಕಸುಬುಗಳು ಕೈಚಳಕಗಳು ನಿಧಾನವಾಗಿ ನಿರುಪಯುಕ್ತ ವಾಗಿರುತ್ತಿದ್ದವು. ಸರ್ಕಾರ ಹಾವಿನ ಚರ್ಮವನ್ನು ರಫ್ತು ಮಾಡುವುದು ನಿಷೇಧಿಸಿದ ಮೇಲೆ ಅವನ ಚರ್ಮಗಳಿಗೆ ದುಡ್ಡು ಸಿಗುತ್ತಿರಲಿಲ್ಲ. ಚಕ್ರಾಣಿ ಬೇರು, ಚಿತ್ರಮೂಲದ ಬೇರು, ಸರ್ಪಗಂಧಿ, ಅಳಲೇಕಾಯಿಗಳೂ ವಿಲಾಯಿತಿ ಔಷಧದ ಎದುರು ಗಿರಾಕಿ ಕಳೆದುಕೊಂಡಿದ್ದವು. ಮೊದಲಿನಂತೆ ಮೊಲ ಕವುಜನಹಕ್ಕಿ, ನೀರು

ನಾಯಿಗಳನ್ನು ಬೇಟೆ ಮಾಡುವುದಕ್ಕೂ ಅರಣ್ಯ ಇಲಾಖೆಯವರು ಅವಕಾಶ ಕೊಡುತ್ತಿರಲಿಲ್ಲ.

ಎಂಗ್ಟನಿಗೆ ಮನಸ್ಸಿನಾಳದಲ್ಲಿ ತಾನು ಪರಕೀಯನಾಗುತ್ತ ಏಕಾಂಗಿಯಾಗುತ್ತ ಇರುವುದರ ಅರಿವಿದ್ದರಬಹುದು. ಅವನು ತನ್ನೆಲ್ಲ ಚಾಕಚಕ್ಯತೆ ಚಾಲಾಕುಗಳನ್ನು ಉಪಯೋಗಿಸಿ ಜನರನ್ನು ರಂಜಿಸಿ, ನಂಬಿಸಿ, ನಿದ್ದೆ ಮಾಡುತ್ತಿದ್ದ ದಾಸರ ಹಾವಿನ ಎದುರು ಪುಂಗಿ ಊದಿ, ಊಟ ಸಂಪಾದನೆ ಮಾಡಲು ಹೆಣಗುತ್ತಿದ್ದದನ್ನು 'ಕಣ್ಕಟ್ಟು ಸೂಳೇಮಗ' ಎಂದು ಜನರು ಬಯ್ದರೂ ತಾಳ್ಮೆಯಿಂದ ಸಹಿಸಿಕೊಂಡು ಉತ್ತರಿಸುತ್ತಿದ್ದುದನ್ನು ನೋಡಿದ್ದೇನೆ. ಭಾರತದ ಕಾಡುಗಳೂ ಮೃಗ ಪಕ್ಷಿಗಳೂ ನದಿಝರಿಗಳೂ ತಾಳ್ಮೆಯಿಂದ ತಮ್ಮ ಅವಸಾನವನ್ನು ಕಾಯುತ್ತಿರುವಂತೆಯೇ ಎಂಗ್ಟನೂ ಕಾಯುತ್ತಿದ್ದ ಇತಿಹಾಸ ಎಂದೋ ಅವನ ಭವಿಷ್ಯವನ್ನು ತೀರ್ಮಾನ ಮಾಡಿತ್ತು. ಸೋಲಲೇ ಬೇಕಾಗಿದ್ದ ಯುದ್ಧ ಒಂದರಲ್ಲಿ ಗುದ್ದಾಡುತ್ತಾ ಬೀದಿಬದಿಯಲ್ಲಿ ಅವನು ನಿಂತಿದ್ದ". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಪರಿಸರದ ಕತೆ, ೨೦೦೭ ,ಪುಟ ೫೭)

ತೇಜಸ್ವಿ ಈ ರೀತಿ ತಮ್ಮ ವಿನೋದವಾದ ಭಾಷಿಕ ತಂತ್ರದ ಮೂಲಕ ತಾವು ಕಂಡ ಜೀವನ ದರ್ಶನದಲ್ಲೇ ಇರುವ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ದಾಖಲಿಸುತ್ತಾ ಹೇಳುತ್ತಾರೆ. ಇವರ ಬಹುತೇಕ ಎಲ್ಲಾ ಕೃತಿಗಳಲ್ಲೂ ಅಂದರೆ ಕಿರಗೂರಿನ ಗಯ್ಯಾಳಿಗಳು, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಅಬಚೂರಿನ ಪೋಸ್ಟಾಪೀಸು, ಕರ್ವಾಲೋ ಗಳೆಲ್ಲಾ ಈ ಸೂಕ್ಷ್ಮಗಳು ಚಿಂತನೆಗೆ ಒಳಗು ಮಾಡುತ್ತವೆ. ಚೇಷ್ಟೆ, ಲೇವಡಿ, ಕುಹಕ, ಸಿನಿಕತನ, ವ್ಯಂಗ್ಯಗಳಿಂದ ಮುಕ್ತವಾದ ಆರೋಗ್ಯಕರ ಹಾಸ್ಯ, ಲವಲವಿಕೆ, ವಿನೋದ ತೇಜಸ್ವಿಯವರ ಬರವಣಿಗೆಗೆ ಹಾಗೂ ಕನ್ನಡ ಗದ್ಯ ಪ್ರಕಾರಕ್ಕೂ ಹೊಸ ಮಾದರಿಯಾಗಿವೆ.

ಅಲ್ಲದೆ ಇವರ ಕೃತಿಗಳಲ್ಲಿ ಅಂತರ್ಗತವಾಗಿರುವ ಗಾಢ ವಿಷಾದ, ಸಿನಿಕತೆಗೆ ಇಲ್ಲವೆ ಭಾವುಕತೆಗೆ ಇಳಿಯದಂತೆ ಆರೋಗ್ಯಕರ ಪ್ರತಿರೋಧಗಳನ್ನು ಒಡ್ಡಿರುವಂತೆ ಕಂಡು ಬರುವ ಈ 'ವಿನೋದ ತಂತ್ರ' ಏಕತಾನತೆ ಉಂಟುಮಾಡುವುದಿಲ್ಲ. ಇದು ತೇಜಸ್ವಿ ಅವರ ಭಾಷಾ ಬಳಕೆಯ ವೈಶಿಷ್ಟವೂ ಆಗಿದೆ. ಜೊತೆಗೆ ತಮ್ಮ ತಂದೆಯವರಿಂದ ಬಳುವಳಿಯಾಗಿ ಪಡೆದ ಅವರ ಹಾಸ್ಯಪ್ರಜ್ಞೆ ಕೇವಲ ಸಾಹಿತ್ಯ ತಂತ್ರವಾಗಿಲ್ಲ. ಅವರು ತಮ್ಮ ಕೃತಿಗಳ ಮ ಾಲಕ ಅನಾವರಣಗೊಳಿಸಿದ ಹೊಸ

ಹಾಗೂ ವೈವಿಧ್ಯಮಯ ಸಾಮಾಜಿಕ ಬದುಕಿನ ರೀತಿ ನೀತಿಗಳನ್ನು, ಕೃತಿಯ ಸೌಂದರ್ಯ ಸೃಷ್ಟಿಯಾಗಿ ತೊಡಗಿಸಿಕೊಳ್ಳುವ ಕ್ರಮದೊಳಗಿಂದಲೇ ಸಹಜವಾಗಿ ಹೊರ ಹೊಮ್ಮಿದೆ. ಇದು ಸಾಹಿತ್ಯದ ಈ ರೋಚಕತೆಗೆ ಹೊಸದೊಂದು ಆಯಾಮ ನೀಡಿದೆ ಎಂಬುದು ಪರಿಣಿಸಬೇಕಾದ ಅಂಶವಾಗಿದೆ.

**೮.೩.ತಂತ್ರ :**

ತೇಜಸ್ವಿ ಮತ್ತು ಕುವೆಂಪು ಅವರ ಕಥನ ಸಾಹಿತ್ಯವನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಕಾದಂಬರಿಯ ಶಿಲ್ಪದ ಬಗ್ಗೆ ಚರ್ಚಿಸುವುದು ಹೆಚ್ಚು ಔಚಿತ್ಯಪೂರ್ಣವಾಗಿದೆ. ಇಬ್ಬರೂ ಎರಡು ಪಂಥದ ಪ್ರಾತಿನಿಧಿಕ ಬರಹಗಾರರು. ಮಲೆನಾಡಿನ ಜೀವನದ ವಾಸ್ತವ ಚಿತ್ರಣವನ್ನು ಕಟ್ಟಿಕೊಡುವ 'ಮಲೆಗಳಲ್ಲಿ ಮದುಮಗಳು' ಮತ್ತು ಕಾನೂರು ಹೆಗ್ಗಡಿತಿ ಕಾದಂಬರಿಗಳು ಕನ್ನಡದ ಎರಡು ಬೃಹತ್ ಕಾದಂಬರಿಗಳು. ಈ ಎರಡೂ ಕಾದಂಬರಿಗಳು ಮೇಲುನೋಟಕ್ಕೆ ಪ್ರಾದೇಶಿಕ ಕಾದಂಬರಿಗಳೆಂದು ಕಂಡುಬಂದರೂ 'ಪ್ರಾದೇಶಿಕತೆ'ಯ ಆಚೆಗೆ ಭಿನ್ನ ಆಯಾಮ ಪಡೆದುಕೊಳ್ಳುತ್ತವೆ. ಮಲೆನಾಡಿನಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ಉಂಟಾದ ಸ್ಥಿತ್ಯಂತರಗಳು ನಾಡಿನ ಮೂಲೆ ಮೂಲೆಗಳಲ್ಲೂ ಆಗುತ್ತಿದ್ದವು. ಅಲ್ಲದೇ, ಶೋಷಣೆ, ಕಾಮ - ಪ್ರೇಮ ಜಿಜ್ಞಾಸೆ ಎಲ್ಲೆಡೆ ಇರುವಂತಹವು. ಈ ಕಾದಂಬರಿಗಳಲ್ಲಿ ಅಡಗಿರುವ ಮೌಲ್ಯಗಳು, ಆಶಯಗಳು ಪ್ರಾದೇಶಿಕತೆಯ ಎಲ್ಲೆಯನ್ನು ಮೀರಿ ಮಹತ್ವ ಪಡೆಯುತ್ತವೆ. ಕಾದಂಬರಿಯ ಮೂಲಭೂತ ಅಂಗಗಳಾದ ಕಲ್ಪನೆ, ಕಥನ ಹಾಗೂ ಭಾಷಿಕ ಅಂಶಗಳನ್ನು ಗಮನಿಸಿದಾಗ ಅವು ಹೆಚ್ಚಿನ ಮಹತ್ವ ಪಡೆಯುತ್ತವೆ. ಈಗಾಗಲೇ ಭಾಷಿಕ ಅಂಶಗಳನ್ನು ಚರ್ಚಿಸಲಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ಶಿಲ್ಪವನ್ನು ಗಮನಿಸುವುದಾದರೆ, ಕಾದಂಬರಿಯ ಹರವು ತುಂಬಾ ವಿಸ್ತಾರವಾದದ್ದು. ಸಿಂಭಾವಿಯಿಂದ ಪ್ರಾರಂಭವಾಗುವ ಕಾದಂಬರಿಯ ಕಥೆ ಆನಂತರ ಕೋಣೂರು, ಹಳೆಮನೆ, ಬೆಟ್ಟಳ್ಳಿ, ಮೇಗರವಳ್ಳಿ, ಲಕ್ಕುಂದ, ಕಲ್ಲೂರು ಹಾಗೂ ಹೂವಳ್ಳಿಯ ಕುಟುಂಬಗಳಿಗೆ ವ್ಯಾಪಿಸುತ್ತಾ ಸಾಗುತ್ತದೆ. ಈ ಮಲೆನಾಡಿನ ಹಲವು ಕುಟುಂಬಗಳ

ನಡುವೆ ಕಾದಂಬರಿಯ ಬಂಧವೆಂಬಂತೆ 'ಗುತ್ತಿ' ಇದ್ದಾನೆ. ಶೀರ್ಷಿಕೆ ಹೇಳುವಂತೆ ಇದು ಮಲೆನಾಡಿನ ಮದುಮಕ್ಕಳ ಕಥೆ. ಗುತ್ತಿಯು ತಿಮ್ಮಿಯನ್ನು ಅವಳ ವಿಷಮ ಪರಿಸ್ಥಿತಿಯಿಂದ ಪಾರುಮಾಡಿ ಪಡೆಯುವುದು, ಚೆನ್ನಮ್ಮನನ್ನು ಪಾರುಮಾಡುವ ಮುಕುಂದಯ್ಯ, ಅದಕ್ಕೆ ಸಹಾಯ ಮಾಡುವ ಯತ-ಪಿಂಚಲು ಹೀಗೆ ಸಮಾಜದ ವಿವಿಧ ಸ್ತರಗಳ ಸಂಬಂಧಗಳ ಚಿತ್ರಣ, ಪ್ರಣಯ ಪ್ರಸಂಗಗಳ ಚಿತ್ರಣ ಹಾಗೂ ಇಲ್ಲಿನ ವಿವಿಧ ಕುಟುಂಬಗಳ ನಡುವೆ ಬರುವ ವಿಚಾರಗಳು, ಅನುಭವಗಳಿಂದ ಕಾದಂಬರಿ ಸಮೃದ್ಧವಾಗಿದೆ. ಇಷ್ಟೆಲ್ಲಾ ವೈವಿಧ್ಯಮಯ ವಸ್ತುಜಾಲದಲ್ಲಿ ಗುತ್ತಿಯ ಪ್ರಯಾಣ, ಮರು ಪ್ರಯಾಣಗಳ ಕ್ರಮವನ್ನು ಅನುಸರಿಸುವುದು ಕಾದಂಬರಿಯ ಬಂಧದ ದೃಷ್ಟಿಯಿಂದ ಗಮನಾರ್ಹವಾಗಿದೆ. "ಗುತ್ತಿ ಲಕ್ಕುಂದಕ್ಕೆ ಬಂದಾಗ ಸೇಸನಾಯ್ಕ - ಕಾಡಿಯರ ಪ್ರಸಂಗ, ಮೇಗರವಳ್ಳಿ ತಲುಪಿದಾಗ ಅಂತಕ್ಕ - ಕಾವೇರಿಯರ ಕತೆ, ಹಳೆಮನೆಯನ್ನು ಸೇರಿದಾಗ ಸುಬ್ಬಣ್ಣ ಹೆಗ್ಗಡೆಯವರ ಕುಟುಂಬದ ವಿವರಗಳು, ಬೆಟ್ಟಳ್ಳಿಯನ್ನು ಮುಟ್ಟಿದಾಗ ದೇವಯ್ಯನ ಕಥೆ - ಹೀಗೆ ಕಾದಂಬರಿಯ ವಸ್ತು ಹರಡುತ್ತಾ ಹೋಗುತ್ತದೆ. ಗುತ್ತಿಯ ಪ್ರಯಾಣದ ಹೆಜ್ಜೆಗಳನ್ನು ಕೇಂದ್ರಗಳೆಂದು ಪರಿಗಣಿಸಿದರೆ ಈ ಕತೆಗಳು ಆ ಕೇಂದ್ರದ ಸುತ್ತ ಹಬ್ಬಿಕೊಳ್ಳುವ ವಲಯಗಳಾಗಿ ಕಾಣಿಸಿಕೊಳ್ಳುತ್ತವೆ. ಈ ವಲಯಗಳು ಒಂದನ್ನೊಂದು ಭೇದಿಸುವಂತೆ ನಿರ್ಮಿತವಾಗಿವೆ." (ಆಮೂರ ಜಿ.ಎಸ್., ಕನ್ನಡ ಕಥನ ಸಾಹಿತ್ಯ : ಕಾದಂಬರಿ, ೨೦೦೩, ಪುಟ ೭೦)

ಕುವೆಂಪು ಅವರು ಇಷ್ಟು ದೊಡ್ಡ ಕಾದಂಬರಿಯ ಪಾತಳಿಯನ್ನು ನಿರ್ವಹಿಸಲು ಬಳಸಿರುವ ತಂತ್ರ ಹಾಗೂ ಭಾಷಿಕ ವೈವಿಧ್ಯತೆ, ಪಾತ್ರ ವೈವಿಧ್ಯತೆ, ಸನ್ನಿವೇಶಗಳು ಕಾದಂಬರಿಯ ಓಟಕ್ಕೆ ಎಲ್ಲಿಯೂ ಅಡ್ಡಿಯಾಗುವುದಿಲ್ಲ. ಮೇಲು ನೋಟಕ್ಕೆ 'ಬಂಧ'ವಿಲ್ಲ ಎಂಬಂತೆ ಗೋಚರಿಸಿದರೂ, ಕಾದಂಬರಿಯ ಒಳಹೊಕ್ಕಾಗ ಕಾದಂಬರಿಯ ಬಂಧದ ಅರಿವಾಗುತ್ತದೆ. ಇವರ ಕಾನೂರು ಹೆಗ್ಗಡತಿ ಕಾದಂಬರಿಯೂ ಈ ಅಂಶಗಳಿಂದ ಹೊರತಲ್ಲ. ಬೃಹತ್ ಕಾದಂಬರಿಯನ್ನು ನಿರ್ವಹಿಸುವ ಸಂದರ್ಭದಲ್ಲಿ ಕುವೆಂಪುರವರು, ಸನ್ನಿವೇಶ ನಿರ್ಮಾಣದಲ್ಲಿ ಘಟನೆಗಳಿಗೆ ಬಂಧವನ್ನು ಏರ್ಪಡಿಸುವ ನಿಟ್ಟಿನಲ್ಲಿ ಪ್ರಕೃತಿ ವರ್ಣನೆ ಹಾಗೂ ಪ್ರತಿಮೆಗಳನ್ನು ತರುವುದು ಅಗತ್ಯವೂ, ಅನಿವಾರ್ಯವೂ ಆಗಿರುತ್ತದೆ. ಆದ್ದರಿಂದ "ಮಲೆಗಳಲ್ಲಿ ಮದುಮಗಳು ಸೂತ್ರ ರೂಪವಾದ ಕೇಂದ್ರ ಪ್ರಜ್ಞೆಯಿಲ್ಲದ ವಿವರಗಳಲ್ಲಿ ಸೊಕ್ಕಿಬಿಡುತ್ತದೆ" (ಅನಂತಮೂರ್ತಿ ಯು.ಆರ್., ಪ್ರಜ್ಞೆ ಮತ್ತು ಪರಿಸರ, ೧೯೭೧, ಪುಟ ೧೩೪)

ಹಾಗೂ "ಕನ್ನಡದ ಅತಿ ಶ್ರೇಷ್ಠ ಕಾದಂಬರಿ ಆಗಬಹುದಾಗಿದ್ದ 'ಮಲೆಗಳಲ್ಲಿ ಮದುಮಗಳು' ಸೋಲುವುದಕ್ಕೆ ಕಾರಣ ಅನುಭಾವವಲ್ಲ. ಕಾದಂಬರಿಗೆ ಬಂಧವನ್ನೊದಗಿಸುವ ದೃಷ್ಟಿಕೋನದಲ್ಲಿಯೆ ಬಿರುಕಿರುವುದು ಎನ್ನಿಸುತ್ತದೆ" (ಕೃಷ್ಣಮೂರ್ತಿ ಎಂ.ಜಿ., ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು, ೧೯೯೪, ಪುಟ ೧೫೫) ಎಂಬ ಅಭಿಪ್ರಾಯಗಳನ್ನು ಒಪ್ಪಲು ಸಾಧ್ಯವಿಲ್ಲ.

ಏಕೆಂದರೆ, 'ಕಾನೂರು ಹೆಗ್ಗಡಿತಿ'ಯ ಕಾದಂಬರಿಯ ಅರಿಕೆಯಲ್ಲಿ "ಕಾದಂಬರಿ ಕರತಲ ರಂಗಭೂಮಿ : ಅಂಗೈ ಮೇಲಣ ನಾಟಕ ಶಾಲೆ. ಆದ್ದರಿಂದ ಕಾದಂಬರಿಯನ್ನು ಓದುವ ವಾಚಕರು ನಾಟಕವನ್ನು ನೋಡುವ ಪ್ರೇಕ್ಷಕರೂ ಆಗಬೇಕಾಗುತ್ತದೆ. ವಾಚಕರ ಕಲ್ಪನೆ ಸದಾ ಎಚ್ಚೆತ್ತಿರಬೇಕು. ಅದು ನಿದ್ದೆ ಮಾಡದಿರಲಿ, ತೂಕಡಿಸಿದರೂ ರಸಾಸ್ವಾದನೆಗೆ ಭಂಗ ಬರುತ್ತದೆ. ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳುವಾಗ, ದೃಶ್ಯಗಳನ್ನು ಚಿತ್ರಿಸಿಕೊಳ್ಳುವಾಗ, ವ್ಯಕ್ತಿಗಳನ್ನು ಪರಿಚಯ ಮಾಡಿಕೊಳ್ಳುವಾಗ, ಅವರ ಸಂಭಾಷಣೆಗಳನ್ನು ಅವರವರ ಬೇರೆ ಬೇರೆಯ ವಾಣಿಗಳೊಡನೆ ಆಲಿಸುವಾಗ ವಾಚಕರು ಸಿನಿಮಾ ವಾಕ್ಚಿತ್ರವನ್ನು ತತ್ಪರತೆಯಿಂದ ನೋಡುತ್ತಿರುವ ಪ್ರೇಕ್ಷಕರಂತಾಗಬೇಕಾಗುತ್ತದೆ. ಹಾಗೆ ಮಾಡದಿದ್ದರೆ ಓದು ಸಾರ್ಥಕವಾಗುವುದಿಲ್ಲ"(ಕುವೆಂಪು, ಕಾನೂರು ಹೆಗ್ಗಡಿತಿ, ೨೦೦೯, ಅರಿಕೆ)ಎಂಬ ಸಲಹೆಯಲ್ಲಿ, ಕಾದಂಬರಿಯನ್ನು ಅದರ ಚೌಕಟ್ಟಿನಲ್ಲಿ ಇಟ್ಟು ನೋಡುವುದರಿಂದ ಹೊರಗೆ ಬರಬೇಕೆನ್ನುವ ಲೇಖಕರ ಆಶಯ ವ್ಯಕ್ತವಾಗಿದೆ. ಅಲ್ಲದೆ, ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ. ಇದನ್ನು ಸಾವಧಾನವಾಗಿ ಸಚಿತ್ರವಾಗಿ ಸಜೀವವಾಗಿ ಓದಿ ಎಂಬ ಅವರ ವಿಜ್ಞಾಪನೆ, ರಸಾಸ್ವಾದನೆಗೆ ತೊಡಗುವ ಓದುಗನಿಗೆ ಮಲೆನಾಡಿನ 'ಬದುಕಿನ ದರ್ಶನ' ಮಾಡಿಸುವ ನಿಟ್ಟಿನಲ್ಲಿ ಕುವೆಂಪು ಅವರ ಹಂಬಲವನ್ನು ಸೂಚಿಸುತ್ತದೆ. ಆದ್ದರಿಂದಲೇ ಇವರ ಕಾದಂಬರಿಗಳು ಕಾದಂಬರಿಯ ಚೌಕಟ್ಟು ಹಾಗೂ ಲಕ್ಷಣಗಳನ್ನು ಮೀರಿ ಕಾವ್ಯತ್ವದ ಆಯಾಮವನ್ನು ಪಡೆದುಕೊಳ್ಳುತ್ತವೆ. ಓದುಗನಿಗೆ 'ಕರತಲ ರಂಗಭೂಮಿಯ ದರ್ಶನ' ಮಾಡಿಸುತ್ತವೆ.

ತೇಜಸ್ವಿ ಅವರ ಕಾದಂಬರಿಗಳ ಶಿಲ್ಪದ ಕುರಿತು ವಿಶ್ಲೇಷಿಸುವುದಾದರೆ, ಅವರ 'ಅಬಚೂರಿನ ಪೋಸ್ಟಾಫೀಸು' ಸಂಕಲನದ ಕತೆಗಳು ಸಣ್ಣಕತೆಯ ಪ್ರಕಾರದಲ್ಲಿ ಹೊಸ ಜಾಡನ್ನು ತೆರೆಯುವ, ಹೊಸ ತಿರುವನ್ನು ಪಡೆಯುವ

ಹವಣಿಕೆಯುಳ್ಳವು. "ಕನ್ನಡದ ನವ್ಯ ಸಂಪ್ರದಾಯವನ್ನು ಸಂಪೂರ್ಣವಾಗಿ ತೊರೆದು ಹೊಸ ದಿಕ್ಕಿನಲ್ಲಿ ನಾವೀಗ ಅನ್ವೇಷಿಸಬೇಕಾಗಿದೆ" (ಪೂರ್ಣ ಚಂದ್ರತೇಜಸ್ವಿ ಕೆ.ಪಿ., ಅಬಚೂರಿನ ಪೋಸ್ಟಾಫೀಸು, ೧೯೭೩, ಪುಟ ೩) ಎಂಬ ಘೋಷಣೆಯೊಂದಿಗೆ ತೇಜಸ್ವಿ ಈವರೆಗೆ ಅನುಸರಿಸಿದ್ದ ನವ್ಯ ಮಾರ್ಗದ ಅಭಿವ್ಯಕ್ತಿ ಪರಿಕರಗಳನ್ನು, ಮೌಲ್ಯಗಳನ್ನು ತಿರಸ್ಕರಿಸಿ ಭಿನ್ನ ನೆಲೆಯಲ್ಲಿ ತಮ್ಮ ಕಥೆಗಳ ರಚನೆಯನ್ನು ನಿರ್ವಹಿಸಿದರು. ಇಲ್ಲಿನ ಕತೆಗಳಲ್ಲಿ ಆಧುನಿಕ ನಾಗರಿಕತೆಯ ಆಕ್ರಮಣದಿಂದ ಉಂಟಾಗುವ ಅವಾಂತರದ ಚಿತ್ರಣವಿದೆ. ತನ್ನ ಸುತ್ತಲಿನ ಬದುಕಿನ ಬೇಡಿಕೆ, ನಂಬಿಕೆ, ನಾಗರಿಕತೆಯ ಹಂಬಲ ಇವುಗಳಿಗೂ, ವ್ಯಕ್ತಿಯ ಪ್ರತಿಭೆ, ಸ್ವಂತದ ಬವಣೆಗಳಿಗೆ ಇರುವ ಸಂಬಂಧವನ್ನು ಇವರ ಕತೆಗಳು ವ್ಯಕ್ತಪಡಿಸುತ್ತವೆ. 'ಶ್ರೀಸಾಮಾನ್ಯನ ಜೀವನ ಕ್ರಮ'ದ ಹಿಂದಿರುವ ಶಕ್ತಿಗಳ ವಸ್ತುನಿಷ್ಠ ಗ್ರಹಿಕೆ ಇವರ ಕತೆಗಳ ಆಶಯವಾಗಿದೆ. ಕತೆ ಹೇಳುವಿಕೆ ಮತ್ತು ನೇರ ನಿರೂಪಣೆಯ ತಂತ್ರದಿಂದಾಗಿ ಇವರ ಕಥೆ ಮತ್ತು ಕಾದಂಬರಿಗಳು ಪರಿಣಾಮದಲ್ಲಿ ದುರಂತದ ತೀವ್ರತೆಯನ್ನು, ಭಾವುಕ ಸ್ಥಿತಿಯನ್ನು, ಹಾಸ್ಯದ ಪ್ರವೃತ್ತಿಯನ್ನು ಪ್ರಕಟಿಸುತ್ತವೆ. ಅಲ್ಲದೇ, ಸಾಹಿತ್ಯದ ಅನುಭವ ಹಾಗೂ ಅಭಿವ್ಯಕ್ತಿ ಸಾಧ್ಯತೆಗಳನ್ನು ಬದಲಿಸುವ ಪ್ರಯತ್ನಗಳಾಗಿವೆ. ಅವರ ಚಿದಂಬರ ರಹಸ್ಯ, ಕರ್ವಾಲೋ, ಜುಗಾರಿ ಕ್ರಾಸ್, ಕಿರಗೂರಿನ ಗಯ್ಯಾಳಿಗಳು ಕಾದಂಬರಿಯ ಅಂತ್ಯವನ್ನು ಗಮನಿಸಿದಾಗ ತೇಜಸ್ವಿ ತಾರ್ಕಿಕ ರೂಪದ 'ಮುಕ್ತಾಯ ತಂತ್ರ' ಪ್ರಯೋಗಶೀಲತೆಗೆ ಸಾಕ್ಷಿಯಾಗಿದೆ.

"ನೋಡು ಜೇನುಕಲ್ಲು ಗುಡ್ಡದ ತುದಿ ಚೆನ್ನಾಗಿ ಕಾಣ್ತಿದೆ. ಕೆಸರೂರಿನ ಜನ ಈಗಲೂ ಎಲ್ಲಾ ಅಲ್ಲಿಗೆ ಓಡಿದರೆ ಬೆಂಕಿಯಿಂದ ತಪ್ಪಿಸಿಕೊಳ್ಳಬಹುದು" ಎಂದಳು ಜಯಂತಿ.

"ನಮಗೆ ಕಾಣ್ತಿದೆ ! ಇವರಿಗೆ ಕಾಣದ? ಈ ಹೊಗೇಲಿ" ಎಂದ ರಫಿ. (ಪೂರ್ಣ ಚಂದ್ರತೇಜಸ್ವಿ ಕೆ.ಪಿ., ಚಿದಂಬರ ರಹಸ್ಯ, ೨೦೦೬, ಪುಟ ೨೧೭)

"ಹಾರೋ ಪ್ರಯತ್ನದಲ್ಲಿ ಅದು ತಪ್ಪುದಾರಿ ಹಿಡೀತು ಅಂತ ಕಾಣ್ತದೆ. ಕೈಗಳ ಬದಲು ಪಕ್ಕೆ ಉಪಯೋಗಿಸಿತು ಸಾರ್. ಅದಕ್ಕೇ ಅದು ಹಾಗೇ ಉಳೀತು. ಮಿಕ್ಕವು ರೆಕ್ಕೆ ಪುಕ್ಕ ಬೆಳೆಸಿಕೊಂಡು ಹಕ್ಕಿ ಆಗಿ ಬಿಟ್ಟವು" ಎಂದೆ.

"ತಪ್ಪು ಸರಿ ಹೇಗೆ ಹೇಳ್ತೀರಿ. ನಮಗೆ ಈ ಕ್ಷಣ ಇಲ್ಲಿ ಹೀಗನ್ನಿಸಿದೆ. ಜೀವ ವಿಕಾಸಕ್ಕೆ ಎಲ್ಲಿದೆ ಕೊನೆ !" ಎಂದರು ಕರ್ವಾಲೋ. (ಪೂರ್ಣ ಚಂದ್ರತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೭, ಪುಟ ೧೪೫)

"ಇದನ್ನೆಲ್ಲಾ ಬರೆಯ ಹೊರಟರೆ ಕಿರಗೂರಿನ ಗಯ್ಯಾಳಿಗಳಿಗೆ ಸಂಬಂಧಿಸಿದ ಇನ್ನೊಂದು ಕಾದಂಬರಿಯಾಗುತ್ತೆ. ಮೂರು ರಾತ್ರಿ, ಮೂರು ಹಗಲು ಕಿರಗೂರಿನ ಮೇಲೆ ಬೀಸಿದ ಬಿರುಗಾಳಿಯಿಂದಲೇ ಇದೆಲ್ಲಾ ಶುರುವಾಯಿತೆಂದು ಹೇಳಿದರೆ ಬಾದರಾಯಣ ಸಂಬಂಧ ತೋರಿಸಿದಂತೆ. ಆದ್ದರಿಂದಲೇ ಕರಿಯ ಮೂರು ಜನರ ಸೊಂಟದ ಉಳುಕು ತೆಗೆದಾಗಲೇ ಈ ಕಥೆ ಅಧಿಕೃತವಾಗಿ ಮುಕ್ತಾಯ, ಅಲ್ಲವೇ?" (ಪೂರ್ಣ ಚಂದ್ರತೇಜಸ್ವಿ ಕೆ.ಪಿ., ಕಿರಗೂರಿನ ಗಯ್ಯಾಳಿಗಳು, ೨೦೦೯, ಪುಟ ೫೫)

ಜಾತಿ - ವೈಷಮ್ಯಗಳನ್ನು ಮೀರಿ ಬದುಕುವ ಆಶಯವನ್ನು ಚಿದಂಬರರಹಸ್ಯದ 'ಮುಕ್ತಾಯ' ಸೂಚಿಸುತ್ತದೆ. ರಫಿಯ ಮಾತುಗಳಲ್ಲಿ ಜಾತಿ ವೈಷಮ್ಯದಲ್ಲೇ ಮುಳುಗಿರುವ ಕೆಸರೂರಿನ ಜನಕ್ಕೆ ಈ ಪ್ರಜ್ಞೆಯ ಅರಿವಾಗದಿರುವ ಬಗ್ಗೆ ವಿಷಾಧ ವ್ಯಕ್ತವಾಗಿದೆ. ಈ ಬಗೆಯ ಆಶಯಗಳ ನಿರೀಕ್ಷೆಯಿಂದಾಗಿ ಇತರ ಲೇಖಕರ ಕಥೆ ಕಾದಂಬರಿಗಳ ಅಧಿಕೃತ ಮುಕ್ತಾಯದಂತೆ ಕಾಣುವುದಿಲ್ಲ. ಅದನ್ನು ವಿಸ್ತರಣೆಗೆ, ಊಹೆಗೆ ಓದುಗನಿಗೆ ಹೆಚ್ಚು ಅವಕಾಶ ಸಿಗುತ್ತದೆ. ಈ ಬಗೆಯ 'ತಾರ್ಕಿಕ ಅಂತ್ಯ' ತೇಜಸ್ವಿ ಅವರ ಕೃತಿಗಳ ಹೆಚ್ಚುಗಾರಿಕೆಯಾಗಿದೆ.

ಅವರ 'ಮಾಯಾಲೋಕ' ಕಾದಂಬರಿ ಶಿಲ್ಪವನ್ನು ಗಮನಿಸಿದಾಗ ಅದಕ್ಕೆ ಒಂದು ಬಂಧ ಕಾಣುವುದಿಲ್ಲ. ದಿನಚರಿಯ ಬಗೆಯಲ್ಲಿ ಕಾಣುವ ನಿರೂಪಣಾ ತಂತ್ರ, ಗೊಂದಲಪುರದ ದೈನಂದಿನ ಆಗು ಹೋಗುಗಳು, ನೀರಿನ ಸಮಸ್ಯೆ ಹಾಗೂ ವಿದ್ಯುತ್ ಸಮಸ್ಯೆಯಿಂದಾಗುವ ಅವಾಂತರಗಳನ್ನು ಹಾಸ್ಯಾಸ್ಪದವಾಗಿ ಬಿಂಬಿಸುತ್ತವೆ. ಅಲ್ಲದೇ, ಕಾದಂಬರಿಯ ಲಕ್ಷಣಗಳನ್ನು ಮೀರಿದ ಭಿನ್ನ ಆಯಾಮ ಪಡೆದುಕೊಳ್ಳುತ್ತದೆ. ತಮ್ಮ ಇತರ ಕೃತಿಗಳಲ್ಲಿರುವಂತೆ ನಿರೂಪಕನೇ ಕತೆಗಾರನಾಗಿರುವುದು ಇವರ ಕಥನ ಮಾರ್ಗದ ಮುಖ್ಯ ಲಕ್ಷಣವಾಗಿದ್ದಂತೆ. ಮಿತಿಯೂ ಆಗಿದೆ. ಏಕೆಂದರೆ ಇದರಾದಾಗಿ ವಸ್ತು ನಿಷ್ಟತೆಯ ಅಧಿಕೃತತೆ ತುಸುಕಡಿಮೆಯಾದಂತೆ ಭಾಸವಾಗುತ್ತದೆ. ಆದರೆ ಮನುಷ್ಯನನ್ನು ಏಕಕಾಲದಲ್ಲಿ ಒಂದು ತಾತ್ವಿಕ ಅನನ್ಯತೆಯ ಪ್ರತೀಕವಾಗಿ ನೋಡುವ ಮನೋಧರ್ಮ ಇವರ

ಕೃತಿಗಳ ಮೂಲ ಭಿತ್ತಿಯಾಗಿದೆ. ಬದುಕಿನ ಬಗೆಗಿನ ತಾತ್ವಿಕ ನೋಟವನ್ನು ಹಾಗೂ ಸಾಮಾಜಿಕ ಅರ್ಥಪೂರ್ಣತೆಯನ್ನು ಕೃತಿಯ ಅಂತಃಸತ್ವವಾಗಿ ಒಟ್ಟಾಗಿ ಮೂಡಿಸುವ ಬೆಸೆಯುವ ಪ್ರವೃತ್ತಿ ಇವರ ಕತೆ-ಕಾದಂಬರಿಗಳ ಕೇಂದ್ರ ಕಾಳಜಿಯಾಗಿದೆ. ಈ ಬಗೆಯ ಜೀವನ ಮುಖಿ ರಚನೆಗಳನ್ನು ತಮ್ಮದೇ ಆದ ಭಿನ್ನ ಶೈಲಿಯನ್ನು ವ್ಯಕ್ತಪಡಿಸುವುದೇ ತೇಜಸ್ವಿಯವರ ಪ್ರಯೋಗಶೀಲತೆಗೆ ಸಾಕ್ಷಿಯಾಗಿದೆ. ಜೊತೆಗೆ ಸಂಪ್ರದಾಯವನ್ನು ತೊರೆದು ಸಂಪೂರ್ಣವಾಗಿ ಹೊಸದಿಕ್ಕಿನಲ್ಲಿ ಅನ್ವೇಷಣೆಗೆ ತೊಡಗುವ ಅವರ ಅನ್ವೇಷಕ ಮನಸ್ಥಿತಿಗೆ ನಿದರ್ಶನವಾಗಿದೆ.

ಕಾದಂಬರಿಕಾರನ ಪ್ರಜ್ಞಾಪೂರ್ವಕ ಪ್ರಯತ್ನದಿಂದ ತಂತ್ರ ಪ್ರಧಾನ ಕಾದಂಬರಿಗಳಲ್ಲಿ, ವಿನ್ಯಾಸದ ಹಿಂದಿನ ದೃಷ್ಟಿ, ಅನುಭವ ಏನು ಎಂದು ನೋಡಬೇಕಾಗುತ್ತದೆ. ಕುವೆಂಪು ಮತ್ತು ತೇಜಸ್ವಿ ಕಥನಗಳು ಮಲೆನಾಡಿನ ಸಂಕೀರ್ಣ ಪರಿಸರದ ವ್ಯಕ್ತಿಗಳ ಆಸೆ-ಆಕಾಂಕ್ಷೆಗಳನ್ನು, ಹತಾಶೆಗಳನ್ನು , ಸೋಲು-ಗೆಲುವುಗಳನ್ನು, ಪರಸ್ಪರ ಸಂಘರ್ಷಗಳನ್ನು, ನಿಸರ್ಗ-ಮಾನವರ ನಡುವಿನ ಸಂಬಂಧದ ಸ್ವರೂಪ, ಮನುಷ್ಯನ ಸ್ವಾರ್ಥ-ದುರಾಸೆ ಜಾತಿ ವೈಶಮ್ಯಗಳನ್ನು ಚಿತ್ರವನ್ನಾಗಿಸುವ ಅನುಭವ ಶ್ರೀಮಂತಿಕೆಯನ್ನು ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಇವರ ಕಥೆ-ಕಾದಂಬರಿಗಳು ಅಭಿವ್ಯಕ್ತಗೊಳಿಸುವ ಜೀವಂತ ಅನುಭವ ಯಾವ ತಂತ್ರ ವಿನ್ಯಾಸವನ್ನು ಅವಲಂಬಿಸಿದೆ ಎಂಬುದನ್ನು ಪ್ರಸ್ತುತ ಇಲ್ಲಿ ಚರ್ಚಿಸಲಾಗುತ್ತದೆ.

ಇಬ್ಬರೂ ಲೇಖಕರಲ್ಲೂ ಸಾಮಾನ್ಯವಾಗಿ ಬಳಕೆಯಾಗಿರುವ ತಂತ್ರ ವಿನ್ಯಾಸಗಳ ಜೊತೆಗೆ ವಿಶಿಷ್ಟವಾಗಿ ಬಳಕೆಯಾಗಿರುವ ಇತರ ತಂತ್ರಗಳನ್ನು ಅಧ್ಯಯನಕ್ಕೊಳಪಡಿಸಿ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

## ೮.೩.೧. ಪ್ರಯಾಣ :

ಕುವೆಂಪು ಹಾಗೂ ತೇಜಸ್ವಿ ಅವರು ತಂತ್ರವಾಗಿ ಬಳಕೆ ಮಾಡುವ 'ಪ್ರಯಾಣ'ಕಲ್ಪನೆ ಕಾದಂಬರಿಯ ವಸ್ತುವಿನ ದೃಷ್ಟಿಯಿಂದ ವಿಶಿಷ್ಟ ವಿಸ್ತಾರವನ್ನು ಪಡೆದುಕೊಳ್ಳುತ್ತದೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಹಾಗೂ 'ಕಾನೂರು ಹೆಗ್ಗಡಿತಿ' ಎರಡೂ ಕಾದಂಬರಿಗಳಲ್ಲಿ 'ಪ್ರಯಾಣ' ಪ್ರಧಾನ ಭಿತ್ತಿ ಆಗಿದ್ದು, ಕಥೆಗೆ ಬಂಧವನ್ನು ಒದಗಿಸುತ್ತದೆ. ಮದುಮಗಳಲ್ಲಿನ ಗುತ್ತಿಯ ಪ್ರಯಾಣದಷ್ಟು ವ್ಯಾಪಕವಲ್ಲದಿದ್ದರೂ ದ್ವಿತೀಯಾರ್ಧದಲ್ಲಿನ ಸುಬ್ಬಣ್ಣ ಹೆಗ್ಗಡೆಯವರ ಪ್ರಯಾಣವು ಕಥೆ ಏಕಸೂತ್ರತೆಯನ್ನು ಹಿಡಿಯುವ ಜೊತೆಗೆ ಆ ಪಾತ್ರದ ಆಂತರಿಕ ವಿಕಾಸಕ್ಕೂ ಪೂರಕವಾಗಿ ಕಾದಂಬರಿಯ ಆಶಯಕ್ಕೊಂದು ಹೊಸ ತಿರುವು ಕೊಟ್ಟು ಅಷ್ಟೇ ಪ್ರಮುಖವಾಗುತ್ತದೆ. 'ಹೆಗ್ಗಡಿತಿ'ಯ ಕಥೆಯ ಆರಂಭವೂ ಸಾಂಕೇತಿಕ ಪ್ರಯಾಣದಿಂದಲೇ ಆಗುತ್ತದೆ. ಹೂವಯ್ಯ ಮತ್ತು ರಾಮಯ್ಯ ತಾವು ಹುಟ್ಟಿ ಬೆಳೆದ ಪ್ರದೇಶಕ್ಕೆ ಮತ್ತೆ ಹಿಂದಿರುಗುತ್ತಿರುವುದರೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಹಾಗೆಯೇ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ, ಸಿಂಭಾವಿ ಭರಮೈ ಹೆಗ್ಗಡೆಯವರ ಆಳು ನಾಯಿಗುತ್ತಿ ಯಾವುದೋ ಕಾರ್ಯಾರ್ಥವಾಗಿ ಸನ್ನದ್ಧವಾಗಿ ಹೊರಡುತ್ತಿರುವ ಸಂದರ್ಭದಿಂದ ಆರಂಭವಾಗುತ್ತದೆ.

ಈ 'ಚಲನೆ' ಕಾದಂಬರಿಯ ಬೆಳವಣಿಗೆಗಳಿಗೆ ಪೂರಕವಾಗಿ ಮುಂದಿನ ಘಟನೆಗಳಿಗೆ ಕಾರ್ಯಕರಣ ಸಂಬಂಧವಾಗಿ ಬಿಂಬಿತವಾಗಿದೆ. ಒಂದು ಚಲನೆಯ ಮೂಲಕ ರೂಪಾಂತರ ಆಗುವ ದೃಷ್ಟಿಯನ್ನು ಕಾದಂಬರಿ ಹಿಡಿಯುತ್ತದೆ. 'ಜೀವಂತಿಕೆಯ ಲಕ್ಷಣವೇ ಚಲನಶೀಲತೆ' ಅನ್ನುವುದನ್ನು ಕಾದಂಬರಿಗಳು ಬಿಂಬಿಸುತ್ತವೆ.

'ಚಲನಶೀಲತೆ' ಎಂಬುದು ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥನಗಳಲ್ಲಿ ಬಹುಮುಖ್ಯ ಅಂಶ. ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಗುತ್ತಿ ಸಿಂಬಾವಿ ಭರಮೈ ಹೆಗ್ಗಡೆಯವರ ಮನೆಯಿಂದ ತನ್ನ ಪ್ರೇಯಸಿ ತಿಮ್ಮಿಯನ್ನು ಪಡೆಯಲು 'ಪ್ರಯಾಣ' ಆರಂಭಿಸುವುದರೊಂದಿಗೆ ಪ್ರಾರಂಭವಾಗುತ್ತದೆ. ಅಲ್ಲದೇ ಇಡೀ ಕಾದಂಬರಿಯಲ್ಲಿ 'ಪ್ರಯಾಣ'ದ ಮೂಲಕ ಗುತ್ತಿ ಮಲೆನಾಡಿನ ಬದುಕಿನ ಮಗ್ಗುಲುಗಳನ್ನು ಅನಾವರಣಗೊಳಿಸುತ್ತ ಸಾಗುತ್ತಾನೆ.

ಹಾಗೆಯೇ ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲೂ ರಾಮಯ್ಯ ಹೂವಯ್ಯ ಆಧುನಿಕ ಶಿಕ್ಷಣ ಪಡೆದು ರಾಮತೀರ್ಥದೆಡೆ ಕಲ್ಲು ಸಾರದ ಮೇಲೆ ಮಲೆನಾಡಿಗೆ ಹಿಂತಿರುಗುವ ಪ್ರಯಾಣದೊಂದಿಗೆ ಆರಂಭವಾಗುತ್ತದೆ. ಈ ಪ್ರಯಾಣದ ಪರಿಕಲ್ಪನೆ ಕುವೆಂಪುರವರಲ್ಲಿ ಕಾದಂಬರಿಯ ತಂತ್ರವಾಗಿ ಅಷ್ಟೇ ಅಲ್ಲದೇ ದಾರ್ಶನಿಕ ಆಯಾಮ ಪಡೆದುಕೊಳ್ಳುತ್ತದೆ.

"ಚಲನೆ ಪರಿವರ್ತತೆ ಕುವೆಂಪು ಸಾಹಿತ್ಯದ ಬಹಳ ಮುಖ್ಯವಾದ ದಾರ್ಶನಿಕ ಆಶಯ. ಕಾದಂಬರಿಯಲ್ಲಿ ಏನು ಪ್ರಯಾಣ ಇದೆ. ಗುತ್ತಿ ಎಲ್ಲೆಲ್ಲಿ ಹೋಗುತ್ತಾನೆ ಅಂತ ಮ್ಯಾಪ್ ಮಾಡಿದರೆ ಎಲ್ಲಾ ಪಾತ್ರಗಳು ಚಲನಶೀಲ ಸ್ಥಿತಿಯಲ್ಲಿರುತ್ತವೆ. ಇಲ್ಲಿ ಪ್ರಯಾಣ ಅನ್ನುವುದು ಒಂದು ಸ್ಥಳದಿಂದ ಸ್ಥಳಕ್ಕೆ ದೇಹದ ಚಲನೆ ಮಾತ್ರವಲ್ಲ. ಅದು ಆಧ್ಯಾತ್ಮಿಕ ಪ್ರಯಾಣ ಕೂಡ" (ರಹಮತ್ ತರೀಕೆರೆ (ಸಂ), ಮಲೆಗಳಲ್ಲಿ ಮದುಮಗಳು ಸಾಂಸ್ಕೃತಿಕ ಮುಖಾಮುಖಿ, ಪುಟ ೧೬೪)ಎಂಬ ರಹಮತ್ ತರೀಕೆರೆ ಅವರ ಮಾತುಗಳನ್ನು ಉಲ್ಲೇಖಿಸುವುದು ಔಚಿತ್ಯ ಪೂರ್ಣವಾಗಿದೆ.

ಮನುಷ್ಯನ ಜೀವನದ ಜಡತ್ವಕ್ಕೆ ಈ ಬಗೆಯ 'ಚಲನೆ' ಅಗತ್ಯತೆಯನ್ನು ದಾರ್ಶನಿಕವಾಗಿ ಹೇಳುವ ಜೊತೆಗೆ ಕಾದಂಬರಿಯನ್ನು ವಿನ್ಯಾಸಗೊಳಿಸುವ ಕಥೆಗೆ ಅಂತರ ಸಂಬಂಧ ಬೆಸೆಯುವ ದಿಸೆಯಲ್ಲಿ ಮಾಡಿದ್ದಾರೆ ಗುತ್ತಿ ತನ್ನ ಮತ್ತು ಒಡೆಯರ ಕಾರ್ಯಾರ್ಥವಾಗಿ ಪ್ರಯಾಣ ಹೊರಟಿದ್ದಾನೆ. ಅದರಲ್ಲೂ ಮುಖ್ಯವಾಗಿ ಅವನ ಪ್ರಯಾಣದ ಉದ್ದೇಶ, ತನ್ನನ್ನು ಒಲಿದಿರುವ ತಿಮ್ಮಿಯನ್ನು ಅವಳ ವಿಷಮ ಪರಿಸ್ಥಿತಿಯಿಂದ ಪಾರುಮಾಡುವುದು. ಪರಿಸರದ ಒತ್ತಡದಿಂದ ಆಕೆ ಬಚ್ಚನನ್ನು ಮದುವೆಯಾಗಬೇಕಾದ ಅನಿವಾರ್ಯತೆಯಿಂದ ಹೊರಕರೆತರುವುದು. ಆದರೆ ಕಾದಂಬರಿಕಾರರು ಈ 'ಪ್ರಯಾಣ'ದ ಜೊತೆಯಲ್ಲಿ ಮಲೆನಾಡಿನ ಬದುಕಿನ ವಾಸ್ತವ ಪ್ರಣಯ ಸಂಬಂಧಗಳ ಚಿತ್ರಣವನ್ನು ಅನಾವರಣಗೊಳಿಸುತ್ತಾರೆ. ಮಲೆನಾಡಿನ ಸಮಾಜದ ವಿವಿಧ ಸ್ತರಗಳ ಸಂಬಂಧದ ಚಿತ್ರಣವನ್ನು ನೀಡುತ್ತಾರೆ. 'ಪ್ರಯಾಣ' ಇಡೀ ಕಾದಂಬರಿಯ ವಿವಿಧ ಪಾತ್ರಗಳ ಜೊತೆ ಒಂದು ಬಂಧವನ್ನು ಏರ್ಪಡಿಸುತ್ತಾ ಕಥನವನ್ನು ಜೊತೆ ಜೊತೆಯಲ್ಲಿಯೇ ಕೊಂಡೊಯ್ಯುವ ತಂತ್ರವಾಗಿದೆ.

ಈ ಪ್ರಯಾಣ ಕಲ್ಪನೆ ತೇಜಸ್ವಿಯವರ ಕಥನದಲ್ಲೂ ಮುಂದುವರೆದಿರುವುದು ನಿಜಕ್ಕೂ ಅಚ್ಚರಿ. ತೇಜಸ್ವಿ ಅವರ ಕರ್ವಾಲೋ ಕಾದಂಬರಿ ಹಾರುವ ಓತಿಯ ಅನ್ವೇಷಣೆಗೆ ತೊಡಗುವ 'ಪ್ರಯಾಣ' ಕಾದಂಬರಿಯುದ್ದಕ್ಕೂ ಸಾಗುತ್ತದೆ. ಹಾಗೂ

ಪರಿಸರದ ಅಚ್ಚರಿಗಳನ್ನು ಕೆದಕುತ್ತಾ ಬೆದಕುತ್ತಾ ಸಾಗುತ್ತದೆ. ಪ್ರಯಾಣದ ಸಂದರ್ಭದ ಸಣ್ಣ ಸಣ್ಣ ವಿವರಗಳೂ ಅವು ಬದುಕನ್ನು ಗ್ರಹಿಸುವ ಕ್ರಮವನ್ನು ಓದುಗರಿಗೆ ತಿಳಿಸಿಕೊಡುತ್ತದೆ. ಇಲ್ಲಿನ ಪ್ರಪಂಚದ ಮಂದಣ್ಣ, ಬಿರಿಯಾನಿ ಕರಿಯಪ್ಪ ಅವರ ಜೀವನಧರ್ಮ ಬದುಕುವ ಶೈಲಿ, ಧೋರಣೆಗಳು, ಶಿಕಾರಿಯ ಜಾಣ್ಮೆ, ಕಾಡಿನೊಂದಿಗಿನ ಅವರ ಗಾಢ ಸಂಬಂಧ ಎಲ್ಲವನ್ನೂ ಅನಾವರಣಗೊಳಿಸುತ್ತಾ ಸಾಗುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ, ಕೆಸರೂರು ಹೈಬ್ರೀಡ್ ಏಲಕ್ಕಿಯ ಶೋಧಕ್ಕೆ ತೊಡಗುವ ಪ್ರಯಾಣ ಇಡೀ ಊರಿನ ಅವನತಿಯ ಸಾಂಸ್ಕೃತಿಕ ಅರ್ಥ ಪತನವನ್ನು ಬಿಂಬಿಸುವಲ್ಲಿ ಇಡೀ ಕಾದಂಬರಿಯ ಕೇಂದ್ರಭಿತ್ತಿ ಆಗಿದೆ. ಅದೇ ರೀತಿ 'ಜುಗಾರಿ ಕ್ರಾಸ್' ಕಾದಂಬರಿಯಲ್ಲಿ ಗೌರಿ ಮತ್ತು ಸುರೇಶ ಏಲಕ್ಕಿ ಮೂಟೆಗಳನ್ನು ಹೊತ್ತು ಮಾರುಕಟ್ಟೆಗೆ 'ಪ್ರಯಾಣ' ಬೆಳೆಸುತ್ತಾರೆ. ಕಾದಂಬರಿಯುದ್ದಕ್ಕೂ ಸಾಗುವ ಪ್ರಯಾಣದ ಜೊತೆಗೆ ದೋಣಿ ಹೊಳೆ, ದೇವಪುರದ ಅಂತರಂಗ ದರ್ಶನ ಮಾಡಿಸುತ್ತಾರೆ. ಮೇದರ ಹಳ್ಳಿಯ ಸಂಸ್ಕೃತಿ ಅವಸಾನ, ಜುಗಾರಿಕ್ರಾಸ್‌ನ ಕರಾಳ ಕಬಂಧ ಬಾಹುಗಳು ಭ್ರಷ್ಟಚಾರ, ಕಳ್ಳಸಾಗಾಣಿಕೆ ಎಲ್ಲದರ ದರ್ಶನ ಮಾಡಿಸುತ್ತಾರೆ.

'ಜುಗಾರಿ ಕ್ರಾಸ್'ನ ಈ ತಂತ್ರವನ್ನು ತೇಜಸ್ವಿ ಪಡೆದಿದ್ದು ಮಲೆಗಳಲ್ಲಿ ಮದುಮಗಳಿಂದಲೇ. ತಂತ್ರ ಹಾಗೂ ವಸ್ತುವಿನ ದೃಷ್ಟಿಯಿಂದ ವಿಶಿಷ್ಟತೆ ಪಡೆದುಕೊಳ್ಳುವ ಈ ಅಂಶಗಳು ಇಬ್ಬರಲ್ಲೂ ಕಂಡುಬರುವ ಸಾಮ್ಯ ಅಂಶಗಳಾಗಿವೆ.

'ಮಲೆಗಳಲ್ಲಿ ಮದುಮಗಳು' ಹಾಗೂ 'ಚಿದಂಬರ ರಹಸ್ಯ'ಗಳಲ್ಲಿ ಚಿತ್ರಿತವಾಗಿರುವ ಸಾಮಾಜಿಕ ವಾಸ್ತವ, ಶ್ರೇಣಿಕೃತ ವ್ಯವಸ್ಥೆಗಳನ್ನು ಗಮನಿಸಿದಾಗ ಇಬ್ಬರಲ್ಲೂ ವಿರುದ್ಧ ಚಲನೆಯನ್ನು ಗಮನಿಸಬಹುದು. ತೇಜಸ್ವಿಯವರು ವೈಚಾರಿಕವಾಗಿ ಸಂರಚನೆಯಾದ ಮಲೆನಾಡಿನ ಹಳ್ಳಿಯ ಬದಕನ್ನು ತೆರೆದಿಟ್ಟರೆ, ಕುವೆಂಪು ಮೂರ್ತವಾಸ್ತವದಲ್ಲಿ ಹುಟ್ಟಿದ ಜಾತಿ ವ್ಯವಸ್ಥೆ ದಟ್ಟವಾಗಿರುವ ಮಲೆನಾಡಿನ ಹಳ್ಳಿಯ ಬದುಕನ್ನು ಚಿತ್ರಿಸುತ್ತಾರೆ. ಕುವೆಂಪು ಕೃತಿಗಳಲ್ಲಿನ ಕಲಾದೃಷ್ಟಿಯಿಂದ ಪ್ರಭಾವಿತವಾಗಿರುವ ತೇಜಸ್ವಿ, ತಮ್ಮ ಕೃತಿಗಳಲ್ಲಿ ಸನ್ನಿವೇಶ ಸೃಷ್ಟಿ, ಘಟನಾವಳಿಗಳ ಜೋಡಣೆ, ಸಂವಿಧಾನಶಕ್ತಿ, ಪಾತ್ರ ನಿರ್ಮಾಣ ಇವುಗಳ ಜೊತೆಗೆ ನಿರೂಪಣೆಯ ತಂತ್ರಗಳಿಂದ ಅವುಗಳನ್ನು ಸಶಕ್ತವಾಗಿ ಬಳಕೆ ಮಾಡಿದ್ದಾರೆ.

ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ 'ಪ್ರಯಾಣ'ದ ಅಂಶವನ್ನು ಕಾದಂಬರಿಯ ತಂತ್ರವಾಗಿ ಬಳಕೆ ಮಾಡುವುದ ಔಚಿತ್ಯ ಗಮನಿಸಬೇಕು. 'ಕಾನೂರು ಹೆಗ್ಗಡಿತಿ' ಐನೂರು ತೊಂಬತ್ತು ಪುಟಗಳಲ್ಲಿ ಮಲೆನಾಡಿನ ಬದುಕನ್ನು ಕಟ್ಟಿಕೊಡುವ ಕಾದಂಬರಿ. ಇಡೀ ಕಾದಂಬರಿಯ ಪ್ರಾದೇಶಿಕ ಸ್ಥಳಗಳ ಹರವು ವಿಸ್ತೃತವಾದದು. ಆಗುಂಬೆ, ಮೇಗರವಳ್ಳಿ, ತೀರ್ಥಹಳ್ಳಿ, ಕುರುವಳ್ಳಿ, ಮುತ್ತಳ್ಳಿ, ಸೀತೆಮನೆ, ಕಾನೂರು, ಕೆಳಕಾನೂರು ಕೊಪ್ಪ ಹೀಗೆ ಈ ಸ್ಥಳಗಳ ಸುತ್ತ-ಮುತ್ತ ನಡೆಯುವ ಪ್ರಾದೇಶಿಕ ವಿಚಾರಗಳನ್ನು ಒಳಗೊಂಡಿದೆ. ಪ್ರತಿ ಊರಿನಲ್ಲಿಯೂ ಅವರ ಕುಟುಂಬದ ಜೊತೆಗೆ ನೆಂಟರಿಷ್ಟರು ಜೀತದಾಳುಗಳು ಅವರ ಕೌಟುಂಬಿಕ ಸಾಮಾಜಿಕ ಪರಿಸರಗಳ ವರ್ಣನೆ ಕಾದಂಬರಿಯಲ್ಲಿ ಮೂಡಿಬಂದಿದೆ. ಈ ಹಲವಾರು ಊರುಗಳ ನಡುವೆ ಒಂದು 'ಬಂಧ' ಏರ್ಪಡಿಸುವುದು 'ಪ್ರಯಾಣ'.

ಅಲ್ಲದೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯೂ ಮಲೆನಾಡಿನ ಹಲವು ಕುಟುಂಬಗಳ ನಡುವೆ ನಡೆಯುವ ಸಂಘರ್ಷವನ್ನು ತಿಳಿಸುತ್ತದೆ. ಇದು ಸಿಂಭಾವಿ, ಲಕ್ಕುಂದ, ಸೀತೂರು, ಮೇಗರವಳ್ಳಿ, ಕೋಣೂರು, ಬೆಟ್ಟಳ್ಳಿ ಹೀಗೆ ಹಲವಾರು ಪ್ರದೇಶಗಳ ಕುಟುಂಬಗಳಿಗೆ ಹರಡಿಕೊಂಡಿದೆ. ಇಲ್ಲೂ ಪ್ರಯಾಣ ಕಥೆಗೆ ಪೂರಕವಾಗಿ ಬಳಕೆಯಾಗಿದ್ದು, ಪ್ರಧಾನ ಪಾತ್ರವಹಿಸುವುದು ಗಮನಾರ್ಹ.

ಗುತ್ತಿಯ ಪ್ರಯಾಣದ ಜೊತೆ-ಜೊತೆಗೆ ಇಡೀ ಕಾದಂಬರಿಯಲ್ಲಿ ಪ್ರತಿಯೊಂದು ಕುಟುಂಬದ ಹಾಗೂ ಜೀತದಾಳುಗಳ ಜೀವನ ಚಿತ್ರ ತೆರೆದುಕೊಳ್ಳುತ್ತಾ ಹೋಗುತ್ತದೆ. ಆ ಮೂಲಕ ಇಡೀ ಮಲೆನಾಡಿನ ಬದುಕಿನ ನೈಜ ಚಿತ್ರಣವನ್ನು ಕಟ್ಟಿಕೊಡಲು 'ಪ್ರಯಾಣ'ವನ್ನು ಬಿಟ್ಟು ಇನ್ಯಾವುದರಿಂದ ಸಾಧ್ಯವಿಲ್ಲ ಎಂಬ ಅಂಶವನ್ನು ಕುವೆಂಪು ಗ್ರಹಿಸಿದ್ದರು. ಆದ್ದರಿಂದಲೇ ಅವರು ತಮ್ಮ ಕಾದಂಬರಿಯಲ್ಲಿ ಈ ತಂತ್ರವನ್ನು ಬಳಕೆ ಮಾಡಿದ್ದಾರೆ. ಇದು ಅನಿವಾರ್ಯವೂ ಆಗಿತ್ತು. ಆದರೂ ಅವರ 'ಪ್ರಯಾಣ'ದ ಅಂಶ ಎಲ್ಲಾ ಕಾದಂಬರಿಗಳ ತಂತ್ರ ಎನ್ನಿಸದೆ ಕಾದಂಬರಿಯ ಘಟನೆಗಳಿಗೆ, ಸನ್ನಿವೇಶಗಳಿಗೂ ಪೂರಕವಾಗಿ ಸಹಜವಾಗಿ ಮೂಡಿ ಬಂದಿರುವುದು ಕುವೆಂಪುರವರ ಪ್ರತಿಭೆಗೆ ಸಾಕ್ಷಿಯಾಗಿದೆ.

ತೇಜಸ್ವಿ ಅವರು ಕುವೆಂಪುರವರ ಈ ತಂತ್ರದಿಂದ ಪ್ರೇರಿತರಾಗಿರುವುದು ಸಹಜ. ತೇಜಸ್ವಿ ಕೃತಿಗಳು ಗಾತ್ರದ ದೃಷ್ಟಿಯಿಂದ ಕಿರಿದಾದರೂ ಕಥನ ತಂತ್ರವಾಗಿ 'ಪ್ರಯಾಣ'ವನ್ನು ತಂದಿರುವುದನ್ನು ಕಾಣಬಹುದು. ಇದರ ಉದ್ದೇಶ, ಔಚಿತ್ಯ

ಕುರಿತು ಚರ್ಚಿಸುವುದು ಅಗತ್ಯ ಎನಿಸುತ್ತದೆ. ತೇಜಸ್ವಿ ಮೂಲತಃ ಕುತೂಹಲ ಪ್ರವೃತ್ತಿಯವರು. ಪ್ರತಿಯೊಂದು ರಹಸ್ಯವನ್ನು ಕೆದಕುತ್ತಾ ಬೆದಕುತ್ತಾ ನಿಗೂಢವನ್ನು ಭೇದಿಸಹೊರಡುವುದು ಇವರ ಬಹುತೇಕ ಎಲ್ಲಾ ಕಾದಂಬರಿಗಳ ಅಡಿಪಾಯ. ಅದಕ್ಕೆ ಇಂಬುಕೊಡುವಂತೆ ಅವರ ಸ್ವಚ್ಛಂದ ಮನಸ್ಥಿತಿಯೂ. ಸ್ವಾತಂತ್ರ್ಯದ ಉತ್ಕಟ ಅಭೀಪ್ಸೆ ಇವರ ಕೃತಿಗಳಲ್ಲಿ ವ್ಯಕ್ತವಾಗಿವೆ. ಈ ಬಗೆಯ ಕಥನ ವಸ್ತುವನ್ನು ನಿರ್ವಹಿಸುವ ನಿಟ್ಟಿನಲ್ಲಿ ಈ ಪ್ರಯಾಣ ಕಲ್ಪನೆ ತೇಜಸ್ವಿಯವರ ಕಥನದಲ್ಲೂ ಮುಂದುವರೆದಿದೆ.

ತೇಜಸ್ವಿ ಮೂಲತಃ ಚಲನಶೀಲ ಪ್ರವೃತ್ತಿಯವರು. ಅವರ ಕಾದಂಬರಿ. ಕತೆಗಳಲ್ಲಿ ಕೌಟುಂಬಿಕ ಜೀವನ ಚಿತ್ರಣ ಕಾಣುವುದೇ ಇಲ್ಲ. ಕುಟುಬಂದೊಳಗಣ ಸನ್ನಿವೇಶಗಳನ್ನು ಗುರುತಿಸುವುದು ಸಾಧ್ಯವೇ ಇಲ್ಲ. ಬಹುಷಃ ಇದಕ್ಕೆ ಮುಖ್ಯ ಕಾರಣ ಅವರ 'ಚಲನಶೀಲ ಪ್ರವೃತ್ತಿ'. ಸಾಮಾನ್ಯವಾಗಿ ಇವರ ಕತೆ, ಕಾದಂಬರಿಗಳೆಲ್ಲ ಕುಟುಂಬದಾಚೆಗಿನ ಹೊರ ಜಗತ್ತಿನ ಕಥಾನಕಗಳೇ ಆಗಿವೆ. ಸ್ವಂಚ್ಛಂದ ಬದುಕಿನ ಅಭೀಪ್ಸೆ, ಆಕಾಂಕ್ಷೆ, ಬದುಕು ಸದಾ ಕ್ರಿಯಾಶೀಲವಾಗಿರಬೇಕು ಎಂಬ ಆಶಯ ಇವರ ಎಲ್ಲಾ ಕೃತಿಗಳಲ್ಲೂ ಕಂಡು ಬರುವ ಸಾಮಾನ್ಯ ಅಂಶವಾಗಿದೆ. ಹಾಗಾಗಿ ಪ್ರಯಾಣವನ್ನು ತಮ್ಮ ಕಥನತಂತ್ರವಾಗಿ ಬಳಕೆ ಮಾಡಿದ್ದಾರೆ.

"ಕತ್ತಲು ಕವಿಯುವುದಕ್ಕೆ ಮೊದಲು ಕೊನೆಯದಾಗಿ ಒಂದು ಕ್ರೌಂಚ ಪಕ್ಷಿಗಳ ಸಾಲು ಸೋಮುವಿನ ಮನಸ್ಸನ್ನು ಸೆಳೆಯಿತು. ಗುರಿಯಿಟ್ಟು, ಸೂರ್ಯ ಮುಳುಗಿದ ಕಡೆಗೆ ನೇರವಾಗಿ ಕತ್ತರ ರಥ ಎಳೆದು ಒಯ್ಯುವಂತೆ ಸಾಲಾಗಿ ವಂಕಿಮ ವಂಕಿಮವಾಗಿ ಹಾರಿ ಹೋಗುತ್ತಿದ್ದವು. ವರ್ಷ ಋತು ಮುಗಿದುದನ್ನು ಕಂಡು ಅವು ಮತ್ತೆ ತಾವು ಸುಖವಾಗಿರಬಲ್ಲಂಥ ಆ ಋತು ಇರುವಲ್ಲಿಗೆ, ಕಡಲಾಚೆಗೆ, ಧ್ರುವದಿಂದ ಧ್ರುವಕ್ಕೆ ಹೊರಟಿದ್ದವು.

ಬರಿಯ ದೇಶ ಬದಲಿಸುವುದರ ಮೂಲಕ ಕಾಲಕ್ಕೇ ಅತೀತವಾಗಿದ್ದವು. ಅವು ಇರುವಲ್ಲಿ ಸದಾ ಒಂದೇ ಋತು. ಉಕ್ಕಿ ಹರಿಯುವ ಹೊಳೆ. ಚಿಮ್ಮಿನೆಗೆಯುವ ಮೀನು, ಹರಿದ್ವರ್ಣದ ಪೈರು ಪಚ್ಚೆ, ಸೋಮು ಅದನ್ನೇ ನೋಡುತ್ತಿದ್ದ ಹಾರಿಹಾರಿ ಕೊನೆಗೆ ಶೂನ್ಯವಾದುವು. ಎಲ್ಲಿಂದಲೋ ಅವನ್ನು ಹಿಡಿಯಲು ಬೀಸಿದ ಬಲೆಯಂತೆ ಕತ್ತಲು ಬಂದು ಕವಿಯಿತು.

ಅಬ್ಬಾ ! ಆ ಹಕ್ಕಿಗಳ ಬಯಕೆ ಎಂಥದು. ಸಪ್ತ ಸಮುದ್ರಗಳನ್ನೇ ದೇಶಾಂತರಗಳನ್ನೇ ದಾಟಿ ಸಾಗುತ್ತವಲ್ಲ. ಬಯಕೆ ಪ್ರೇಮದ ಆರಂಭ, ತೃಪ್ತಿ ಪ್ರೇಮದ ಅಂತ್ಯವೇ ? ಪ್ರೇಮಿಸೋದೆಂದರೆ ಚಲಿಸುವುದು. ಕಾಲದಲ್ಲೋ ದೇಶದಲ್ಲೋ ಕಾಲದೇಶಗಳಿಗೆ ಮೀರಿದ ಅತೀತದಲ್ಲೋ ಚಲಿಸುವುದು. ಒಂದರಿಂದ ಇನ್ನೊಂದಕ್ಕೆ ಹೋಗುವುದು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕಾಡು ಮತ್ತು ಕ್ರೌರ್ಯ.೨೦೧೩, ಪುಟ ೧೯)

ಈ ಸಾಲುಗಳು ಚಲನೆಯ ಬಗೆಗೆ ತೇಜಸ್ವಿ ಅವರ ಧೋರಣೆ ಅಭೀಪ್ಸೆಯನ್ನು ತಿಳಿಸುತ್ತದೆ. ಈ ಚಲನಶೀಲ ಗುಣಕ್ಕೆ ಮುಖ್ಯ ಪ್ರೇರಣೆ 'ಪಕ್ಷಿಗಳು'. ಅವುಗಳಲ್ಲಿ ಈ ಗುಣ ಅವುಗಳ ಚೈತನ್ಯಶೀಲತೆಯ ಸಂಕೇತ. ಈ ಗುಣ ಹಾಗೂ ಬಯಕೆ ತೇಜಸ್ವಿ ಅವರ ಎಲ್ಲಾ ಕಾದಂಬರಿ ಕತೆಗಳಲ್ಲೂ ವ್ಯಕ್ತವಾಗಿವೆ. ಪ್ರಕೃತಿಯ ಅಚ್ಚರಿಗಳನ್ನು, ನಿಗೂಢಗಳನ್ನು ರಹಸ್ಯವನ್ನು ಅರಿಯಲು ಉತ್ಕಟ ಹಂಬಲ ಇರುವ ತೇಜಸ್ವಿ ಈ ಚಲನಶೀಲನೆ ಯನ್ನು ಸಾಕಾರಗೊಳಿಸುವಂತೆ 'ಪ್ರಯಾಣ'ದ ಅಂಶವನ್ನು ತರುತ್ತಾರೆ. ಮನುಷ್ಯನ ನಿಷ್ಕ್ರಿಯೆಗಳಿಗೆ ಈ ಚಲನೆ ಕ್ರಿಯಾಶೀಲತೆ ತರುತ್ತದೆ. ತೇಜಸ್ವಿ ಅವರ ಕಥೆಗಳಲ್ಲಿ, ಕಾದಂಬರಿಗಳಲ್ಲಿನ ಈ ಪ್ರಯಾಣವು ಯಾವುದಾದರೊಂದು ನಿಗೂಢದ ಶೋಧದ ರೂಪದಲ್ಲಿ ಪ್ರಕಟವಾಗುತ್ತವೆ. ನಿಗೂಢತೆಯೊಂದನ್ನು ಭೇದಿಸಲು ಶೋಧನೆಗೆ ತೊಡಗುವುದರಿಂದ ತೇಜಸ್ವಿ ಅವರ ಕಥನಗಳು ಪತ್ತೆದಾರಿಕೆ ತಂತ್ರಕ್ಕೆ ಒಳಪಡುತ್ತದೆ.

ಕರ್ವಾಲೋ ಕಾದಂಬರಿಯಲ್ಲಿ 'ಹಾರುವ ಓತಿ'ಯ ಅನ್ವೇಷಣೆಗೆ ತೊಡಗುವ ಪ್ರಯಾಣ. ಚಿದಂಬರ ರಹಸ್ಯದಲ್ಲಿ 'ಹೈಬ್ರೀಡ್ ಏಲಕ್ಕಿ ತಳಿ'ಯ ಶೋಧಕ್ಕೆ ತೊಡಗುವ ಪ್ರಯಾಣ, ಮಾಯಾಲೋಕದಲ್ಲಿ 'ಝರಿಯ ಮೂಲ'ವನ್ನು ಅರಸುತ್ತಾ ಸಾಗುವ ಯಾನ. ಈ ಎಲ್ಲ ಯಾನಗಳ ಜೊತೆ-ಜೊತೆಗೆ ತೆರೆದುಕೊಳ್ಳುವ ಅಚ್ಚರಿ. ಅಧ್ಯಾತ್ಮಿಕ ರೂಪಪಡೆದುಕೊಳ್ಳುತ್ತವೆ. ಕಥೆಯ ಜೊತೆಗೇ ಸಾಗುವ ಹುಡುಕಾಟ ವೈಚಾರಿಕತೆಯ ಹುಡುಕಾಟ, ಸ್ವಾತಂತ್ರ್ಯದ ಸ್ವಚ್ಛಂದ ಬದುಕಿನ ಹುಡುಕಾಟವಾಗಿದೆ. ವಸ್ತು-ತಂತ್ರ ಮತ್ತು ಅಭಿವ್ಯಕ್ತಿಯ ಏಕತಾನತೆಯ ಆಚೆಗೆ ಹುಡುಕಾಟದ ಪ್ರಶ್ನೆಯ ನೆಲೆಗಳೇ ಪ್ರಧಾನವಾಗುವಂತೆ ತೇಜಸ್ವಿ ಅವರ ಪ್ರಯತ್ನಗಳು ಕಾಣುತ್ತವೆ.

ಹಾರುವ ಓತಿ ಅನ್ವೇಷಣೆಯ ಕೊನೆಗೆ ಅದನ್ನು ಗುರುತಿಸುತ್ತಾರೆ. ಜೀವ ವಿಕಾಸದಲ್ಲಿ ಸರೀಸೃಪಗಳು ರೆಕ್ಕೆ ಪುಕ್ಕಗಳು ಬೆಳೆಸಿಕೊಂಡು ಬಣ್ಣ ಬಣ್ಣದ ಪಕ್ಷಿ

ಸಂಕುಲ ಆಗಿ, ಮಂಗಗಳು ಭೂಮಿಗಿಳಿದು ದ್ವಿಪಾದಿಯಾಗಿ ಆಯುಧಗಳನ್ನು ಮಾಡಿ ಯಂತ್ರಗಳನ್ನು ಮಾಡಿ, ನಾಗರಿಕನಾಗಿ ಇಷ್ಟೆಲ್ಲಾ ಬದಲಾವಣೆಗಳಾದರೂ ಈ ಹಾರುವ ಓತಿ ಒಂದೇ ಏಕೆ ವಿಕಾಸ ಪಥದಲ್ಲಿ ಬದಲಾಗಲಿಲ್ಲ ಎಂಬ ನಿರೂಪಕ ಹಾಗೂ ಕರ್ವಾಲೋ ಜಿಜ್ಞಾಸೆ, ಅದಕ್ಕೆ ಅವರು ಕಂಡುಕೊಳ್ಳುವ ಉತ್ತರ ನಿಜಕ್ಕೂ ಅಚ್ಚರಿ ಎನಿಸುತ್ತದೆ.

"ಹಾರೋ ಪ್ರಯತ್ನದಲ್ಲಿ ಅದು ತಪ್ಪು ದಾರಿ ಹಿಡೀತು ಅಂತ ಕಾಣ್ತದೆ. ಕೈಗಳ ಬದಲು ಪಕ್ಕೆ ಉಪಯೋಗಿಸಿತು. ಅದಕ್ಕೆ ಅದು ಹಾಗೇ ಉಳೀತು. ಮಿಕ್ಕವು ರೆಕ್ಕೆ-ಪುಕ್ಕ ಬೆಳೆಸಿಕೊಂಡು ಹಕ್ಕಿ ಆಗಿಬಿಟ್ಟವು". ಎಂಬ ನಿರೂಪಕರ ಮಾತಿಗೆ, ಕರ್ವಾಲೋ ಅವರ ಪ್ರತಿಕ್ರಿಯೆ, 'ತಪ್ಪು ಸರಿ ಹೇಗೆ ಹೇಳ್ತೀರಿ, ನಮಗೆ ಈ ಕ್ಷಣ, ಇಲ್ಲಿ ಹೀಗನ್ನಿಸಿದೆ ಜೀವ ವಿಕಾಸಕ್ಕೆ ಎಲ್ಲಿದೆ ಕೊನೆ !" (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಕರ್ವಾಲೋ, ೨೦೦೯, ಪುಟ ೧೪೫) ಎಂಬ ಈ ಮಾತುಗಳಲ್ಲಿ ಪರಿಸರವನ್ನು ಸುಲಭವಾಗಿ ಅರ್ಥೈಸಿಕೊಳ್ಳುವುದು ಸಾಧ್ಯವಿಲ್ಲ. ನಾವು ಉತ್ತರ ಹುಡುಕಲು ಪ್ರಯತ್ನಿವಷ್ಟು, ಜೀವವಿಕಾಸದ ಪಥದಲ್ಲಿ ಅದರ ಸತ್ಯಾಸತ್ಯತೆ ಆ ಕ್ಷಣಕ್ಕೆ ಮಾತ್ರ ಸೀಮಿತ. 'ಊಹೆ' ಮಾತ್ರ ನಿಜವೆಂದು ಭಾವಿಸಲಾಗದು ಎಂಬ ಅಂಶವನ್ನು ಧ್ವನಿಸುತ್ತದೆ. ಹಾರುವ ಓತಿ ಇವರಿಗೆ ಸಿಕ್ಕಿ ತಪ್ಪಿಸಿಕೊಂಡು ಪ್ರಪಾತದ ಕಡೆಗೆ ಧುಮುಕಿ ಶೂನ್ಯದಲ್ಲಿ ಕರಗಿ ಹೋದ, ಅದರ 'ಪ್ರಯಾಣ' ಈ ಅಂಶವನ್ನೇ ಸೂಚ್ಯವಾಗಿಸುತ್ತದೆ. ಲೇಖಕರು ಮತ್ತು ಕರ್ವಾಲೋ ಅವರ ಈ ಪ್ರಯಾಣ ಜೀವ ವಿಕಾಸದ ಅವಸ್ಥಾಂತರಗಳನ್ನು ಭೇದಿಸುತ್ತಾ, ವಿವಿಧ ಜೀವಸಂಕುಲಗಳ ನಾಶ ಅವುಗಳ ರಕ್ಷಣೆಯ ಅಗತ್ಯತೆಯನ್ನು ಕಾಲದ ಅನಂತತೆಯಲ್ಲಿ ಇರುವ ಗೌಪ್ಯವನ್ನು ಭೇದಿಸ ಹೊರಡುವ ಮನುಷ್ಯನ ವ್ಯರ್ಥ ಪ್ರಯತ್ನಗಳ ಜಿಜ್ಞಾಸೆ ತೊಡಗುತ್ತದೆ. ಜೀವ ವಿಕಾಸದ ಪಥದಲ್ಲಿ ಬರಲಿರುವ ದಿನಗಳಲ್ಲಿ ಸ್ಥಗಿತಗೊಂಡ ಪ್ರಜ್ಞೆಯ ಜೀವಿಗಳು ಪಡೆಯಬಹುದಾದ ಸಾಧ್ಯತೆಯ ದರ್ಶನವನ್ನು ಈ ಪ್ರಯಾಣ ಧ್ವನಿಸುತ್ತದೆ.

ಈ ನಿಟ್ಟಿನಲ್ಲಿ ತಂದೆ ಮಕ್ಕಳಿಬ್ಬರ ಪ್ರಯಾಣದ ಪರಿಕಲ್ಪನೆ ಪ್ರಯೋಗಶೀಲತೆ ಹಾಗೂ ಸೃಜನಶೀಲತೆಯ ಹೊಸ ಸಾಧ್ಯತೆಯನ್ನು ಅನಾವರಣಗೊಳಿಸುತ್ತದೆ. ಹಾಗೂ ತಾತ್ತ್ವಿಕ ಜಿಜ್ಞಾಸೆಗೆ ಓದುಗರೂ ತೊಡಗುವಂತೆ ಮಾಡುತ್ತದೆ. ಹೊಸ ಅರ್ಥಗಳನ್ನು ಸ್ಫುರಿಸುತ್ತದೆ.

೮.೩.೨. ಪ್ರತಿಮೆ :

ಕವಿ ತನ್ನ ಭಾವನೆಗಳನ್ನು ಅನುಭವಗಳನ್ನು ಅಭಿವ್ಯಕ್ತಿಸಲು ಭಾಷೆಯನ್ನು ಮಾಧ್ಯಮವನ್ನಾಗಿ ಬಳಸುತ್ತಾನೆ. ಮೇಲ್ನೋಟಕ್ಕೆ ಆತ ಹೇಳುತ್ತಿರುವುದು ಒಂದಾದರೆ ಅದರ ಒಳಗಿನ ಅರ್ಥ ಬೇರೊಂದಾಗಿ ಪ್ರತೀತವಾಗುತ್ತದೆ. ಅದಕ್ಕೆ ಕಾರಣ ಅದು ಕವಿಯ ಅನುಭವದ ತೀವ್ರತೆಗೆ 'ಚಿತ್ರ'ಗಳ ಮೂಲಕ ಅಭಿವ್ಯಕ್ತಿಯನ್ನು ನೀಡುತ್ತದೆ. ಇದು ಯಾವುದೇ ಸಂಗತಿಗಳನ್ನು ನಿರೂಪಿಸುವ ಉದ್ದೇಶ ಮಾತ್ರವಾಗಿರದೆ ಕವಿಯ ಭಾವಾನುಭವಗಳನ್ನು 'ಶಬ್ದಚಿತ್ರ'ಗಳ ಮೂಲಕ ಸಂವಹನಗೊಳಿಸುವ ಉದ್ದೇಶವಾಗಿರುತ್ತದೆ. ಇದನ್ನೇ ಭಾರತೀಯ ಆಲಂಕಾರಿಕರು 'ಅಲಂಕಾರ'ವೆಂದು ಗುರ್ತಿಸಿದ್ದಾರೆ. ಈ ಉಕ್ತಿವೈಚಿತ್ರಗಳೇ ಕಾವ್ಯದ ಜೀವಾಳವೆಂದು ಹೇಳಿದ್ದಾರೆ.

"ಆಧುನಿಕ ಸಾಹಿತ್ಯ ನಿರ್ಮಿತಿಯ ಸಂದರ್ಭದಲ್ಲಿ ಇಮೇಜ್ ಎಂಬ ಮಾತೊಂದನ್ನು ವಿಶೇಷವಾಗಿ ಬಳಸಲಾಗುತ್ತದೆ. ಪಾಶ್ಚಾತ್ಯ ವಿಮರ್ಶೆಯ ಕ್ಷೇತ್ರದಲ್ಲಿ ವಿಶೇಷವಾಗಿ ಪ್ರಚಲಿತವಾಗಿರುವ ಈ 'ಇಮೇಜ್'ಎಂಬ ಪರಿಕಲ್ಪನೆಯನ್ನು ಉಪಮೆ, ರೂಪಕಗಳಂತೆಯೆ ಅಲಂಕಾರವೊಂದರ ನಿರ್ದೇಶನಕ್ಕೆ ಬಳಸಲಾಗುತ್ತಿತ್ತು. ಆದರೆ ಆಧುನಿಕ ಸಾಹಿತ್ಯ ವಿಮರ್ಶೆಯ ಸಂಧರ್ಭ ಇದು ಬೇರೆಯದೇ ಆದ ಅರ್ಥಗೌರವವನ್ನು ಪಡೆದುಕೊಂಡಿದೆ. 'ಇಮೇಜ್' ಎನ್ನುವುದು ಕಾವ್ಯಾಭಿವ್ಯಕ್ತಿಯ ಮೂಲ ತತ್ತ್ವ ಇಮೇಜ್ ಎಂಬುದು ಕಾವ್ಯಭಿವ್ಯಕ್ತಿಯ ಒಂದು ವಿಶಿಷ್ಟ ವಿಧಾನ. ಕವಿ ಇಮೇಜ್‌ಗಳ ಮೂಲಕ ತನ್ನನ್ನು ತಾನು ಅಭಿವ್ಯಕ್ತ ಪಡಿಸಿಕೊಳ್ಳುತ್ತಾನೆ. ಅನೇಕ ಇಮೇಜ್‌ಗಳು ಒಂದು ಕವಿತೆಯಾಗುತ್ತದೆ. ಒಂದು ಇಡೀ ಕಾವ್ಯವೇ ಒಂದು ಇಮೇಜ್ ಆಗಬಹುದು". (ಶಿವರುದ್ರಪ್ಪ ಜಿ.ಎಸ್., ಕಾವ್ಯರ್ಥಚಿಂತನ. ೨೦೦೯. ಪುಟ ೧೦೦)

ಕನ್ನಡ ವಿಮರ್ಶೆಯ ಸಂದರ್ಭದಲ್ಲಿ 'ಇಮೇಜ್'ಗೆ ಸಂವಾದಿಯಾಗಿ 'ಪ್ರತಿಮೆ' ಎಂಬ ಪದವನ್ನು ಬಳಸಲಾಗುತ್ತಿದೆ.

ಸಾಹಿತ್ಯ ಸಂದರ್ಭದಲ್ಲಿ ಪ್ರತಿಮೆ ಎಂದರೆ, ಕವಿ ತನ್ನ ಅನುಭವಗಳನ್ನು ಮಾತಿನಲ್ಲಿ ಮೂಡಿಸುವ ಒಂದು ಶಬ್ದಚಿತ್ರ. ಮನಸ್ಸು ತಾನು ಪಡೆದ ಪೂರ್ವಾನುಭವಗಳನ್ನು ನೆನಪಿನ ಬಲದಿಂದ ತನ್ನಲ್ಲಿ ಪುನರ್ ನಿರ್ಮಿಸಿಕೊಳ್ಳುವ ಕ್ರಿಯೆಯಲ್ಲಾಗಲೀ, ಕವಿ ತಾನು ಪಡೆದ ಅನುಭವಗಳಿಗೆ ಶಬ್ದ ರೂಪವೊಂದರಲ್ಲಿ

ಆಕಾರ ಕೊಡುವ ಕ್ರಿಯೆಯಲ್ಲಾಗಲೀ ಗೋಚರವಾಗುವುದು ಗುರುತಿಸಬಹುದಾದ ಒಂದು ಚಿತ್ರವೇ ಆಗಿದೆ. ಪ್ರತಿಮೆ ಎಂಬ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳುವ ಸಂದರ್ಭದಲ್ಲಿ ಸಂಕೇತ (sign) ಪ್ರತೀಕ (symbol) ಎಂಬವುಗಳನ್ನು ವಿವರಿಸುವುದು ಅಗತ್ಯವೆಂದು ತೋರುತ್ತದೆ. 'ಸಂಕೇತ' ಎಂದರೆ ಚಿಹ್ನೆ ಗುರುತು ಇತ್ಯಾದಿ. ಭಾಷೆ, ಭಾಷೆಯೊಳಗಿನ ಪದ ಇತ್ಯಾದಿಗಳು ಸಂಕೇತಗಳು.

ಇವು ಮೂಲತಃ ತನ್ನ ನಾಗರಿಕತೆಯ ಹಾದಿಯಲ್ಲಿ ನಿರ್ಮಿಸಿಕೊಂಡ ಅಗತ್ಯ ವಸ್ತುಗಳನ್ನು ಪ್ರತಿನಿಧಿಸುತ್ತವೆ. ಆದರೆ ಈ ವಸ್ತುಗಳು ತಮ್ಮ ಸಾಂಕೇತಿಕ ಪ್ರಯೋಜನಗಳನ್ನು ಮೀರಿ, ಮನುಷ್ಯರ ಭಾವ ಸಂಬಂಧಿಯಾದ ಅರ್ಥಗಳನ್ನು ಪಡೆದುಕೊಂಡಂತೆ ಅವುಗಳು 'ಪ್ರತೀಕ' ವಾಗುತ್ತದೆ. ಈ ದೃಷ್ಟಿಯಿಂದ ಸಂಕೇತದ ಮುಂದುವರಿದ ರೂಪವೇ ಪ್ರತೀಕ.

"ಪ್ರತೀಕವು ಅಭಿವ್ಯಕ್ತಿಯ ಸಾಧನವು ಹೌದು. ಆದುದರಿಂದ ಅದು ಅನುಭವದ ಕ್ಷಣ ಭಂಗುರತ್ವದಲ್ಲಿ ಹಾಳಾಗದೆ ಉಳಿಯುವ ಶಕ್ತಿಯನ್ನು ಪಡೆದಿದೆ. ಎಲ್ಲ ಪ್ರತೀಕಗಳೂ ಅಮರವಾದುವುಗಳೆಂದು ಈ ಮಾತಿನ ಅಭಿಪ್ರಾಯವಲ್ಲ. ಕ್ಷಣಭಂಗುರತ್ವವೇ ಸ್ವಭಾವವಾದ, ಅನುಭವದ ಮತ್ತು ಅದರ ವಸ್ತುಗಳ ಅರ್ಥವನ್ನು ಅಲ್ಲಿಯೇ ಅಳಿದುಹೋಗದಂತೆ ಕೆಲವು ಕಾಲವಾದರೂ ಸಾಧ್ಯವಾದಲ್ಲಿ, ಮನುಷ್ಯನ ಇತಿಹಾಸವು ಭವಿಷ್ಯದಲ್ಲಿ ಮುಂದುವರಿಯುವವರೆಗೂ ಉಳಿಯುವಂತೆ ಹಿಡಿದಿಡುವ ಪ್ರಯತ್ನವನ್ನು ಪ್ರತೀಕವು ಮಾಡುತ್ತದೆ. ಜೀವನದ ಭಾವನೆ ಮತ್ತು ಸಂವೇದನೆಗಳ ಮುಖಕ್ಕೆ ಸ್ಥಾಯಿತ್ವವನ್ನು ಕೊಡುವುದು ಪ್ರತಿಕಗಳೇ" (ಭೈರಪ್ಪ ಎಸ್.ಎಲ್. ಸಾಹಿತ್ಯ ಮತ್ತು ಪ್ರತೀಕ, ೨೦೦೮, ಪುಟ ೨೫) ಈ ಪ್ರತೀಕಗಳನ್ನು ಉಚಿತವಾದ ಸಂದರ್ಭವೊಂದರಲ್ಲಿ ಕೂಡಿಸಿ ಅವುಗಳಿಂದ ಹೊರಡುವ ಧ್ವನ್ಯರ್ಥಗಳನ್ನು ಬಳಸಿಕೊಂಡು ಕಟ್ಟಿಕೊಡುವ ಚಿತ್ರಗಳೇ ಪ್ರತಿಮೆಗಳು.

"ಕಾವ್ಯ ಪ್ರತಿಮೆ ಎಂದರೆ ಕೇವಲ ಶಬ್ದಚಿತ್ರವಲ್ಲ. ಯಾವುದು ಸಂದರ್ಭವೊಂದರ ಬೌದ್ಧಿಕ ಹಾಗೂ ಭಾವುಕ ಸಂಕೀರ್ಣತೆಯನ್ನು ತಟ್ಟನೆ ಹಿಡಿದು ಕೊಡುತ್ತದೆಯೋ ಅದೇ ಪ್ರತಿಮೆ. ಒಂದು ಸಂದರ್ಭವೊಂದರ 'ಭಾವ ಸಂಕೀರ್ಣತೆ'ಗೆ ಶಬ್ದಚಿತ್ರವೊಂದನ್ನು ರಚಿಸುವ ಪ್ರಯತ್ನದಿಂದ ಮಾಡಿದ್ದಲ್ಲ ಪ್ರತಿಮೆ.

ಅದೊಂದು ರೀತಿಯಲ್ಲಿ ಆವಿಷ್ಕಾರ. ಅಷ್ಟೇ ಅಲ್ಲ. ಅದು ಕವಿಯ ಪ್ರಜ್ಞೆಯೊಳಗಿಂದ ಹುಟ್ಟಿಕೊಳ್ಳುವ ಜೀವಂತವಾದ ಬೆಳವಣಿಗೆಯ ಪರಿಣಾಮ.

....ಪ್ರತಿಮೆಯ ಮುಖ್ಯ ಲಕ್ಷಣವೆಂದರೆ ಅದೊಂದು ಶಬ್ದ ಚಿತ್ರ. ಅದು ಸಂಕ್ಷಿಪ್ತವಾಗಿರಬಹುದು, ಇಲ್ಲದೆಯೂ ಇರಬಹುದು ಅದು ಬದುಕಿನ ಭಾವತೀವ್ರತೆಯನ್ನು ಹಿಡಿದಿಡುತ್ತದೆ. ಹೊಸ ಅರ್ಥ ವಂತಿಕೆಗಳನ್ನು ಝಗ್ಗನೆ ತೆರೆಯುತ್ತಾ ಅನಂತವಾದ ಅರ್ಥದ ಸಾಧ್ಯತೆಗಳತ್ತ ವಿಸ್ತರಿಸುತ್ತದೆ". ( ಶಿವರುದ್ರಪ್ಪ ಜಿ.ಎಸ್., ಕಾವ್ಯಾರ್ಥ ಚಿಂತನ,೨೦೦೯ ಪುಟ ೧೦೪)

ಪ್ರತಿಮೆಗಳು ಕಾವ್ಯಗಳಷ್ಟೇ ಸೀಮಿತವಲ್ಲ. ಗದ್ಯ ಸಾಹಿತ್ಯದಲ್ಲೂ ಬಳಕೆಯಾಗುತ್ತದೆ. 'ಗದ್ಯ' ಕೂಡ ಪದ್ಯದಂತೆ ಒಂದು ಅಭಿವ್ಯಕ್ತಿಯ ಪ್ರಕಾರವಷ್ಟೆ. ಶಕ್ತನಾದ ಲೇಖಕನ 'ಗದ್ಯ'ದಲ್ಲಾಗಲೀ, 'ಪದ್ಯ'ದಲ್ಲಾಗಲೀ, ಪ್ರತಿಮಾವಿಧಾನ ತಾನೇ ತಾನಾಗಿ ಮೈದೋರುತ್ತದೆ. ಅದನ್ನು ಓದುಗರು ಗುರುತಿಸಬೇಕು. ಲೇಖಕ ಪ್ರತಿಭೆಯ ವಸ್ತುವೊಂದನ್ನು ನಿರ್ವಹಿಸುವಾಗ ಅದು ಸಂಕೇತಗಳಲ್ಲಿ ಸಂಚರಿಸಿ, ಪ್ರತೀಕಗಳಲ್ಲಿ, ಮಿಂಚಿ ಪ್ರತಿಮೆಗಳಲ್ಲಿ ಮಡುಗಟ್ಟಿ ಅನೇಕ ಅರ್ಥಗಳನ್ನು ಪ್ರತಿಫಲಿಸುತ್ತಾ ಅಭಿವ್ಯಕ್ತಿಗೆ ಸೊಗಸನ್ನೂ ಅರ್ಥದೀಪ್ತಿ ಹಾಗೂ ಧ್ವನಿ ಪ್ರಚುರತೆಗಳನ್ನು ತಂದುಕೊಡುತ್ತದೆ. ಹೊಸಗನ್ನಡ ಸಾಹಿತ್ಯದಲ್ಲಿ ಅದರಲ್ಲಿಯೂ ಗದ್ಯ ಪ್ರಕಾರಗಳಾದ ಕಾದಂಬರಿ, ಸಣ್ಣ ಕತೆಗಳು ಪ್ರತಿಮೆಗಳಿಂದ ಹೊರತಾಗಿಲ್ಲ. ಈ ದಿಸೆಯಲ್ಲಿ ಪೂರ್ಣಚಂದ್ರ ತೇಜಸ್ವಿ ಹಾಗೂ ಕುವೆಂಪುರವರ ಕಾದಂಬರಿಗಳು ಹಾಗೂ ಸಣ್ಣಕತೆಗಳಲ್ಲಿ ಕಂಡು ಬರುವ ಪ್ರತಿಮೆಗಳನ್ನು ಅವುಗಳ ಬಳಕೆಯ ಔಚಿತ್ಯವನ್ನು ನೋಡಬಹುದು.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕೃತಿಗಳಲ್ಲಿ ಈ ಬಗೆಯ ಹಲವಾರು ಪ್ರತಿಮೆಗಳನ್ನು ಕಾಣಬಹುದು.

"ಹುಂಜವು ತರಗಲೆಯಡಿಯ ಮಣ್ಣನ್ನು ಕೆದರಿ ಕೆದರಿ ಹುಳು-ಹುಪ್ಪಟೆಗಳನ್ನು ಭುಂಜಿಸಿತು. ನಡುನಡುವೆ ಒಂದೊಂದು ಸಾರಿ ಹೆಣ್ಣು ಕೋಳಿಗಳನ್ನು ಕರೆದು ಕೂಗಿತು. ಹೊಟ್ಟೆ ತುಂಬದೆ ಯಾವ ಹೇಂಟೆ ತಾನೆ ಪ್ರಣಯ ಸುಖಕ್ಕೆ ಅಭಿಲಾಷೆ ಪಟ್ಟಿತು !. ವನಕುಕ್ಕುಟ ರಾಜನ ಬಳಿಗೆ ಯಾವ ರಾಣಿಯೂ ಬರಲಿಲ್ಲ. ಹುಂಜವು ಮತ್ತೆ ಒಂದೇ ಸಮನೆ ನೆಬಕೆದರುವ ಕೆಲಸಕ್ಕೆ ಕಾಲು ಹಾಕಿತು.

ಸುಮಾರು ಒಂದು ಗಂಟೆಯ ಮೇಲೆ ಹೊಟ್ಟೆ ಪಟ್ಟಾಗಿ ತುಂಬಿದ ಮೇಲೆ ಹುಂಜಕ್ಕೆ ಮತ್ತೆ ಹೇಂಟೆಯ ನೆನಪಾಗಿ ಕೂಗಿತು. ಆ ಕೂಗಿನಲ್ಲಿ 'ಇನ್ನು ಮುಂದೆ ಏಕಾಂತವನ್ನು ಸಹಿಸಲಾರೆ' ಎಂಬ ವಿರಹ ವ್ಯಥೆಯೂ ಬಾ ಪ್ರಿಯೆ, ಬೇಗ ಬಾ ಎಂಬ ಪ್ರೇಮಾಹ್ವಾನದ ಮಾಧುರ್ಯವೂ ಕೂಡಿದ್ದವು. ಹುಂಜವು ಬಿಂಕದಿಂದ ಸಲ ಸಲವೂ ಕೂಗಿ ಕರೆಯಲು ಒಂದು ಹೇಂಟೆಯೂ ಅದರ ದೊಡ್ಡ ಮರಿಗಳೂ ಸದ್ದು ಮಾಡಿಕೊಂಡು ಓಡಿಯೋಡಿ ಬಳಿಗೆ ಬಂದವು.

....ಸಂತೋಷ ಸಂಭ್ರಮದಲ್ಲಿ ಹುಂಜವು ಮತ್ತೆ ಕೇಕೆ ಹಾಕಿ ಕೂಗತೊಡಗಿತು. ಈ ಸಲದ ಕೂಗು ಹೆಣ್ಣುಕೋಳಿಯನ್ನು ಕರೆಯಲೋಸುಗವಾಗಿರಲಿಲ್ಲ, ತಾನು ಗಂಡು ಎಂಬುದನ್ನು ಹೆಮ್ಮೆಯಿಂದ ಕಾಡಿಗೆಲ್ಲ ಸಾರುವ ಕೂಗಾಗಿತ್ತು. ಆದರೂ ಸ್ವಲ್ಪ ಹೊತ್ತಿನಲ್ಲಿಯೆ ಹೇಂಟೆಯೊಂದು ದೂರದಲ್ಲಿ 'ತೆಕೋ ತೆಕ್ ತೆಕ್ ತೆಕ್' 'ತೆಕೋ ತೆಕ್ ತೆಕ್ ತೆಕ್' ಎಂದು ಬೇಟದ ಧ್ವನಿ ಮಾಡ ತೊಡಗಿತು. ಹುಂಜವು ತಲೆಯನ್ನು ಸ್ವಲ್ಪ ಒಲೆದು, ಒಕ್ಕಣ್ಣಿನಿಂದಲೇ ಬಹುದೂರ ನೋಡುವಂತೆ ಒಂಟಿಗಾಲಿನಲ್ಲಿ ನಿಂತು ಕುತೂಹಲವಿಷ್ಟವಾಗಿ ನಿಷ್ಪಂದವಾಗಿ ಆಲಿಸಿತು. ಜೊತೆಯಲ್ಲಿ ಹೇಂಟೆಯಿದ್ದರೂ ಕೂಡ ಅದರ ಮನಸ್ಸು ಚಂಚಲವಾಗಿ ಮತ್ತೊಂದು ಹೇಂಟೆಗೆ ಮಾರು ಹೋಯಿತು. ಹುಂಜವು ಇದನ್ನು ತ್ಯಜಿಸಲೆಂದಲ್ಲ, ಅದನ್ನು ಒಳಗೆ ಕರೆಯಲೆಂದು ಸ್ವಲ್ಪ ದೂರ ಓಡಿಹೋಗಿ ನಿಂತು ಕೇಕೆ ಹಾಕಿತು !" (ಕುವೆಂಪು., ಕಾನೂರು ಹೆಗ್ಗಡತಿ, ೧೯೬೮, ಪುಟ – ೩೮)

ಈ ಸನ್ನಿವೇಶ ಮಲೆನಾಡಿನ ಪರಿಸರದಲ್ಲಿನ 'ಲೈಂಗಿಕತೆ'ಯ ಆಕ್ರಮಣ ಪ್ರವೃತ್ತಿಯನ್ನು ಸೂಚಿಸುತ್ತದೆ. ಅಲ್ಲದೆ, ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಗಂಡಿನ ಅಪೇಕ್ಷೆಗೆ ತಕ್ಕಂತೆ ತನ್ನನ್ನು ಒಡ್ಡಿಕೊಳ್ಳಬೇಕಾದ ಅನಿವಾರ್ಯತೆಯನ್ನು ಕುವೆಂಪು ಈ ಪ್ರತಿಮೆಯ ಮೂಲಕ ಸೂಚ್ಯವಾಗಿ ಕೇಳಿದ್ದಾರೆ. ಕಾನೂರು ಹೆಗ್ಗಡಿತಿಯಲ್ಲಿ ವಯಸ್ಸಾದ ಚಂದ್ರೇಗೌಡರು ಹರೆಯದ ಹೆಣ್ಣು ಸುಬ್ಬಮ್ಮನನ್ನು ಮದುವೆಯಾಗುವುದು ಗಂಡು ಎಂಬ ದರ್ಪದಿಂದಲೇ. ಅಲ್ಲದೇ ಸೇರೇಗಾರ ರಂಗಪ್ಪಶೆಟ್ಟಿ ತಾನು ತಂದ ಹೆಣ್ಣಾಳು ಗಂಗಿಯೊಂದಿಗೆ ಸಂಬಂಧವಿಟ್ಟು ಕೊಂಡಿರುತ್ತಾರೆ. ಆದರೂ ಸುಬ್ಬಮ್ಮನ ಕಳ್ಳಬಸುರಿಗೆ ಕಾರಣವಾಗುತ್ತಾನೆ. ಅಲ್ಲದೇ, ಸುಬ್ಬಮ್ಮನನ್ನು ವಿವಾಹವಾದ ಮೇಲೂ ಚಂದ್ರೇಗೌಡರು ಗಂಗೆಯೊಡನೆ ಕೂಡುವುದು.

ಈ ಎಲ್ಲಾ ಘಟನೆಗಳನ್ನು ಮೊದಲೇ ಸೂಚ್ಯವಾಗಿ ಕಾಡು ಹುಂಜದ ನಡವಳಿಕೆ ಯೊಂದಿಗೆ ಕುವೆಂಪು ಪ್ರತಿಮಾತ್ಮಕವಾಗಿ ಹೇಳಿದ್ದಾರೆ. ಇದು 'ಕಾನೂರು ಹೆಗ್ಗಡಿತಿ' ಪರಿಸರದಲ್ಲಿ ಸುಪ್ತವಾಗಿರುವ ಲೈಂಗಿಕ ಪ್ರಜ್ಞೆ ವಿವಿಧ ಪಾತ್ರಗಳ ಮೂಲಕ ಪ್ರಕಟವಾಗುವ ಮುನ್ಸೂಚನೆ ಆಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ 'ಓಡುಹುಳು'ವಿನ ರೂಪಕ ಅಭಿಪ್ರೇರಣೆಯ ಪ್ರತೀಕವಾಗಿ ಮೂಡಿಬಂದಿದೆ.

"ಹೋದ ರಾತ್ರಿಯ ಮಾರಿ ಮಳೆಯಲ್ಲಿ ತೇಲಿ ಬಂದು ಕುತ್ತುರೆಯಾದಂತಿದ್ದ ಹಲಸಿನ ತರಗಿನ ನಡುವೆ ಬಿದ್ದಿದ್ದ ಒಂದು ಸೆಗಣಿ ಮುದ್ದೆಯಿಂದ ಒಂದು ಓಡುಹುಳು ಸಣ್ಣದೊಂದು ಉಂಡೆಯನ್ನು ರಚಿಸಿ ಅದನ್ನು ಹಿಂದು ಮುಂದಾಗಿ ತನ್ನ ಹಿಂಗಾಲುಗಳಿಂದ ನೂಕಿಕೊಂಡು ಹೋಗುತ್ತಿತ್ತು. ಅತ್ಯಮೂಲ್ಯವಾದ ಪಧಾರ್ಥವನ್ನು ಅತಿ ಪ್ರಯಾಸದಿಂದ ಸಾಗಿಸುವ ಸಾಹಸದಲ್ಲಿ ತೊಡಗಿದಂತಿತ್ತು, ಅದರ ದೃಢ ಪ್ರಯತ್ನ. ಆ ಉಂಡೆ ಒಂದು ಸಣ್ಣ ದಿಬ್ಬವನ್ನು ಹತ್ತಿ ಅದರ ನೆತ್ತಿಗೆ ಬಂದೊಡನೆ ಮತ್ತೆ ಕೆಳಕ್ಕುರುಳಿತು.

ಓಡುಹುಳು ಮತ್ತೆ ಅದನ್ನು ಬಳಿ ಸಾರಿ ತನ್ನ ಹಿಂಗಾಲುಗಳಿಂದ ತಬ್ಬಿ ಹಿಡಿದು ದಬ್ಬತೊಡಗಿತು. ಹೀಗೆ ಒಂದೆರೆಡು ಗೇಣು ಹೋಗುವುದರೊಳಗಾಗಿ ನಾನಾ ಅಡಚಣೆಗಳಿಗೆ ಒಳಗಾದರೂ ದೃತಿಗೆಡದೆ ನಿರಾಶವಾಗದೆ ಕೆನಿಸಿಕೊಳ್ಳದೆ ಪ್ರಶಾಂತವಾಗಿಯೇ ತನ್ನ ಕೆಲಸವನ್ನು ಸಾಗಿಸುತ್ತಿತ್ತು. ಗುತ್ತಿಯ ಕಣ್ಣೇನೋ ಅದನ್ನೆ ಕುತೂಹಲದಿಂದ ನೋಡುತ್ತಿತ್ತು. ಅವನ ಮನಸ್ಸಿನ ಹೊರ ಅಂಚು ಅದರ ದೃಢತೆಯ ವಿಚಾರವಾಗಿ ಚಿಂತಿಸಿ ಶ್ಲಾಘಿಸುತ್ತಾ ಇತ್ತು". (ಕುವೆಂಪು., ಮಲೆಗಳಲ್ಲಿ ಮದುಮಗಳು. ೧೯೯೮, ಪುಟ ೪೯)

ಈ ಸೆಗಣಿ ಹುಳುವಿನಂತೆ ಗುತ್ತಿಯೂ ಮಾರಿಮಳೆಯಲ್ಲಿ ತೋಯ್ದು ಬಂದಿದ್ದನು. ಅವನ ಅಂತಃಕರಣವೆಲ್ಲಾ ಈ ಘಟನೆಯಿಂದ ತಿಮ್ಮಿಯ ಅಪಹರಣದ ಕಡೆಗೆ ಇರುವುದು. ಈ ಸಂಕಲ್ಪ ಶಕ್ತಿ ಪ್ರೇರಿತವಾದುದ್ದೇ, ಓಡುಹುಳುವಿನ ದೃಢತೆಯಿಂದ. ಯಾವುದೇ ಅಡೆ-ತಡೆ ಎದುರಾಗಲೀ ತಿಮ್ಮಿಯನ್ನೇ ಪಡೆದೇ ತೀರಬೇಕು ಎಂಬ ಉತ್ಕಟ ಹಂಬಲದ ಪ್ರತೀಕವಾಗಿ ಓಡುಹುಳು ಸಶಕ್ತ ಪ್ರತಿಮೆಯಾಗಿದೆ. ಕಥಾನಕದ ಒಳಗಷ್ಟೇ ಅಲ್ಲದೆ, ಈ ಘಟನೆ ಅಭಿಪ್ರೇರಣೆಯ

ಸಂಕೇತವಾಗಿದೆ. ನಮ್ಮಲ್ಲಿರುವ ಅಂತಃಶಕ್ತಿಯನ್ನು ಗುರಿಯಡೆಗೆ ಕೇಂದ್ರಿಕರಿಸಿ ಮುನ್ನುಗ್ಗಿದರೆ ಎಂತಹ ಅಡಚಣೆಗಳೆದುರಾದರೂ ಗೆಲುವು ನಿಶ್ಚಿತ ಎಂಬ ಅಂಶವನ್ನು ಇದು ಧ್ವನಿಸುತ್ತದೆ.

ಧನ್ವಂತರಿ ಚಿಕಿತ್ಸೆಯ ರೈತ ಇಡೀ ಭಾರತದ ರೈತನ ಪ್ರತೀಕ. ಈ ಕತೆಯಲ್ಲಿ ಬರುವ ವೈದ್ಯ, ಭಟ್ಟರೂ ಎಲ್ಲರೂ ಭ್ರಷ್ಟ ಸಾಮಾಜಿಕ ವ್ಯವಸ್ಥೆಯ ಪ್ರತೀಕವಾಗಿದ್ದಾರೆ.

"ಗುಡಿಸಲಿನ ಹೊರಗಡೆ ಮನುಷ್ಯರಾರು ಕಾಣಿಸಲಿಲ್ಲ. ಬೂದಿ ಗುಡ್ಡೆಯಲ್ಲಿ ಮಲಗಿದ್ದ ಒಂದು ಬಡಕಲು ನಾಯಿ ಮಾತ್ರ ಒಂದೆರೆಡು ಸೊಲ್ಲು ಕೂಗಿ ದಣಿದು ತಟಸ್ಥವಾಯಿತು. ಒಂದು ಹೇಂಟೆ ತನ್ನ ಹೂಮರಿಗಳೊಡನೆ ಕೊಳಚೆಯಲ್ಲಿ ಕೆಸರು ಕೆದುರುತ್ತಿತ್ತು.

ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು. ಸರ್ವತ್ರವೂ ಹೊಗೆ ಹಿಡಿದು ಕರಿಬಲೆ ಸೇತುಬಿದ್ದು ಕರ್ರಗಾಗಿತ್ತು. ಹಾರೆ, ಗುದ್ದಲಿ, ಹೆಡಗೆ, ಕುಕ್ಕೆ, ಮಡಿಕೆ, ನೇಗಿಲು, ಅಲ್ಲಲ್ಲಿ ಅಸ್ತವ್ಯಸ್ತವಾಗಿ ಚೆದುರಿ ಬಿದ್ದಿದ್ದುವು. ನಿರ್ಜೀವವಾದ ಕಸ ಕಡ್ಡಿಗಳೂ ಸಜೀವವಾದ ನೊಣಗಳೂ ಸ್ವರಾಜ್ಯ ಸಂಪಾದನೆ ಮಾಡಿದಂತಿತ್ತು". (ಕುವೆಂಪು., ನನ್ನ ದೇವರು ಮತ್ತು ಇತರ ಕಥೆಗಳು, ೨೦೦೫, ಪುಟ - ೭೪)

ರೈತನ ಮನೆಯ ಚಿತ್ರಣ ಇಡೀ ವ್ಯವಸ್ಥೆಯ ವ್ಯಂಗ ರೂಪಕವಾಗಿದೆ. ಬಡಕಲು ನಾಯಿಯ ಚಿತ್ರಣ ಇಡೀ ವ್ಯವಸ್ಥೆಯ ವ್ಯಂಗ ರೂಪಕ. ರೈತನ ಕೂಗು, ದಣಿವು ಕೂಡ ವ್ಯವಸ್ಥೆಯ ಕೌರ್ಯವಾಗಿದೆ. ನಿರ್ಜೀವವಾದ ಕಸ-ಕಡ್ಡಿಗಳು, ಸಜೀವಾದ ನೊಣಗಳು ಸ್ವರಾಜ್ಯ ಸಂಪಾದನೆ ಮಾಡಿರುವಂತೆ ದೇಶದ ಆಡಳಿತ ವ್ಯವಸ್ಥೆಯಲ್ಲಿ ಜೀವಂತಿಕೆ ಇಲ್ಲ. ಅದಕ್ಷರೇ ಎಲ್ಲೆಡೆ ತುಂಬಿರುವುದರ ಸಂಕೇತವಾಗಿದೆ. ಅಲ್ಲದೆ, ಮಧ್ಯಪಾನ ನಿರೋಧದ ಆಫೀಸಿನ ಹಿಂದುಗಡೆ ಸೇಂದಿಯಂಗಡಿ, ಪೋಲೀಸು ಠಾಣೆಯ ಹಿಂಭಾಗದ ಮನೆಯ ಉಪ್ಪರಿಗೆಯಲ್ಲಿ ಜೂಜಿನ ಮನೆ, ಗಲ್ಲಿಯಲ್ಲಿ ಯಾರೂ ಅಸಹ್ಯ ಮಾಡಬಾರದು ಎಂದು ಬರೆದಿದ್ದ ಬೋರ್ಡಿನ ಕೆಳಗೇ ಸಹಿಸಲಸಾಧ್ಯವಾದ ದುರ್ಗಂಧ ಇವೆಲ್ಲವೂ ವರ್ತಮಾನದ ಸಾಮಾಜಿಕ ಚಿತ್ರಣವನ್ನು ಕಟ್ಟಿಕೊಡುತ್ತವೆ.

'ರೈತ' ದೇಶದ ಬೆನ್ನೆಲುಬು ಅವನಿಗಾಗಿರುವ ಈ ದುರ್ಗತಿಯನ್ನು ಶೋಷಣೆ, ಸುಲಿಗೆಯನ್ನು 'ಧನ್ವಂತರಿ' ಬಂದರೂ ಸರಿಪಡಿಸಲಾಗದ ಸ್ಥಿತಿಯನ್ನು ಇಡೀ ಪ್ರತಿಮೆ ಧ್ವನಿಸುತ್ತದೆ. ಸಾಮಾಜಿಕ ಸಮಸ್ಯೆಯೊಂದು ದುರಂತ ಸನ್ನಿವೇಶವಾಗಿರುವಂತೆ ಸಾಮಾಜಿಕ ನಿಯಮಗಳನ್ನು ಮೀರಿ ಮನುಷ್ಯರ ಇಂತಹ ದುರ್ವರ್ತನೆಯನ್ನು ಸಶಕ್ತವಾಗಿ ಸಂಕೇತಿಸುತ್ತವೆ.

ಕುವೆಂಪು ಅವರ ಪ್ರತಿಮೆಗಳನ್ನು, ಸಂಕೇತಗಳನ್ನು ಕೇವಲ ಕಾವ್ಯಗಳಿಗಷ್ಟೇ ಸೀಮಿತಗೊಳಿಸದೇ, ಗದ್ಯ ಪ್ರಕಾರಗಳಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಬಳಕೆಮಾಡಿದ್ದಾರೆ. ಎಂಬುದಕ್ಕೆ ಇವು ಕೆಲವು ಉದಾಹರಣೆಗಳಾಗಿವೆ. ಕುವೆಂಪು ಅವರಂತೆ ತೇಜಸ್ವಿಯವರೂ ಸಹ ತಮ್ಮ ಕತೆ-ಕಾದಂಬರಿಗಳಲ್ಲಿ ಅಸಂಖ್ಯಾತ ಪ್ರತಿಮೆಗಳನ್ನು ಔಚಿತ್ಯ ಪೂರ್ಣವಾಗಿ ತಂದಿರುವುದನ್ನು ಗಮನಿಸಬಹುದು. ಕರ್ವಾಲೋ ಕಾದಂಬರಿಯ ಹಾರುವ 'ಓತಿ' ಹುಲಿಯೂರಿನ ಸರಹದ್ದು ಕತೆಯ 'ಹದ್ದು' ಕಿರಗೂರಿನ ಗಯ್ಯಾಳಿಗಳು ಕಾದಂಬರಿಯ 'ಚಿರುಗಾಳಿ' ಮಾಯಾಲೋಕ ಕಾದಂಬರಿಯ 'ಮಳೆ' ಕೃಷ್ಣೇಗೌಡರ ಆನೆ ಕಥೆಯ 'ಆನೆ' ಅಲ್ಲದೆ, ತೇಜಸ್ವಿ ಕಥೆ ಕಾದಂಬರಿಗಳಲ್ಲಿ ಕೆಸರೂರು, ಗೊಂದಲಪುರ, ಗುಮ್ಮನಕಾನು ಹೀಗೆ ಬರುವ ಊರಿನ ಹೆಸರುಗಳು ಎಲ್ಲವೂ ವಿಶಿಷ್ಟ ಹಾಗೂ ಸಂಕೇತಗಳ ಮೂಲಕ ಪ್ರತಿಮೆಗಳಾಗಿ ಚಿತ್ರಿತವಾಗಿವೆ.

ಕರ್ವಾಲೋ ಕಾದಂಬರಿಯ 'ಹಾರುವ ಓತಿ' ತೇಜಸ್ವಿಯವರ ಅನ್ವೇಷಕ ಪ್ರವೃತ್ತಿಯ ಸಂಕೇತ. ದೈನಂದಿನ ಬದುಕಿನ ಸೂಕ್ಷ್ಮಗಳಿಗೆ ಮನಸ್ಸನ್ನು ತೆರೆದುಕೊಂಡಾಗ ಅದು ನಮ್ಮೆದುರು ಮುಖಾಮುಖಿಯಾಗುವ ವಿಚಿತ್ರವಾದ ರಹಸ್ಯವನ್ನು ಶೋಧಿಸುವ ನೆಲೆಯಲ್ಲಿ 'ಹಾರುವ ಓತಿ' ಪ್ರತೀಕವಾಗುತ್ತದೆ. ಅಲ್ಲದೆ, ಮನುಷ್ಯ ಪ್ರಕೃತಿ ರಹಸ್ಯಗಳನ್ನು ತಿಳಿದುಕೊಳ್ಳಲು ಬಯಸಿದಷ್ಟು ನಿಗೂಢವಾಗುತ್ತಾ ಹೋಗುತ್ತದೆ. ಹಾರುವ ಓತಿ ಕಂಡೂ ಕಾಣದಂತೆ ಕಣ್ಮರೆಯಾಗಿ ತೇಲಿ ತೇಲಿ ನೀಲಿಯ ಅಸ್ಪಷ್ಟ ಶೂನ್ಯದತ್ತ ಸಯ್ಯನೆ ಹೊರಟು ಹೋಗುತ್ತದೆ. ಜೀವ ವಿಕಾಸಕ್ಕೆ ಕೊನೆ ಎಂಬುದು ಇಲ್ಲ ಯಾವುದೇ ಅವ್ಯಕ್ತಹಂಬಲ ನಿಗೂಢವಾಗೇ ಉಳಿಯುವ ಅಧ್ಯಾತ್ಮಿಕ ಅನುಭೂತಿಯ ಪ್ರತೀಕವಾಗಿ 'ಹಾರುವ ಓತಿ' ನಿಲ್ಲುತ್ತದೆ.

'ಹುಲಿಯೂರಿನ ಸರಹದ್ದು' ಪರಂಪರಾಗತ ನಂಬಿಕೆ, ಸಂಪ್ರದಾಯಗಳ ಸಂಕೇತವಾದರೆ, ಅದನ್ನು ಮೀರ ಹೊರಡುವ, ಪ್ರತಿರೋಧಿಸ ಹೊರಡುವ 'ಸೋಮು'ಇಂದಿನ ಯುವಪೀಳಿಗೆಯ ಪ್ರತೀಕವಾಗುತ್ತಾನೆ. ಪರಂಪರಾಗತ ನಂಬಿಕೆ, ಕುರುಡು ಸಂಪ್ರದಾಯಗಳನ್ನು ಎಷ್ಟೇ ಪ್ರಯತ್ನಿಸಿದರು ಮೀರಲಾಗದು. ಅದರ ಸುತ್ತಲೇ ಸುತ್ತಬೇಕಾದ ಅನಿವಾರ್ಯತೆಯನ್ನು 'ಹದ್ದು' ಧ್ವನಿಸುತ್ತದೆ. ಹದ್ದು ಸ್ವಚ್ಛಂಧ ಪ್ರವೃತ್ತಿಯ, ಸ್ವಾತಂತ್ರ್ಯ ಮನಸ್ಥಿತಿಯ ಪ್ರತೀಕವಾಗಿ ರೂಪ ಪಡೆಯುತ್ತದೆ. ಇಲ್ಲಿ ಸೋಮುವಿನ ವೈಯಕ್ತಿಕ ನೆಲೆಯ ಸಮಸ್ಯೆಯ ಸಾಮುದಾಯಿಕ ರೀತಿಯಲ್ಲಿ ಅಂತರ್ಗತವಾಗಿ ವಿಶ್ವದಾಯಿತ್ವ ಮಹತ್ವ ಪಡೆಯುತ್ತದೆ.

'ಸರಹದ್ದು' ಅವನ ಸ್ವಂತಿಕೆಯನ್ನು , ಬೌದ್ಧಿಕ ಆಲೋಚನೆಗಳನ್ನೆಲ್ಲಾ ತಲೆಕೆಳಗು ಮಾಡಿ, ಸಂಪ್ರದಾಯದ ಕಪಿಮುಷ್ಟಿಯಿಂದ ಜಾತಿಯ ಸಂಕೋಲೆಯಿಂದ ಆಚೆ ಹೋಗಲು ತನಗಾಗಿ ಬದುಕಬೇಕಾದ ಆಂಕಾಂಕ್ಷೆ ಎಲ್ಲವನ್ನೂ ತ್ಯಜಿಸಿ ಹೊರಡಲು ಅಡ್ಡಗೋಡೆಯಾಗಿದೆ. "ಸಂಪ್ರದಾಯವನ್ನು ಒಪ್ಪಿಕೊಂಡು ಅದೇ ಜಾಡಿನಲ್ಲಿ ನೆಲಕಚ್ಚಿ ಹಾವಿನಂತೆ ನಡೆಯುವ ತನ್ನ ತಂದೆ ರಂಗೇಗೌಡ, ಆಳು ಲಿಂಗ, ಆ ಸಂಪ್ರದಾಯವನ್ನೇ ತಲೆ ತಲಾಂತರದಿಂದ ಸಾಗಿಸುತ್ತ ಬರುವ ಸಿಬ್ಬಲಗುಡ್ಡೆ ಭಟ್ಟ ಇವರೆಲ್ಲರಿಗಿಂತ ಭಿನ್ನವಾಗಿ ಬದುಕಬೇಕು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಹುಲಿಯೂರಿನ ಸರಹದ್ದು, ೨೦೦೭, ಪುಟ ೫೪) ಎಂದು ಕೊಳ್ಳುವ ಸೋಮು ತನ್ನ ಮನೆತನವನ್ನಾಗಲೀ, ತಂದೆಯನ್ನಾಗಲೀ, ಧಿಕ್ಕರಿಸುವುದಕ್ಕೆ ಸಾಧ್ಯವಾಗುವುದೇ ಇಲ್ಲ. ಅವನ ಬದಲಾವಣೆಯ ಕನಸು ನೆರವೇರಲಾಗದೆ ತಲೆ-ತಲಾಂತರದಿಂದ ನಡೆದು ಬಂದಿರುವ ಸ್ವರ್ಗ, ನರಕ, ಬ್ರಾಹ್ಮಣ, ಒಕ್ಕಲಿಗ, ಸಂಪ್ರದಾಯ, ನಂಬಿಕೆಗಳಿಂದ ಹೊರಬರಲು, ನಡೆಸುವ ಹೋರಾಟವೆಲ್ಲ ವ್ಯರ್ಥವಾಗುತ್ತದೆ. ಇಲ್ಲಿ ಸೋಮುವಿನ ವೈಯಕ್ತಿಕ ಸಮಸ್ಯೆಯು ಸಾಮುದಾಯಿಕ ನೆಲೆಯಲ್ಲಿ ಮಹತ್ವ ಪಡೆಯುವುದರಿಂದ ಹೆಚ್ಚಿನ ಮಹತ್ವ ಪಡೆಯುತ್ತದೆ.

ಸಾಮಾಜಿಕ ಬದುಕಿನಲ್ಲಿ ಜಾತೀಯತೆಯನ್ನು ಮೀರಲಾಗದ ದುರಂತಕ್ಕೆ ಹುಲಿಯೂರಿನ ಸರಹದ್ದು ಸಂಕೇತವಾದರೆ, 'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ 'ಬಿರುಗಾಳಿ' ಸಾಮಾಜಿಕ ಚಲನೆಯ, ಬದಲಾವಣೆಯ ಸಂಕೇತವಾಗಿ, ಜಾತೀಯತೆಯನ್ನು ಮೀರುವ ಪ್ರತೀಕವಾಗುತ್ತದೆ.

ಅದುವರೆಗೂ ಸೋಮಾರಿಗಳು, ಜಾತಿ ಜಗಳದಲ್ಲಿ ಮುಳುಗಿದ ಗಂಡಸರು, ವ್ಯರ್ಥ ಕಾಲಹರಣದಲ್ಲೇ ತೊಡಗಿರುತ್ತಾರೆ. ಕಿರಗೂರಿನ ಮೇಲೆ ಮೂರು ರಾತ್ರಿ ಮೂರು ಹಗಲು ಇದಕ್ಕಿದ್ದಂತೆ ಬಿರುಗಾಳಿ ಬೀಸಿದ ಬೀರುಗಾಗಳಿಗೆ, ಗಾಳಿ ಹೊಡೆತಕ್ಕೆ ಓಲಾಡಿ ಓಲಾಡಿ ಗಿಡಮರಗಳೆಲ್ಲಾ ಲಟ ಲಟ ಕಾಂಡ ಮುರಿದು ಉರುಳಿದವು. ಸೀಗೇಗೌಡರ ಮನೆ ಹತ್ತಿರ ಇದ್ದ ಹೆಬ್ಬಲಸಿನ ಮರವೂ ತತ್ತರಿಸಿದ್ದು, ಕಿರಗೂರಿನ ಜನಕ್ಕೆ ಅಚ್ಚರಿಯ ವಿಷಯವಾಗಿತ್ತು.

"ಅದೇನು ಯಾವಾಗ ಹುಟ್ಟಿದ್ದೋ ಏನೋ ಯಾರಿಗೂ ಗೊತ್ತಿರಲಿಲ್ಲ. ಕಿರಗೂರಿನ ಜನ ಎಲ್ಲಿಂದಲೋ ಗುಳೆ ಬಂದು ಅಲ್ಲಿ ಊರು ಮಾಡುವುದಕ್ಕಿಂತ ಎಷ್ಟೋ ಮೊದಲು ಅದು ಅಲ್ಲಿ ಬೆಳೆದಿತ್ತೆಂದು ತೋರುತ್ತದೆ. ಆ ಮರದ ಮೇಲೆ ಗಡ್ಡ ಮೀಸೆಗಳು ಬೆಳೆದಂತೆ ನಾನಾ ತರಹ ಬಂದಳಿಕೆಗಳು ಬೆಳೆದುಕೊಂಡಿದ್ದವು. ಕವಲು ಕೊಂಬೆಗಳ ಬಿರುಕಿನಿಂದೆಲ್ಲ ಬಸರಿಮರ ಅರಳಿಮರದ ಸಸಿಗಳು ಹುಟ್ಟಿ ಅಲ್ಲಿಂದ ನೆಲದವರೆಗೂ ಬೇರು ಕಳಿಸಿದ್ದವು. ಅಲ್ಲಿದ್ದ ಅನೇಕ ತರದ ಎಲೆಗಳನ್ನು ನೋಡಿದರೆ, ಅದನ್ನು ಯಾವ ಜಾತಿ ಮರ ಎಂದು ನಿರ್ಧರಿಸುವುದೇ ಕಷ್ಟವಾಗುತ್ತಿತ್ತು. ಗಾಳಿ ಮಳೆಗಳನ್ನು ಅನೇಕ ಶತಮಾನಗಳಿಂದ ಪ್ರತಿರೋದಿಸಿಕೊಂಡೇ ಬೆಳೆದಿದ್ದ ಆ ಮರದ ಕಾಂಡ ತಿರುಪಿ ತಿರುಪಿಕೊಂಡು ಸ್ಫೂತರ ಕಾಣುತ್ತಿತ್ತು.

ಅಂಥಾ ಮರಗಳನ್ನು ಕಡಿಯುವುದಾಗಲೀ ಕುಯ್ಯುವುದಾಗಲೀ ಭಾರಿ ಕಷ್ಟ. ಹಾಗಿದ್ದುದರಿಂದಲೋ ಏನೋ ಯಾರು ಅದನ್ನು ಕುಯ್ಯುಸಿ ಮರ ಮುಟ್ಟು ಮಾಡುವ ಗೋಜಿಗೇ ಹೋಗಿರಲಿಲ್ಲ. ಕೊಡಲಿಯಲ್ಲಿ ಅದಕ್ಕೆ ಹೊಡದರೆ ಕಬ್ಬಿಣಕ್ಕೆ ಕಬ್ಬಿಣ ತಾಗಿಸಿದಂತಾಗಿ ಠಣ್ ಎಂದು ಶಬ್ದ ಬರುತ್ತಿತ್ತು. ಅಂಥ ಮರ ಮೊನ್ನೆ ಮೂರು ಹಗಲು ಮೂರು ರಾತ್ರಿ ಬೀಸಿದ ಬಿರುಗಾಳಿಗೆ ತತ್ತರಿಸಿದ್ದು ಆಶ್ಚರ್ಯ !.

ಅದರ ಭೂತಾಕಾರದ ಕಾಂಡ ಎಂಥ ಗಾಳಿಗೂ ನಡು ಬಗ್ಗಿಸುವ ಹಾಗೇ ಇರಲಿಲ್ಲ. ಆದರೆ ಗಾಳಿ ಬಿಡಬೇಕಲ್ಲ ! ಮೂರು ಹಗಲು ಮೂರು ರಾತ್ರಿ ನಿರಂತರವಾಗಿ ಬೀಸುತ್ತಲೇ ಇತ್ತು. ಗಾಳಿಯ ರೌಸಿಗೆ ಮರ ಬಗ್ಗದಿದ್ದರೂ ಕೊಂಚ ಕೊಂಚವೇ ಅಲ್ಲಾಡಿತು. ಅಲ್ಲಾಡಿದಾಗ ಅದರ ಬೇರುಗಳ ಬಳಿ ಅಲ್ಲಲ್ಲಿ ನೆಲ ಸಣ್ಣಗೆ ಬಿರುಕು ಬಿಟ್ಟಿತು. ಬಿರುಕುಗಳೊಳಗೆಲ್ಲಾ ಹರಿಯುವ ಮಳೆನೀರು ಮೆಲ್ಲಗೆ ಜಿನುಗಿ ಇಳಿಯಿತು. ಮರ ಮತ್ತೆ ಮತ್ತೆ ಓಲಾಡಿದಂತೆ ಅದರ ಬೇರುಗಳು ಹೊಸಕಾಡಿ ಹೊಸಕಾಡಿ ನೆಲ ಕೆಸರೆದ್ದಿತು. ಮರ ಮೆಲ್ಲಗೆ ಬೇರು ಸಮೇತ ಗಾಳಿ ಬೀಸುವ

ದಿಕ್ಕಿನ ಕಡೆಗೆ ವಾಲಲಾರಂಭಿಸಿತು". (ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಹುಲಿಯೂರಿನ ಸರಹದ್ದು, ೨೦೦೯, ಪುಟ ೫೪)

ಈ ಮೇಲಿನ ಸನ್ನಿವೇಶದಲ್ಲಿ, ಪರಂಪರಾಗತ ನಂಬಿಕೆ, ಕುರುಡು ಸಂಪ್ರದಾಯ ಜಾತಿ ಪದ್ಧತಿಗಳಿಗೆ 'ಬೃಹತ್ ಆಲದಮರ' ಸಂಕೇತವಾಗುತ್ತದೆ. ಶತಮಾನಗಳಿಂದ ಈ ಜಾತೀಯತೆಯ ಬೇರುಗಳೂ ಕೂಡ, ಯಾವ ಪ್ರತಿರೋಧಗಳಿಗೂ ಜಗ್ಗದೆ, ನಮ್ಮ ನಂಬಿಕೆಗಳ ಆಳಕ್ಕೆ ಇಳಿದಿರುವುದನ್ನು ಸೂಚಿಸುತ್ತದೆ. ಒಂದು ಜಾತಿ ಅಲ್ಲದೆ, ಒಂದು ಜಾತಿಯೊಳಗೆ ಉಪಜಾತಿ, ಉಪಜಾತಿಯೊಳಗೊಂದು ಪರಜಾತಿ ಹೀಗೆ ಒಂದನ್ನೊಂದು ಹೆಣೆದುಕೊಂಡಿರುವ ಬಲೆಯಂತಿರುವ ನಮ್ಮ ಜಾತಿವ್ಯವಸ್ಥೆಗೆ ವಿಡಂಬನೆ ಎಂಬಂತೆ ಆಲದ ಮರದ ಕವಲು ಕೊಂಬೆಗಳ ಬಿರುಕಿನಿಂದ ಬಸರೀಮರ, ಅರಳೀ ಮರಗಳೂ, ನಾನಾ ತರದ ಬಂದಳಿಕೆಗಳು ಭದ್ರ ಕೋಟೆಯಂತೆ ಜಾಲವಾಗಿ ಮಾರ್ಪಾಡಾಗಿರುವುದನ್ನು ಹೇಳುವುದರೊಂದಿಗೆ ಸಾದೃಶ್ಯ ಕಲ್ಪಿಸಿದ್ದಾರೆ.

ಜಾತಿ, ಮೌಢ್ಯವನ್ನು ಬುಡಮಟ್ಟ ಕೀಳಬೇಕೆಂದು ಬಯಸಿದರೂ, ಎಷ್ಟೇ ಪ್ರತಿರೋಧಗಳು ಶತಶತಮಾನಗಳಿಂದಲೂ ಬಸವಣ್ಣ, ಕನಕದಾಸರಾದಿಯಾಗಿ ಪ್ರಯತ್ನಿಸಿದರೂ ಜಗ್ಗದೆ, ನಿಂತಿರುವ ವ್ಯವಸ್ಥೆಯ ಪ್ರತೀಕವಾಗಿ ಬಹೃತ್ ಆಲದ ಮರ ನಿಂತಿದೆ. ಇದನ್ನು ಕೆಡವಲು ವಿಜ್ಞಾನ ದೀವಿಗೆ ಅಗತ್ಯ, ವೈಚಾರಿಕ ಪ್ರಜ್ಞೆ ತರ್ಕ, ತಿಳುವಳಿಕೆಯಿಂದ ಮಾತ್ರ ಸಾಧ್ಯ. ಇವೆಲ್ಲವೂ ಒಟ್ಟಾಗಿ 'ಬಿರುಗಾಳಿ' ರೂಪದಲ್ಲಿ ಪ್ರಕಟಗೊಂಡಾಗ ಮಾತ್ರ ಕೊಂಚ ಕೊಂಚವೇ ಅಲ್ಲಾಡಿ, ಹೆಬ್ಬಲಸಿನ ಮರದ ಬೇರುಗಳಂತೆ ಜಾತಿಯ ಬೇರುಗಳೂ ಸಡಿಲವಾಗಿ ಸಡಿಲವಾಗಿ ಕೊನೆಗೆ ನಿಧಾನವಾಗಿಯಾದರೂ ಬುಡಮಟ್ಟ ವಾಲಿಕೊಳ್ಳುತ್ತದೆ. ಎಂಬ 'ದರ್ಶನ' ಇಲ್ಲಿ ಗೋಚರವಾಗುತ್ತದೆ. 'ಬಿರುಗಾಳಿ 'ಹೆಬ್ಬಲಸಿನ ಮರ' ಎರಡೂ ನಂಬಿಕೆ, ಸಂಪ್ರದಾಯ, ಕಟ್ಟಳೆ, ಜಾತೀಯತೆ ಹಾಗೂ ವಿಚಾರವಂತಿಕೆ, ವೈಜ್ಞಾನಿಕ ಮನೋಭಾವಗಳ ಪ್ರತೀಕವಾಗಿವೆ. ತೇಜಸ್ವಿಯವರ ಈ ಬಗೆ ಊರ್ಧ್ವಮುಖಿಚಿಂತನೆಗೆ ಕುವೆಂಪು ಅವರ 'ವಿಶ್ವಮಾನವತಾ ಪ್ರಜ್ಞೆ'ಯನ್ನು ತಾವು ಸ್ವತಃ ಅಂತರ್ಗತಮಾಡಿಕೊಂಡಿರುವುದಕ್ಕೆ ಉತ್ತಮ ನಿದರ್ಶನವಾಗಿದೆ.

ಅಲ್ಲದೆ, ಬಿದ್ದ ಹೆಬ್ಬಲಸಿನ ಮರದ ದಿಮ್ಮಿ ಕಡಿಯಲು ಹೋಗಿ ಬೆನ್ನು ಉಳುಕಿಸಿಕೊಂಡು ಜಾತಿ ಜಗಳ ಪ್ರಾರಂಭವಾಗುತ್ತದೆ. ಪರಿಸ್ಥಿತಿ ವಿಕೋಪಕ್ಕೆ ಹೋದಾಗ ದಾನಮ್ಮ ಕ್ರಿಯಾಶೀಲಳಾಗಿ ಹರಿಜನ ಕೇರಿಯಲ್ಲಿ ಹೆಬ್ಬಲಸಿನ ದಿಮ್ಮಿಯಿಂದ ಆಗುವ ಅನಾಹುತವನ್ನು ತಪ್ಪಿಸುತ್ತಾಳೆ. ಅನಂತರ ಕಿರಗೂರಿನ ಹೆಂಗಸರೆಲ್ಲಾ ದಾನಮ್ಮನಿಗೆ ಜೊತೆಯಾಗಿ ತಮ್ಮ ಗಂಡಂದಿರಿಗೆ ಬಿದ್ಧಿ ಕಲಿಸುವುದೂ ಕೂಡ ನಾಟಕೀಯ ಗುಣದಿಂದ ಮಹತ್ವ ಪಡೆಯುತ್ತದೆ. ಅಲ್ಲದೆ, ಧೂಮಕೇತುವಿನಂತೆ ಕಾಡೊಳಗೆ ನುಗ್ಗಿದ ದಿಮ್ಮಿ ಮಂಗಮಾಯವಾಗಿದ್ದು, ಅಂತರ್ಧಾನವಾದುದು ಮಾತ್ರ ನಿಗೂಢ. ಈ ನಿಗೂಢತೆಯ ಜೊತೆಗೆ, ಸಾಮಾಜಿಕ ಚಲನೆಗೆ ಹಾಗೂ ಸ್ಥಿತ್ಯಂತರಕ್ಕೆ ಕಾರಣವಾಗುತ್ತದೆ.

ತೇಜಸ್ವಿಯವರ 'ಕೃಷ್ಣೇಗೌಡರ ಆನೆ' ವ್ಯವಸ್ಥೆಯ ಭ್ರಷ್ಟತೆ, ನಿಷ್ಕ್ರಿಯತೆ, ಈರ್ಷ್ಯೆಗಳಿಂದ ಎದುರಾಗುವ ದುರಂತಗಳಿಗೆ ಸಂಕೇತವಾಗುತ್ತದೆ. ಸಮಾಜದಲ್ಲಿ ಗಣ್ಯರು, ಪ್ರಭಾವೀ ವ್ಯಕ್ತಿಗಳು ಎನಿಸಿಕೊಂಡವರು ತಾವು ಮಾಡುವ ಕಳ್ಳಸಾಗಾಣಿಕೆ, ಗಂಧಸಾಗಾಣಿಕೆ, ಮಾಡುವ ಕ್ರೌರ್ಯಗಳಿಗೆ ಕೊಲೆಗಳಿಗೆ ಕೃಷ್ಣೇಗೌಡರ 'ಆನೆ'ಯೇ ಕಾರಣ ಎಂದು ಆರೋಪಿಸುವುದು ವ್ಯವಸ್ಥೆಯ ಭ್ರಷ್ಟತೆಗೆ ಸಾಕ್ಷಿಯಾಗಿದೆ. ಪ್ರಸ್ತುತ ಭಾರತದ ಸಾಮಾಜಿಕ, ರಾಜಕೀಯ, ಅಧಿಕಾರಶಾಹಿ ವ್ಯವಸ್ಥೆಯಿಂದ ಬಲಿಪಶುವಾಗುವ ಅಮಾಯಕರನ್ನು ಮುಗ್ಧರನ್ನು, ಶೋಷಿತರನ್ನು 'ಆನೆ' ಪ್ರತಿಮೆ ಬಹಳ ಸೂಚ್ಯವಾಗಿ ತಿಳಿಸುವ ಮೂಲಕ, ಸಾಮಾಜಿಕ ಕಾಳಜಿ ಹಾಗೂ ಬದುಕಿನ ಮೌಲ್ಯಗಳನ್ನು ತೇಜಸ್ವಿ ಈ ಕತೆಯ ಮೂಲಕ ಅನಾವರಣಗೊಳಿಸುತ್ತಾರೆ.

ಕುವೆಂಪು ಮತ್ತು ತೇಜಸ್ವಿ ಅವರಿಬ್ಬರೂ ತಮ್ಮ ಕೃತಿಗಳಲ್ಲಿ ತರುವ ಜೈವಿಕ ಪ್ರತಿಮೆಗಳು ಇಡೀ ಕೃತಿಯಲ್ಲಿ ವಿಶಿಷ್ಟ ರೂಪಕಗಳಾಗುತ್ತವೆ. ಕೇವಲ ರೂಪಕಗಳಾಗಿ ಅಷ್ಟೇ ಅಲ್ಲದೆ, ಅವು ಧ್ವನಿಸುವ ಅರ್ಥಗಳು ವರ್ತಮಾನಸಂವೇದಿ ಸೂಕ್ಷ್ಮತೆಗಳಿಂದ ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ. ಕಥೆಗೆ ಪೂರಕವಾಗಿ ಕಥಾನಕದೊಳಗೆ ತರುವ ಈ ಪ್ರತಿಮೆಗಳು ಇವರಿಬ್ಬರ ಅಭಿವ್ಯಕ್ತಿಯ ಕ್ರಿಯಾಶೀಲತೆಯನ್ನು, ಸೃಜನಾತ್ಮಕತೆಯನ್ನು ಪ್ರತಿಬಿಂಬಿಸುತ್ತವೆ.

ತೇಜಸ್ವಿ ಅವರ ಕೃತಿಯಲ್ಲಿ ಬರುವ ಊರಿನ ಹೆಸರುಗಳೂ ಕೂಡ ಇಡೀ ಊರಿನ ಒಳಗಿನ ಘಟನೆಗಳ, ಸನ್ನಿವೇಶಗಳನ್ನು ಧ್ವನಿಸುವುದು ವೈಶಿಷ್ಟ್ಯ. ಬಹುಷಃ ಕಾರಂತರ 'ಮೈಮನಗಳ ಸುಳಿ'ಯಲ್ಲಿ ಬರುವ 'ಬಸರೂರು' ಈ ಬಗೆಯ

ಸಾಂಕೇತಿಕ ಅರ್ಥ ಧ್ವನಿಸುತ್ತದೆ. ತೇಜಸ್ವಿಯವರು ಈ ಬಗೆಯ ತಂತ್ರವನ್ನು ಕಾರಂತರಿಂದ ಪ್ರೇರಿತರಾಗಿ ಬಳಸಿದ್ದಾರೆ ಎನಿಸುತ್ತದೆ.

'ಜುಗಾರಿಕ್ರಾಸ್' ಊರಿನಲ್ಲಿ ಹಣಕ್ಕಾಗಿ ಮನುಷ್ಯರು ನಡೆಸುವ ಕಪಟ, ವಂಚನೆ, ಮೋಸ, ಹಿಂಸೆಗಳನ್ನು ಸಾಂಕೇತಿಕವಾಗಿ ಪ್ರತಿನಿಧಿಸುತ್ತದೆ. ಅದೇ ರೀತಿ ಚಿದಂಬರ ರಹಸ್ಯದ 'ಕೆಸರೂರು' ಊರಿನ ರಾಜಕಾರಣ, ಜಾತಿ, ವೈಷಮ್ಯ, ಸ್ವಜನಪಕ್ಷಪಾತ, ನೈತಿಕತೆಯ ದಾರಿದ್ರ್ಯಗಳನ್ನು ಧ್ವನಿಸುತ್ತದೆ. 'ಗೊಂದಲಪುರ' ಮಾಯಲೋಕ ಕಾದಂಬರಿಯಲ್ಲಿ ಬರುವ ಊರು. ಇದೂ ಕೂಡ ಇಡೀ ಊರಿನ ಗೊಂದಲ ವ್ಯವಸ್ಥೆಯ ವ್ಯಂಗ್ಯ, ಜಾತಿ ಜಗಳ, ಎಲ್ಲವೂ ಸೇರಿ ಉಂಟಾಗುವ ಗೊಂದಲಗಳಿಗೆ ಪ್ರತೀಕವಾಗಿದೆ. ಹೀಗೆ ತೇಜಸ್ವಿ ಅವರ ಕತೆಗಳು, ಕಾದಂಬರಿಗಳು ಭಿನ್ನ ಭಿನ್ನ ನೆಲೆಯಲ್ಲಿ ಹೊಸ ಹೊಸ ಅರ್ಥಗಳನ್ನು ಪಡೆದುಕೊಳ್ಳುತ್ತಾ ಸಾಗುತ್ತವೆ. ಆದ್ದರಿಂದಲೇ ತಮ್ಮ ವಿಶಿಷ್ಟ ಕಥನತಂತ್ರ, ಭಾಷೆಯ ಬಳಕೆ, ನಿಗೂಢತೆ, ಶೋಧನಾ ತತ್ತ್ವಗಳಿಂದ ಇತರ ಲೇಖಕರಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತಾರೆ. ಅದು ತೇಜಸ್ವಿ ಅವರ ವೈಶಿಷ್ಟ್ಯವೂ ಹೌದು. ಈ ಬಗೆಯ ತಂತ್ರ ವೈವಿಧ್ಯವನ್ನು ಕುವೆಂಪು ಅವರಲ್ಲಿ ಗುರುತಿಸುವುದು ಬಹಳ ಕಷ್ಟ. ಕುವೆಂಪು ಅವರ ಕಥನ ತಂತ್ರಗಳಿಂದ ಪ್ರೇರಿತರಾಗಿದ್ದರೂ ಈ ಬಗೆಯ ಭಿನ್ನ ನಿಲುವು, ಹೊಸ ಸಾಧ್ಯತೆಗಳನ್ನು ಧ್ವನಿಸುವ ತೇಜಸ್ವಿ ಅಭಿವ್ಯಕ್ತಿಯಲ್ಲಿ ಒಂದು ಬಗೆಯ ಜಿಗಿತವನ್ನು ಕಾಣಬಹುದು. ಇದು ಬಹುಷಃ ಕನ್ನಡ ಸಾಹಿತ್ಯದಲ್ಲಿ ಓದುಗರು ಕಡಿಮೆ ಆಗುತ್ತಿರುವ ಸನ್ನಿವೇಶದಲ್ಲಿ ಭಿನ್ನಬಗೆಯ, ವಿಭಿನ್ನ ನೆಲೆಯ ಅಭಿವ್ಯಕ್ತಿ ಸಾಧ್ಯತೆಗಳನ್ನು ಹುಟ್ಟು ಹಾಕಬೇಕಾದ ಅನಿವಾರ್ಯತೆಯನ್ನು ಅರ್ಥ ಮಾಡಿಕೊಂಡಿರುವುದರ ಫಲಿತವೇ ಅವರ ಕೃತಿಗಳು ಈ ಬಗೆಯ ತಂತ್ರ ವೈವಿಧ್ಯ ಪಡೆಯಲು ಸಾಧ್ಯವಾಗಿದೆ. ಅದನ್ನು ಅವರು ತಮ್ಮ 'ಹೊಸದಿಗಂತದೆಡೆಗೆ' ಲೇಖನದಲ್ಲಿ ಚರ್ಚಿಸಿರುವುದನ್ನು ಗಮನಿಸಿದಾಗ ಅರ್ಥವಾಗುತ್ತದೆ.

# ಅಧ್ಯಾಯ – ೬

# ಫಲಿತಗಳು

ಐದು ವರ್ಷಗಳ ದೀರ್ಘ ಅಧ್ಯಯನದ ನಂತರ ಪ್ರೌಢಪ್ರಬಂಧ ಸಿದ್ಧವಾಗಿದೆ. ಅಧ್ಯಯನದ ಹಾದಿಯಲ್ಲಿ ಪ್ರಸ್ತುತ ಅಧ್ಯಯನದ ಮೂಲಕ ಕುವೆಂಪು ಮತ್ತು ತೇಜಸ್ವಿ ಅವರ ಕಥನ ಸಾಹಿತ್ಯದಲ್ಲಿ ಆಯ್ದ ಪ್ರಧಾನ ಪರಿಕಲ್ಪನೆಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಬ್ಬರೂ ಲೇಖಕರ ಕೃತಿಗಳಲ್ಲಿ ವ್ಯಕ್ತವಾಗಿರುವ ಈ ಆಯ್ದ ಪರಿಕಲ್ಪನೆಗಳನ್ನು ತೌಲನಿಕ ವಿಶ್ಲೇಷಣೆಗೆ ಒಳಪಡಿಸಿ, ಕಂಡುಕೊಂಡ ಫಲಿತಗಳು, ಅಧ್ಯಯನದ ಸಂದರ್ಭದಲ್ಲಿ ಉದ್ಭವಗೊಂಡ ಪ್ರಶ್ನೆಗಳು, ಅದಕ್ಕೆ ಕಂಡುಕೊಂಡ ಉತ್ತರಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ. ಈ ಅಂಶಗಳೆಲ್ಲ ಈ ಅಧ್ಯಯನದ ಗ್ರಹಿಕೆಯಲ್ಲಿ ಪ್ರಸ್ತುತ ಕಂಡುಕೊಂಡ ಸತ್ಯಗಳಾಗಿವೆ.

ಯಾವುದೇ ವಸ್ತು ಶೂನ್ಯದಿಂದ ನಿರ್ಮಿತವಾಗುವುದಿಲ್ಲ. ನಾವು ಕಂಡ, ಪಡೆದ ಅನುಭವಗಳು ಮೂರ್ತಗೊಂಡಾಗ ಮಾತ್ರ ಸಾಹಿತ್ಯಕೃತಿಯೊಂದರ ನಿರ್ಮಾಣ ಸಾಧ್ಯ. ಈ ಕಾರ್ಯದಲ್ಲಿ ಲೇಖಕನಿಗೆ ತಾನು ಬೆಳೆದ ಪರಿಸರ, ವಾಸಿಸುವ ಪರಿಸರ, ಆಸಕ್ತಿ, ಪ್ರೇರಣೆ, ಪ್ರಭಾವ ಎಲ್ಲವೂ ಸಂಶ್ಲೇಷಗೊಳ್ಳುತ್ತವೆ. ಆಗ ಮಾತ್ರ ಒಂದು ಕಲಾಕೃತಿಯ ನಿರ್ಮಾಣ ಪರಿಪೂರ್ಣವಾಗುತ್ತದೆ. ಈ ದಿಸೆಯಲ್ಲಿ ಮಲೆನಾಡಿನಿಂದ ಪ್ರಭಾವಿತರಾಗಿರುವ ಕುವೆಂಪು ಮತ್ತು ತೇಜಸ್ವಿ ಅವರ ಕಥನ ಸಾಹಿತ್ಯವನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಬೇಕೆಂದು ನನ್ನ ಉತ್ಕಟ ಆಕಾಂಕ್ಷೆಯಾಗಿತ್ತು. ಒಂದೇ ಪ್ರಾದೇಶಿಕ ಹಿನ್ನಲೆ ಇದ್ದರೂ ಪರಿಸರ ಆಧುನಿಕತೆ, ಸಮಾಜ , ನಂಬಿಕೆ, ಬೇರೆ ಬಗೆಗಿನ ಇಬ್ಬರ ದೃಷ್ಟಿಕೋನ, ಧೋರಣೆಗಳನ್ನು ಅರಿಯುವ ಪ್ರಯತ್ನ ಜೊತೆಗೆ ಈ ಪರಿಕಲ್ಪನೆಗಳನ್ನು ತಮ್ಮ ಕೃತಿಗಳಲ್ಲಿ ಅನುಸಂಧಾನಗೊಳಿಸಿರುವ ಕ್ರಮವನ್ನು ಪರಸ್ಪರ ಹೋಲಿಸಿ 'ಸಾದೃಶ್ಯ ವೈದೃಶ್ಯ'ಗಳ ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸಿ ಗ್ರಹಿಸಿಕೊಳ್ಳುವ ಹಂಬಲವಾಗಿತ್ತು. ಈ ಉದ್ದೇಶ ಪ್ರಸ್ತುತ ಪ್ರಬಂಧದಲ್ಲಿ ಎಂದು ಭಾವಿಸಲಾಗಿದೆ.

ಕುವೆಂಪು ಮತ್ತು ತೇಜಸ್ವಿ ಅವರ ಕಥೆ-ಕಾದಂಬರಿಗಳು ಸಮಕಾಲೀನ ಲೇಖಕರಿಗಿಂತ ಭಿನ್ನವಾಗಿ ಪ್ರಕಟವಾಗುತ್ತವೆ. ಪರಂಪರೆ ಹಾಗೂ ಸಮಕಾಲೀನ ಬದುಕಿಗೆ ಸಮಾಜೋಧಾರ್ಮಿಕ ಸ್ಥಿತ್ಯಂತರಗಳಿಗೆ ಇವರೀರ್ವರು ತೋರುವ ಪ್ರತಿಕ್ರಿಯೆ ಹಾಗೂ ತಳೆಯುವ ನಿಲುವುಗಳು ವಿಶಿಷ್ಟವಾಗಿವೆ. ಈ ಹಿನ್ನಲೆಯಲ್ಲಿ ಇವರಿಬ್ಬರ ಕಥೆ, ಕಾದಂಬರಿಗಳಲ್ಲಿ ವ್ಯಕ್ತವಾಗಿರುವ 'ಪರಿಸರ' 'ಸಾಮಾಜಿಕ ಪ್ರಜ್ಞೆ' 'ಆಧುನಿಕತೆ' 'ಬೇಟೆ' ಹಾಗೂ 'ಅಭಿವ್ಯಕ್ತಿ'ಯ ನೆಲೆಗಳನ್ನು ಅಧ್ಯಯನ ಮಾಡಲಾಗಿದೆ ಹಾಗೂ ಇವುಗಳ ಬಗ್ಗೆ ಇಬ್ಬರೂ ಲೇಖಕರ ದೃಷ್ಟಿ, ಧೋರಣೆ, ತಳೆದಿರುವ ನಿಲುವುಗಳನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಇಬ್ಬರ ಕತೆ ಕಾದಂಬರಿಗಳಲ್ಲಿ 'ಪರಿಸರ'ದ ಬಗೆಗಿನ ಗ್ರಹಿಕೆ, ಧೋರಣೆಗಳಲ್ಲಿ ಇರುವ ವೈದೃಶ್ಯಗಳನ್ನು ಗುರುತಿಸಲಾಗಿದೆ. ಕುವೆಂಪುರವರು ಪರಿಸರವನ್ನು ಆಧ್ಯಾತ್ಮಿಕವಾಗಿ ಪರಿಭಾವಿಸುತ್ತಾರೆ. ಇವರ ಪರಿಸರದ ಬಗೆಗಿನ ಚಿಂತನೆಗಳಲ್ಲಿ ಅಖಂಡದೃಷ್ಟಿ, ತನ್ಮಯತೆ, ಭಾವಪರವಶತೆಯನ್ನು ಕಾಣಬಹುದು. ಅದೇ ರೀತಿ ತೇಜಸ್ವಿಯವರು ಪರಿಸರದ ನಿಗೂಢವನ್ನು ಅಚ್ಚರಿಯ ಕಣ್ಣುಗಳಿಂದ ಕಾಣುತ್ತಾರೆ. ಪರಿಸರದ ಈ ಅಚ್ಚರಿ, ವಿಸ್ಮಯಗಳನ್ನು ಬೆದಕಿ, ಕೆದಕಿ ನೋಡುತ್ತಾರೆ. ಇವುಗಳಿಗೆ ಕಾರ್ಯ-ಕಾರಣ ಸಂಬಂಧ ಹುಡುಕುತ್ತಾರೆ. ತಾತ್ವಿಕ ಜಿಜ್ಞಾಸೆಗೆ ತೊಡಗುತ್ತಾರೆ. ಪರಿಸರ ನಾಶದ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾರೆ. ಇವರ ಕೃತಿಗಳು 'ಪರಿಸರ ಪ್ರಜ್ಞೆ'ಯ ಆಯಾಮ ಪಡೆದುಕೊಳ್ಳುತ್ತವೆ.

ಇಬ್ಬರೂ ಲೇಖಕರು ಪರಿಸರದ ವರ್ತಮಾನ ಸಂವೇದಿ ನೆಲೆಯಲ್ಲಿ ಪರಿಸರವನ್ನು ಪ್ರತಿನಿಧಿಸುತ್ತಾರೆ. ಮಲೆನಾಡಿನ ಪರಿಸರದಲ್ಲಿ ನಿಸರ್ಗ ಹಾಗೂ ಮನುಷ್ಯ ನಡುವಿನ ಸಂಬಂಧವನ್ನು ಅದರ ಭೀಕರತೆ, ಸೂಕ್ಷ್ಮ ಗ್ರಹಿಕೆಯಿಂದ ಹಿಡಿದಿರುವುದನ್ನು ಇಬ್ಬರ ಕೃತಿಗಳಲ್ಲಿ ಗುರುತಿಸಬಹುದು. 'ಪರಿಸರ'ದ ವರ್ಣನೆಯ ಅಂಶವನ್ನು ಗಮನಿಸಿದಾಗ, 'ತೇಜಸ್ವಿಯವರಿಗಿಂತ ಕುವೆಂಪು ಮುಖ್ಯವಾಗುತ್ತಾರೆ. ಅದೇ ರೀತಿ ಪರಿಸರ ಪ್ರಜ್ಞೆ, ಕಾಳಜಿ, ಪರಿಸರದ ಮಾಹಿತಿ ನೀಡುವ ವಿಷಯದಲ್ಲಿ ಕುವೆಂಪು ಅವರಿಗಿಂತ ತೇಜಸ್ವಿ ಮುಖ್ಯರಾಗುತ್ತಾರೆ' ಎಂಬ ಅಂಶವನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಇದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಮಹತ್ವಪೂರ್ಣ ಅಂಶವಾಗಿದೆ.

ಸಾಮಾಜಿಕ ಪ್ರಜ್ಞೆ ಸಾಹಿತಿಯ ಮೂಲ ಕಳಕಳಿ ಮತ್ತು ಜವಾಬ್ದಾರಿಯಾಗಿದೆ. ತೇಜಸ್ವಿ ಮತ್ತು ಕುವೆಂಪು ಇಬ್ಬರೂ ಮಲೆನಾಡಿನ ಸಾಮಾಜಿಕ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸಿ, ನೈಜ ಅನುಭವ ಪಡೆದಿರುವ ಕಾರಣದಿಂದ ಮಲೆನಾಡಿನ ಸಮಾಜದ ವಾಸ್ತವಿಕತೆಯನ್ನು ಸಶಕ್ತಗೊಳಿಸಿದ್ದಾರೆ. ಇಬ್ಬರ ಸಾಹಿತ್ಯದಲ್ಲೂ ಅಪಾರವಾದ ಲೋಕಾನುಭವವಿದೆ. ಸಾಮಾಜಿಕ ಬದುಕಿನ ಚಿತ್ರಣ ಸಾಮಾನ್ಯವಾಗಿ ಎಲ್ಲಾ ಕಥೆ-ಕಾದಂಬರಿಗಳ ಪ್ರಧಾನ ಅಂಶವಾದರೂ ಅಭಿವ್ಯಕ್ತಿಯಲ್ಲಿ ಭಿನ್ನತೆಯಿರುತ್ತದೆ. ಇಬ್ಬರೂ ಲೇಖಕರು ಸಾಮಾಜಿಕ ಬದುಕನ್ನು, ಸೂಕ್ಷ್ಮವಾಗಿ ನೋಡಿದ್ದಾರೆ. ಸಮಾಜದಲ್ಲಿನ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನ, ಸಾಂಪ್ರದಾಯಿಕ ಬದುಕನ್ನು ವೈಜ್ಞಾನಿಕವಾಗಿ ಚಿಂತನೆಗೊಳಪಡಿಸುವುದನ್ನು ಕಾಣಬಹುದು.

ಅಲ್ಲದೆ, ಮಲೆನಾಡಿನ ಸಮಾಜದಲ್ಲಿನ ಆಚಾರ-ವಿಚಾರಗಳನ್ನು ಹೊಸ ದೃಷ್ಟಿಕೋನದಿಂದ ನೋಡುವ ಕ್ರಮ, ಸಂದರ್ಭಾನುಸಾರ ಸಮೂಹಕ್ಕೂ, ವ್ಯಕ್ತಿತ್ವಕ್ಕೂ ಬೆಲೆ ನೀಡುವ ಔದಾರ್ಯವನ್ನು ಕಾಣಬಹುದು. ಇಬ್ಬರೂ ಲೇಖಕರ ಕೃತಿಗಳಲ್ಲಿ ಸಾಮಾಜಿಕತೆಯ ಅಂಶಗಳು 'ಧರ್ಮನಿರಪೇಕ್ಷ ಪ್ರಜ್ಞೆ' 'ಶೋಷಣೆ ವಿರೋಧಿ ಪ್ರಜ್ಞೆ' ಹಾಗೂ 'ವೈಚಾರಿಕ ಪ್ರಜ್ಞೆಗಳ ನೆಲೆ'ಯಲ್ಲಿ ಮೂಡಿಬಂದಿದ್ದು, ಕುವೆಂಪು ಅವರ 'ಶ್ರೀ ಸಾಮಾನ್ಯತತ್ತ್ವ' 'ವಿಶ್ವಮಾನವ ಪ್ರಜ್ಞೆ' ತೇಜಸ್ವಿಯವರಲ್ಲಿ ಮುಂದುವರೆದಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗ್ರಹಿಸಿಸಲಾಗಿದೆ.

ವಸಾಹತುಶಾಹಿ ಆಗಮನದಿಂದ ಉಂಟಾದ ಆಧುನಿಕತೆ ಹಾಗೂ ಅದುಬಿಟ್ಟು ಹೋದ ಸಂದರ್ಭದಲ್ಲಿನ ಮಲೆನಾಡಿನ ಸಾಮಾಜಿಕ ಬದುಕಿನ ಸ್ಥಿತ್ಯಂತರಗಳನ್ನು ಇಬ್ಬರೂ ಲೇಖಕರು ಚಿತ್ರಿಸಿದ್ದಾರೆ. ಕುವೆಂಪು ಅವರ ಕೃತಿಗಳಲ್ಲಿ ಆಗತಾನೆ ಕಾಲಿಡುತ್ತಿದ್ದ 'ಆಧುನಿಕತೆ'ಯ ಆಗಮನ, ಅದರ ಸೆಳೆತ, ಸಂಭ್ರಮಗಳ ಜೊತೆಗೆ ಅದರ ಸಂಸರ್ಗದಿಂದ ಮಲೆನಾಡಿನ ಪರಂಪರಾಗತ ಸಂಪ್ರದಾಯ ನಂಬಿಕೆಗಳೊಂದಿಗೆ ಏರ್ಪಡುವ ತಿಕ್ಕಾಟ, ಸ್ಥಿತ್ಯಂತರಗಳನ್ನು ಕಾಣಬಹುದು. ಆದರೆ, ತೇಜಸ್ವಿ ಅವರ ಸಾಹಿತ್ಯದಲ್ಲಿ ಜಾಗತೀಕರಣ, ನಗರೀಕರಣಗಳು ತೀವ್ರಗತಿಯ ಬದಲಾವಣೆ ಉಂಟುಮಾಡಿದ್ದ ಸಮಾಜದ ಚಿತ್ರಣವಿದೆ. ಇವರ ಕೃತಿಗಳಲ್ಲಿ ಆಧುನಿಕತೆಯೆಡೆಗೆ ಸಂಭ್ರಮ-ತುಡಿತ ಇಲ್ಲದಿದ್ದರೂ 'ಆಧುನಿಕತೆ'ಯನ್ನು ವಿರೋಧಿಸುವ ಅಂಶವಿಲ್ಲ. ಆದರೆ ಆಧುನಿಕತೆಯ ಪ್ರಭಾವದಿಂದ ಆಗುತ್ತಿರುವ ಅವಾಂತರಗಳನ್ನು ಸಂಘರ್ಷಗಳನ್ನು, ಸಂಸ್ಕೃತಿ ನಾಶದಂತಹ ಗಂಭೀರ ಅಂಶಗಳ

ಮೇಲೆ ಕೇಂದ್ರಿಕರಣಗೊಂಡಿದೆ. ಆಧುನಿಕತೆಯ ಅನುಸಂಧಾನದ ನೆಲೆಗಳು ಮತ್ತು ಇಬ್ಬರ ಗ್ರಹಿಕೆಯ ನೆಲೆ ಒಂದೇ. ಅದು 'ಗ್ರಾಮೀಣ ಸಂಸ್ಕೃತಿಯ ವಿಘಟನೆಯ ದುರಂತವನ್ನು ಶೋಧಿಸುವುದೇ' ಆಗಿದೆ.

ಸ್ಥಳೀಯತೆ ಮತ್ತು ಜಾಗತೀಕರಣ ಇವೆರಡೂ ಒಂದಾದಂತಹ ಪರಿಸರ ಎಲ್ಲ ದೇಶಗಳಲ್ಲೂ ನಿರ್ಮಾಣವಾಗಿದೆ. ಸ್ಥಳೀಯತೆ ನಾಶವಾಗುತ್ತಿರುವ ಅಪಾಯಗಳು. ಜಾಗತೀಕರಣದಿಂದ ಉಂಟಾಗುತ್ತಿರುವ 'ಆಧುನಿಕತೆ'ಯಿಂದಾಗಿ ಪಲ್ಲಟಗೊಂಡ ಜಗತ್ತು ನಿರ್ಮಾಣವಾಗುತ್ತಿದೆ. ಮೌಲ್ಯಗಳು ಅಧಃಪತನಗೊಳ್ಳುತ್ತಿವೆ. ನೈತಿಕತೆ. ಪ್ರೀತಿ. ಸಹಿಷ್ಣುತೆ ನಾಶವಾಗುತ್ತಿದೆ. ಹೀಗಾಗಿ ಆಧುನಿಕತೆಯನ್ನು ಆಡಂಬರವಾಗಿ ಆಚರಿಸದೆ. ಅಗತ್ಯಕ್ಕೆ ತಕ್ಕಂತೆ ಅನುಸರಿಸಬೇಕು ಎಂಬ ಆಶಯವನ್ನೇ ಇಬ್ಬರ ಕಥನಗಳು ಧ್ವನಿಸುತ್ತವೆ. ಕುವೆಂಪು ಅವರದು 'ಆಧುನಿಕತೆಯು ಸಾಮಾಜಿಕ ಸಮಸ್ಯೆಗಳಿಗೆ ಮೌಢ್ಯಕ್ಕೆ ದೀವಿಗೆಯಾಗಬೇಕು' ಎಂಬ ಆಶಯವಾಗಿದೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಕೃತಿಗಳಲ್ಲಿ ವ್ಯಕ್ತವಾಗಿರುವ ಆಧುನಿಕತೆಯ ಅನುಸಂಧಾನ ವರ್ತಮಾನ ಸಂವೇದಿ ನೆಲೆಯಲ್ಲಿ ಪ್ರಸ್ತುತವಾಗುತ್ತದ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಬದಲಾಗುತ್ತಿರುವ ಇಂದಿನ ಸಮಾಜ ಹಾಗೂ ಸಂಸ್ಕೃತಿಯಲ್ಲಿ ನಾನಾ ಕಾರಣಗಳಿಂದಾಗಿ ಬೇಟೆಯು ಜನಜೀವನದಿಂದ ಕಣ್ಮರೆಯಾಗುತ್ತಿದೆ. ಸಾಹಿತ್ಯದಲ್ಲಿ ಬೇಟೆಯ ಸ್ಥಾನ. ಮಲೆನಾಡಿನ ಪರಿಸರದಲ್ಲಿ 'ಬೇಟೆ'ಯ ಚಿತ್ರಣವನ್ನು ಗುರ್ತಿಸಿ ವಿಶ್ಲೇಷಿಸಲಾಗಿದೆ. ಈ ಇಬ್ಬರ ಸಾಹಿತ್ಯದಲ್ಲಿ ಕಂಡುಬರುವ ಬೇಟೆಯ ಸನ್ನಿವೇಶಗಳನ್ನು ಅವಲೋಕಿಸಿದಾಗ ಬೇಟೆಯ ಬಗೆಗಿನ ಇಬ್ಬರ ಧ್ಯೇಯ-ಧೋರಣೆಗಳಲ್ಲಿರುವ ಭಿನ್ನನಿಲುವುಗಳನ್ನು ಕಂಡುಕೊಳ್ಳಲಾಗಿದೆ. ತಮ್ಮ ಸಾಹಿತ್ಯದಲ್ಲಿ ಬೇಟೆಯನ್ನು ಕೇವಲ ಚಿತ್ರಣವಾಗಿ ತರದೆ. ಮಲೆನಾಡಿನ ಬದುಕಿನ ರಾಗ-ದ್ವೇಷಗಳ. ನೋವು-ನಲಿವುಗಳ ಸಂವೇದನೆಯನ್ನು ಹಿಡಿದಿಟ್ಟಿದ್ದಾರೆ. ಇವರು 'ಬೇಟೆ'ಯ ವಿಷಯ ಚಿತ್ರಿಸುವ ಸನ್ನಿವೇಶದಲ್ಲಿ ಅನುಭವಕ್ಕೆ ಆಕಾರ ಕೊಡುವ ಕ್ರಿಯೆ ನಡೆಯುತ್ತದೆ. ತಾನು ಪಡೆದ ಅನುಭವವನ್ನು ಕೆದಕಿ ನೋಡದೆ ಅದರ ಸ್ವರೂಪವನ್ನು ಸ್ಪಷ್ಟವಾಗಿ ಪ್ರಾಮಾಣಿಕವಾಗಿ ಗ್ರಹಿಸದೆ. ಅದನ್ನು ಕೃತಿಯಲ್ಲಿ ತರಲು ಸಾಧ್ಯವಿಲ್ಲ. ಮಲೆನಾಡಿನ ಬೇಟೆಯ ಚಿತ್ರಗಳನ್ನು ಕಟ್ಟಿಕೊಡುವಲ್ಲಿ ಕುವೆಂಪು ಮತ್ತು ತೇಜಸ್ವಿ ಇಬ್ಬರೂ ತಮ್ಮ ಅನುಭವಗಳೊಡನೆ ಮುಖಾಮುಖಿಯಾಗಿದ್ದಾರೆ.

ಆದ್ದರಿಂದಲೇ ಇವರಿಗೆ ಕನ್ನಡ ಸಾಹಿತ್ಯದಷ್ಟೇ ವಿಶಿಷ್ಟ ಎನಿಸುವ ಬೇಟೆಯ ಅನುಭವಗಳನ್ನು ಕಟ್ಟಿಕೊಡಲು ಸಾಧ್ಯವಾಯಿತು. ತೇಜಸ್ವಿಯವರು ಪರಿಭಾವಿಸುವ "ಶಿಕಾರಿ"ಯ ಅಂಶ ಶೋಧದ ಒಂದು ಹೊಸ ಮುಖವನ್ನು ತೆರೆದಿಡುತ್ತದೆ. ಕುವೆಂಪುರವರ ಬೇಟೆ ಚಿತ್ರಗಳಿಗಿಂತ ಭಿನ್ನವಾದ ಆಯಾಮ ಪಡೆಯುತ್ತದೆ. ಶಿಕಾರಿಯ ನಿರಂತರ ಕಾಯುವಿಕೆಯಲ್ಲಿ ಏಕಾಂಗಿತನದಲ್ಲಿ ಉದ್ಭವಿಸುವ ಅವರ ಚಿಂತನೆಗಳಲ್ಲಿ 'ಪರಿಸರ ಪ್ರಜ್ಞೆ'ಯ ಹೊಸ ಹೊಳಹು ಗೋಚರಿಸುತ್ತದೆ. ಶಿಕಾರಿಯ ಅನುಭವದಲ್ಲಿ ಅನನ್ಯತೆಯನ್ನು ಅನುಭವಿಸುವುದು. ಪರಿಭಾವಿಸುವುದನ್ನು ಕಾಣಬಹುದು.

ಈ ಇಬ್ಬರೂ ಲೇಖಕರ ಬೇಟೆಯ ಚಿತ್ರಗಳು ಸೂಕ್ಷ್ಮ ಬೆರಗುಗಳಿಂದ ವಿಶಿಷ್ಟ ಎನಿಸುತ್ತವೆ. ಇಬ್ಬರಿಗೂ ಬೇಟೆ ಒಂದು ನೆಪ ಮಾತ್ರ, ಅದರಾಚೆಗೆ ಅವರ ನಿಜವಾದ ಒಲವು ನಿಸರ್ಗವನ್ನು ಮನದಣಿಯೆ ನೋಡಿ ತಣಿಸುವುದು. ಅದರ ರಹಸ್ಯಗಳನ್ನು ಅಚ್ಚರಿಗಣ್ಣಿನಿಂದ ವೀಕ್ಷಿಸುತ್ತಾ ಮೈಮರೆಯುವುದು ಈ ಬಗೆಯ ತನ್ಮಯತೆ ಸಮಕಾಲೀನ ಇತರ ಲೇಖಕರಿಗಿಂತ ವಿಶಿಷ್ಟವಾಗಿವೆ. ಕುವೆಂಪು ನೀಡುವ ಬೇಟೆಯ ವಿಧಗಳು, ವಿಧಾನಗಳು ಹಾಗೂ ಬೇಟೆಗೆ ಬಳಸುವ ಪರಿಕರಗಳ ಬಗೆಗೆ ಅಗಾಧಮಾಹಿತಿ ಅವರ ಕೃತಿಗಳಲ್ಲಿ ನೋಡಬಹುದು. ತೇಜಸ್ವಿ ಅವರ 'ಬೇಟೆ ಸನ್ನಿವೇಶ' ಗಳು ಪರಿಸರದ ಬಗೆಗೆ ಅವರ ಚಿಂತನೆಗಳು, ತರ್ಕಗಳು ಹಾಗೂ ಜಿಜ್ಞಾಸೆಗಳ ದಿಸೆಯಿಂದ ಕುವೆಂಪು ಅವರಿಂದ ಭಿನ್ನ ಆಯಾಮ ಪಡೆಯುವುದರಿಂದ ವರ್ತಮಾನ ಸಂವೇದಿ ನೆಲೆಯಲ್ಲಿ ಮುಖ್ಯವಾಗುತ್ತಾರೆ. ಕನ್ನಡ ಸಾಹಿತ್ಯದಲ್ಲೇ ಇವರಿಬ್ಬರಷ್ಟು 'ಸಮೃದ್ಧ ಬೇಟೆ ಸಾಹಿತ್ಯ'ವನ್ನು ಬೇರೆ ಯಾವ ಲೇಖಕರೂ ಕಟ್ಟಿಕೊಡಲು ಸಾಧ್ಯವಾಗಿಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ. ಅತೀ ಮುಖ್ಯವಾಗಿ, ಪ್ರಸ್ತುತ ಅಧ್ಯಯನದಲ್ಲಿ ಇಬ್ಬರೂ ಲೇಖಕರ ಬೇಟೆಯ ಅನುಭವಾತ್ಮಕ ನೆಲೆಗಳ ವಿಶ್ಲೇಷಣೆಗಳ ಮೂಲಕ ಗುರುತಿಸಿರುವ ಅಂಶಗಳು ಹೊಸಬಗೆಯದಾಗಿದ್ದು, ಸಂಶೋಧನೆಯ ಹೆಚ್ಚುಗಾರಿಕೆಯಾಗಿದೆ.

ವ್ಯಕ್ತಿಯ ಅನುಭವದ ಮತ್ತು ಸ್ಪಂದನೆಯ ವಲಯದೊಂದಿಗೆ ಆತನ ಅಭಿವ್ಯಕ್ತಿ ಸಾಮರ್ಥ್ಯ ರೂಪಪಡೆದುಕೊಳ್ಳುತ್ತದೆ. ಹೀಗೆ ಪ್ರತಿಪಾದಿಸ ಹೊರಟ ವಿಚಾರದ ಮೇಲೆ ಕೃತಿಯೊಂದು ರೂಪುಗೊಳ್ಳುತ್ತದೆ. ಕುವೆಂಪು ಮತ್ತು ತೇಜಸ್ವಿ ಇಬ್ಬರ ಕಥನ ಸಾಹಿತ್ಯವು ವಿಭಿನ್ನ ಅಭಿವ್ಯಕ್ತಿಯ ಸಾಧ್ಯತೆಗಳನ್ನು ತೆರೆದಿಡುತ್ತವೆ. ಕಾದಂಬರಿಯ ಶಿಲ್ಪ ಹಾಗೂ ವಸ್ತು, ತಂತ್ರ, ಭಾಷಾ ಬಳಕೆಯಲ್ಲಿ ಕೃತಿಯೊಂದನ್ನು

ಪ್ರಸ್ತುತ ಪಡಿಸುವಲ್ಲಿ ಇಬ್ಬರ ಸೃಜನಾತ್ಮಕತೆ. ಪ್ರಯೋಗಶೀಲ ಅಂಶಗಳನ್ನು ಗುರುತಿಸಲಾಗಿದೆ.

ಇಬ್ಬರ ಕಥೆ-ಕಾದಂಬರಿಗಳ 'ವಸ್ತು'ವನ್ನು ಅವುಗಳ ಆಶಯಗಳೊಂದಿಗೆ ಮುಖಾಮುಖಿಯಾಗಿಸಿ ನೋಡಿದಾಗ, ಹಲವು ಸಾಮ್ಯತೆಗಳು ಕಂಡು ಬರುತ್ತವೆ. ಸಮಕಾಲೀನ ಪ್ರಪಂಚದ ಕೊಳಕು ರಾಜಕೀಯ, ಭ್ರಷ್ಟಚಾರ, ಮೂಢನಂಬಿಕೆ, ಅಧಿಕಾರಿಶಾಹಿಗಳ ದಬ್ಬಾಳಿಕೆಯನ್ನು ನೈಜವಾಗಿ ಚಿತ್ರಿಸಿದ್ದಾರೆ. ಅಲ್ಲದೆ, ಈ ಸಾಮಾಜಿಕ, ಧಾರ್ಮಿಕ, ರಾಜಕೀಯ, ನೈತಿಕ ದುರವಸ್ಥೆಯನ್ನು ಬದಲಾಯಿಸಬೇಕಾದ ಅಗತ್ಯ. ಅನಿವಾರ್ಯತೆಗಳೇ ಪ್ರಧಾನ ಆಶಯವಾಗಿವೆ. ಇದಕ್ಕೆ ಪ್ರತಿಯೊಬ್ಬರ ಮನಸ್ಥಿತಿಗಳಲ್ಲಿ ಬದಲಾವಣೆ ಆಗಬೇಕು. ಧನಾತ್ಮಕ ಚಿಂತನೆ, ಊರ್ಧ್ವಮುಖಿ ಚಿಂತನೆಗಳನ್ನು ಮಾಡಬೇಕು ಎಂಬ ಹಂಬಲವನ್ನು ಇಬ್ಬರ ಕೃತಿಗಳಲ್ಲೂ ಗ್ರಹಿಸಲಾಗಿದೆ. ರೂಢಿಗತ ಮೌಲ್ಯಗಳನ್ನು ವಿಮರ್ಶಿಸುತ್ತಾ, ಅವುಗಳಲ್ಲಿನ ಲೋಪ--ದೋಷಗಳಿಗೆ ಇಬ್ಬರೂ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದಾರೆ. 'ಆದರ್ಶ ಸಮಾಜದ ಕಲ್ಪನೆ'ಯೇ ಇವರಿಬ್ಬರ ಕೃತಿಗಳ ಪ್ರಧಾನ ಆಶಯವಾಗಿದೆ.

ತೇಜಸ್ವಿ ಹಾಗೂ ಕುವೆಂಪು ಅವರ ಭಾಷಾಭಿವ್ಯಕ್ತಿಯ ವೈವಿಧ್ಯತೆಯನ್ನು ಗ್ರಹಿಸಲಾಗಿದೆ. 'ಪ್ರಕೃತಿ' ವರ್ಣನೆಯ ಸಂದರ್ಭದಲ್ಲಿ ಕುವೆಂಪು ಸಂಸ್ಕೃತಭೂಯಿಷ್ಠ ಭಾಷೆಯನ್ನೇ ಬಳಸುತ್ತಾರೆ. ಅಲ್ಲದೆ, ಶಿಷ್ಟ ಹಾಗೂ ಕಾವ್ಯ ಭಾಷೆಯನ್ನು ವಿವಿಧ ಸ್ತರಗಳಲ್ಲಿ ಗಂಭೀರವಾಗಿ ದುಡಿಸಿಕೊಂಡಿದ್ದಾರೆ. ನಿಸರ್ಗ ವರ್ಣನೆಗೆ ಬಳಕೆಯಾಗಿರುವ ಭಾಷೆ ಎಲ್ಲೂ ತೊಡಕು ಎನಿಸುವುದಿಲ್ಲ ಭಾವ, ಅರ್ಥ, ಸಂದರ್ಭಗಳು ಸಮಯೋಚಿತ ವಿಷದೀಕರಣದಿಂದ ಹೊರಹೊಮ್ಮಿವೆ. ಇಷ್ಟೇ ಸಶಕ್ತವಾಗಿಯೇ ಸಮಾಜದ ವಿವಿಧ ಸ್ತರದ ಜನರ ಭಾಷೆಯನ್ನು ಸಹ ಬಹಳ ಸಹಜವಾಗಿ ಬಳಸಿದ್ದಾರೆ. ಆ ತೇಜಸ್ವಿ ಅವರ ಭಾಷಾಭಿವ್ಯಕ್ತಿಯಲ್ಲಿ ಕುವೆಂಪು ಅವರಂತೆ ವರ್ಣನಾ ವೈಭವ. ಕಾವ್ಯ ಸತ್ವವನ್ನು ಕಾಣಲು ಸಾಧ್ಯವಿಲ್ಲ. ಇವರು ಬಳಸುವ ಭಾಷೆ ವಿನೋದ ಹಾಗೂ ವಿಡಂಬನಾತ್ಮಕವಾಗಿದೆ. ಇಬ್ಬರಲ್ಲೂ ಇರುವ ಭಾಷಾ ಬಳಕೆಯ ವೈವಿಧ್ಯತೆಯನ್ನು ಅಧ್ಯಯನದಲ್ಲಿ ಗುರುತಿಸಿ . ವಿಶ್ಲೇಷಣೆ ಮಾಡಿ ಕಂಡುಕೊಂಡಿರುವ ಅಂಶಗಳು ಅತ್ಯಂತ ಪ್ರಮುಖವಾಗಿವೆ.

ಕುವೆಂಪು ಮತ್ತು ತೇಜಸ್ವಿಯವರಿಬ್ಬರ ಕೃತಿಗಳಲ್ಲಿ 'ಪ್ರಯಾಣ'ದ ಅಂಶ ಪ್ರಧಾನ ಪಾತ್ರವಹಿಸುತ್ತದೆ. 'ಚಲನಶೀಲನತೆ' ಇಬ್ಬರ ಕಥನಗಳಲ್ಲಿ ಪ್ರಮುಖ ಅಂಶ. ಮೂಲತಃ ಚಲನಶೀಲ ಪ್ರವೃತ್ತಿಯವರಾದ ಇಬ್ಬರಲ್ಲೂ ಈ ಅಂಶ ಕಥನ ತಂತ್ರವಾಗಿ ಮೂಡಿಬಂದಿದೆ. ಈ 'ಪ್ರಯಾಣ'ದ ಮೂಲಕ ತೆರೆದುಕೊಳ್ಳುವ ಬದುಕಿನ ವಾಸ್ತವ ಪ್ರತಿಯೊಬ್ಬರನ್ನು ತಾತ್ವಿಕ ಜಿಜ್ಞಾಸೆಗೆ ತೊಡಗುವಂತೆ ಮಾಡುತ್ತದೆ. ಕಥೆಯ ಜೊತೆಗೆ ಪಡೆದುಕೊಳ್ಳುವ ತಾಂತ್ರಿಕ ಆಯಾಮದಿಂದ ಪ್ರಯಾಣವು ಅಭಿವ್ಯಕ್ತಿಯ ಹೊಸ ಸಾಧ್ಯತೆಯನ್ನು ಧ್ವನಿಸುತ್ತದೆ. ತಂತ್ರದ ದೃಷ್ಟಿಯಿಂದ ಬಳಸುವ ಪ್ರತಿಮೆಗಳು ಕಥಾನಕಕ್ಕೆ ಹೊಸ ಆಯಾಮ ನೀಡುತ್ತವೆ.

ಲೇಖಕನ ಪ್ರತಿಭೆಯು ವಸ್ತುವೊಂದನ್ನು ನಿರ್ವಹಿಸುವಾಗ ಅದು ಸಂಕೇತಗಳಲ್ಲಿ ಸಂಚರಿಸಿ, ಪ್ರತೀಕಗಳಲ್ಲಿ ಮಿಂಚಿ, ಪ್ರತಿಮೆಗಳಲ್ಲಿ ಮಡುಗಟ್ಟಿ ಅನೇಕ ಅರ್ಥಗಳನ್ನು ಪ್ರತಿಫಲಿಸುತ್ತಾ, ಅಭಿವ್ಯಕ್ತಿಗೆ ಸೊಗಸನ್ನೂ, ಅರ್ಥದೀಪ್ತಿ ಹಾಗೂ ಧ್ವನಿ ಪ್ರಚುರತೆಗಳನ್ನು ತಂದುಕೊಡುತ್ತದೆ. ಪ್ರತಿಮೆಗಳು ಕಾವ್ಯಕ್ಕಷ್ಟೇ ಸೀಮಿತವಲ್ಲ. ಗದ್ಯ ಸಾಹಿತ್ಯದಲ್ಲೂ ಬಳಕೆಯಾಗಿರುವುದನ್ನು ಕುವೆಂಪು ಮತ್ತು ತೇಜಸ್ವಿ ಕಥನಗಳಲ್ಲಿ ಕಾಣಬಹುದು. ಇವರಿಬ್ಬರೂ ತಮ್ಮ ಕೃತಿಗಳಲ್ಲಿ ತರುವ ಜೈವಿಕ ಪ್ರತಿಮೆಗಳು ಇಡೀ ಕೃತಿಯಲ್ಲಿ ವಿಶಿಷ್ಟ ರೂಪಕಗಳಾಗುತ್ತವೆ. ಅಲ್ಲದೆ, ಅವು ಧ್ವನಿಸುವ ಅರ್ಥಗಳು, ತಾತ್ವಿಕತೆ, ಸೂಕ್ಷ್ಮತೆಗಳು ಇಬ್ಬರೂ ಲೇಖಕರ ಸೃಜನಾತ್ಮಕತೆಯನ್ನು ಪ್ರತಿಬಿಂಬಿಸುತ್ತವೆ. ಭಿನ್ನ ಭಿನ್ನ ನೆಲೆಯಲ್ಲಿ ಇವರಿಬ್ಬರ ಕಥನವು ಹೊಸ ಹೊಸ ಅರ್ಥಗಳನ್ನು ಪಡೆದುಕೊಳ್ಳುತ್ತಾ ಸಾಗುತ್ತದೆ.

ಕುವೆಂಪು ಅವರ ಕಥನದ ಅಂತಃಸತ್ತ್ವವನ್ನು ತೇಜಸ್ವಿಯಲ್ಲಿ ಕಾಣಬಹುದು. ಅವರ ತತ್ತ್ವ, ಆದರ್ಶಗಳು ತೇಜಸ್ವಿ ಅವರ ಕೃತಿಯಲ್ಲಿ ಭಿನ್ನ ಆಯಾಮಗಳಲ್ಲಿ ಪ್ರಕಟವಾಗುತ್ತವೆ. ಇಬ್ಬರ ಸಾಹಿತ್ಯದ ಆಶಯ, ಫಲಿತಗಳು ಒಂದೇ. ಇವರಿಬ್ಬರ ಗುರಿ ಒಂದೇ, ಆದರೆ ತಲುಪಲು ಬಳಸಿದ ಮಾರ್ಗ ಮಾತ್ರ ಬೇರೆ. ವೈಯಕ್ತಿಕ ನೆಲೆಯಲ್ಲಿ ಪಡೆದ ಮಲೆನಾಡಿನ ಅನುಭವಗಳನ್ನು ಸಾಮುದಾಯಿಕ ನೆಲೆಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಮಲೆನಾಡಿನ ಜೀವನ ಸಮಾಜದ ಅನುಭವಗಳನ್ನು ಎಲ್ಲಾ ಓದುಗರಿಗೂ ಒದಗಿಸಿರುವುದು ಇವರ ಕಥನಗಳ ವೈಶಿಷ್ಟವೆಂದೇ ಹೇಳಬಹುದು.

ಈ ಇಬ್ಬರೂ ಲೇಖಕರನ್ನು ಪರಸ್ಪರ ಪಕ್ಕಕ್ಕಿಟ್ಟು ತೌಲನಿಕವಾಗಿ ವಿಶ್ಲೇಷಣೆಗೊಳಪಡಿಸಿರುವುದು ಇದೇ ಮೊದಲು. ಈ ಹಿಂದೆ ಯಾರೂ ಈ ಪ್ರಯತ್ನವನ್ನು ಮಾಡಿಲ್ಲವಾದ್ದರಿಂದ, ಅಧ್ಯಯನದ ಸಂದರ್ಭದಲ್ಲಿ ನಾನು ಕಂಡುಕೊಂಡ ಹೊಸ ಅಂಶಗಳಾಗಿವೆ. ಪ್ರತಿಯೊಂದು ಕೃತಿಗೂ ಬಹು ಸಾಧ್ಯತೆಗಳಿರುತ್ತವೆ. ಇವರಿಬ್ಬರ ಕಥನ ಸಾಹಿತ್ಯವನ್ನು ವಿಶ್ಲೇಷಣೆಗೆ ಒಳಪಡಿಸಿದಾಗ, ಈ ಬಹುಸಾಧ್ಯತೆಗಳು ದಕ್ಕದೆ ಹೋಗಬಹುದು. ಅಲ್ಲದೇ, ಆಯ್ದ ಪ್ರಧಾನ ಪರಿಕಲ್ಪನೆಗಳಿಗಷ್ಟೇ ಅಧ್ಯಯನವನ್ನು ಸೀಮಿತಗೊಳಿಸಿಕೊಂಡಿದ್ದರ ಫಲವಾಗಿ, ಈ ಅನುಮಾನಗಳು ಕಾಡಿವೆ. ಈ ಅಂಶಗಳು ಮುಂದಿನ ಸಂಶೋಧಕರಿಗೆ ದಕ್ಕಲಿ ಎಂಬುದೇ ಆಶಯ.

## ಅನುಬಂಧ – ೧

# ಪರಾಮರ್ಶನ ಗ್ರಂಥಗಳು

೧) ಅನಂತಮೂರ್ತಿ ಯು.ಆರ್., ಪ್ರಜ್ಞೆ ಮತ್ತು ಪರಿಸರ, ೧೯೭೧, ಅಕ್ಷರ ಪ್ರಕಾಶನ, ಬೆಂಗಳೂರು.

೨) ಅರವಿಂದಮಾಲಗತ್ತಿ (ಸಂ.), ಕುವೆಂಪು–ಕೃತಿವಿಮರ್ಶೆ, ೨೦೦೩. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩) ಅಶೋಕ ಟಿ.ಪಿ.,

- ತೇಜಸ್ವಿ ಕಥನ, ೨೦೧೦, ಅಕ್ಷರ ಪ್ರಕಾಶನ, ಹೆಗ್ಗೋಡು.
- ಪುಸ್ತಕ ಪ್ರೀತಿ, ೨೦೧೦, ವಸಂತ ಪ್ರಕಾಶನ, ಬೆಂಗಳೂರು.
- ಸಾಹಿತ್ಯ ಸಂಬಂಧ, ೨೦೦೮, ಅಕ್ಷರ ಪ್ರಕಾಶನ, ಹೆಗ್ಗೋಡು.

೪) ಆಮೂರ ಜಿ.ಎಸ್.,

- ಕನ್ನಡ ಕಥನ ಸಾಹಿತ್ಯ ಮತ್ತು ಕಾದಂಬರಿ, ೨೦೦೩, ಸ್ವಪ್ನ ಬುಕ್ ಹೌಸ್, ಬೆಂಗಳೂರು.
- ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಹಾಗೂ ಸಂಸ್ಕೃತಿ, ೨೦೦೩, ಸಪ್ನಬುಕ್ ಹೌಸ್, ಬೆಂಗಳೂರು.

೫) ಉದ್ದಂಡಯ್ಯ, ಕುವೆಂಪು ಕಥನ, ೨೦೦೪, ಅಧ್ಯಯನ ಮಂಡಲ ಪ್ರಕಾಶನ, ಬೆಂಗಳೂರು.

೬) ಕರೀಗೌಡ ಬೀಚನಹಳ್ಳಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಬದುಕು– ಬರಹ, ೨೦೧೦, ಸಾಹಿತ್ಯ ಅಕಾಡೆಮಿ, ಬೆಂಗಳೂರು.

೭) ಕಾಕೆಮಾನಿ. ಬೇಟೆ ನೆನಪು. ೨೦೦೬. ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಬೆಂಗಳೂರು.

೮) ಕುವೆಂಪು..

- ಕಾನೂರು ಹೆಗ್ಗಡಿತಿ. ೧೯೯೮. ಉದಯರವಿ ಪ್ರಕಾಶನ. ಮೈಸೂರು.
- ನನ್ನ ದೇವರು ಮತ್ತು ಇತರ ಕಥೆಗಳು. ೨೦೦೫. ಉದಯರವಿ ಪ್ರಕಾಶನ. ಮೈಸೂರು.
- ನೆನಪಿನ ದೋಣಿಯಲ್ಲಿ ೧ -೨. ೨೦೦೫. ಉದಯರವಿ ಪ್ರಕಾಶನ. ಮೈಸೂರು.
- ಮಲೆಗಳಲ್ಲಿ ಮದುಮಗಳು. ೨೦೧೦. ಉದಯರವಿ ಪ್ರಕಾಶನ. ಮೈಸೂರು.
- ಮಲೆನಾಡ ಚಿತ್ರಗಳು. ೨೦೦೫. ಉದಯರವಿ ಪ್ರಕಾಶನ. ಮೈಸೂರು.
- ಸನ್ಯಾಸಿ ಮತ್ತು ಇತರ ಕಥೆಗಳು. ೨೦೦೫. ಉದಯರವಿ ಪ್ರಕಾಶನ. ಮೈಸೂರು.

೯) ಕೃಷ್ಣಕುಮಾರ್ ಸಿ.ಪಿ. (ಅನುವಾದ). ಸಾಹಿತ್ಯ ಪ್ರವೇಶ. ೨೦೦೯. ಚೇತನ ಬುಕ್ ಹೌಸ್. ಮೈಸೂರು.

೧೦) ಗುರುಪಾದ ಮರಿಗುದ್ದಿ (ಸಂ.). ಕುವೆಂಪು ಕಾದಂಬರಿಗಳು. ೨೦೦೪. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಾಶನ.

೧೧) ಗುರುರಾವ್ ಚಾಪಟ್ (ಸಂ.). ಮಲೆನಾಡಿಗ : ಡಾ.ನಾ. ಡಿಸೋಜರ ಸಾಹಿತ್ಯ ಅಧ್ಯಯನ. ೨೦೧೨. ಗೀತಾಂಜಲಿ ಪುಸ್ತಕ ಪ್ರಕಾಶನ. ಶಿವಮೊಗ್ಗ.

೧೨) ಗಿರಡ್ಡಿ ಗೋವಿಂದರಾಜು. ಸಮಗ್ರ ವಿಮರ್ಶೆ. ೨೦೦೧. ಸಪ್ನ ಬುಕ್ ಹೌಸ್.ಬೆಂಗಳೂರು.

೧೩) ಚಕ್ಕೆರೆ ಶಿವಶಂಕರ್ (ಸಂ.), ಸಹ್ಯಾದ್ರಿಯ ಸೂರ್ಯ, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪) ಚಂದ್ರೇಗೌಡ ಬಿ.(ಸಂ.), ತೇಜಸ್ವಿ ನೆನಪು- ಸಂಗ್ರಹ ಲೇಖನಗಳು, ೨೦೦೭, ರಂಗಭಾರತಿ ಪ್ರಕಾಶನ, ಬಳ್ಳಾರಿ.

೧೫) ಚಂದ್ರಶೇಖರ ನಂಗಲಿ ಬಿ., ಈಗಳೆ ಸಾಧ್ಯ, ೨೦೧೦, ಕ್ರೈಸ್ಟ್ ಯೂನಿರ್ವಸಿಟಿ ಪ್ರಕಾಶನ, ಬೆಂಗಳೂರು.

೧೬) ತಾರಿಣಿ ಚಿದಾನಂದ, ಮಗಳು ಕಂಡ ಕುವೆಂಪು, ೨೦೧೦, ಪುಸ್ತಕ ಪ್ರಕಾಶನ, ಮೈಸೂರು.

೧೭) ದೇ.ಜ.ಗೌ.,

- ಕುವೆಂಪು ದರ್ಶನ ಸಂಪುಟ - ೧, ೨, ೩ , ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಸಹ್ಯಾದ್ರಿ : ಕುವೆಂಪು ಅಭಿನಂದನಾ ಗ್ರಂಥ, ೧೯೭೫, ವಿದ್ಯವರ್ಧಕ ಟ್ರಸ್ಟ್, ಮೈಸೂರು.

೧೮) ಧನಂಜಯ ಜೀವಾಳ ಬಿ.ಕೆ., ಕಾಡಿನ ಸಂತ- ತೇಜಸ್ವಿ: ಕೆಲವು ನೆನಪುಗಳು, ೨೦೧೧, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೧೯) ನಟರಾಜ ತಲಘಟ್ಟಪುರ, ಬೇರಿನೊಳಗಿನ ಬೆಳಕು, ೨೦೧೪, ವರ್ಷನಿಧಿ ಪ್ರಕಾಶನ, ಬೆಂಗಳೂರು.

೨೦) ನಟರಾಜ್ ಹುಳಿಯಾರ್ (ಸಂ.), ರಾಮಮನೋಹರ ಲೋಹಿಯಾ ಚಿಂತನೆ, ೨೦೧೧, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧) ನಾಗಭೂಷಣ ಡಿ.ಎಸ್., ಈ ಭೂಮಿಯಿಂದ ಆ ಆಕಾಶದವರೆಗೆ, ೨೦೦೯, ಸಂವಹನ ಪ್ರಕಾಶನ, ಮೈಸೂರು.

೨೨) ನಾಗರಾಜ್ ಡಿ.ಆರ್.,

- ಶಕ್ತಿಶಾರದೆಯ ಮೇಳ, ೨೦೧೩, ಅಕ್ಷರ ಪ್ರಕಾಶನ, ಹೆಗ್ಗೋಡು.
- ಸಾಹಿತ್ಯ ಕಥನ, ೧೯೯೩, ಅಕ್ಷರ ಪ್ರಕಾಶನ, ಹೆಗ್ಗೋಡು.

೨೩) ಪರಮೇಶ್ವರ ಭಟ್ಟ ಎಸ್., ರಸಋಷಿ ಕುವೆಂಪು, ೨೦೦೧, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೪) ಪೂರ್ಣಚಂದ್ರ ತೇಜಸ್ವಿ ಕೆ.ಪಿ.,

- ಅಬಚೂರಿನ ಪೋಸ್ಟಾಫೀಸು , ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಅಣ್ಣನ ನೆನಪು, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್, ೨೦೦೭, ಪುಸ್ತಕ ಪ್ರಕಾಶನ, ಮೈಸೂರು.
- ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಕನ್ನಡ ನಾಡಿನ ಹಕ್ಕಿಗಳು ಭಾಗ – ೨, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಕರ್ವಾಲೋ, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಕಾಡು ಮತ್ತು ಕ್ರೌರ್ಯ, ೨೦೧೩, ಪುಸ್ತಕ ಪ್ರಕಾಶನ, ಮೈಸೂರು.
- ಕಿರಗೂರಿನ ಗಯ್ಯಾಳಿಗಳು, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.
- ಚಿದಂಬರ ರಹಸ್ಯ, ೨೦೦೯, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
- ಜುಗಾರಿ ಕ್ರಾಸ್, ೨೦೦೯, ಪುಸ್ತಕ ಪ್ರಕಾಶನ, ಮೈಸೂರು
- ಪರಿಸರದ ಕಥೆ, ೨೦೦೭, ಪುಸ್ತಕ ಪ್ರಕಾಶನ, ಮೈಸೂರು.
- ಪಾಕಕ್ರಾಂತಿ ಮತ್ತು ಇತರ ಕಥೆಗಳು, ೨೦೦೮, ಪುಸ್ತಕ ಪ್ರಕಾಶನ, ಮೈಸೂರು.
- ಮಾಯಾಲೋಕ ೧, ೨೦೦೮, ಪುಸ್ತಕ ಪ್ರಕಾಶನ, ಮೈಸೂರು.

▪ ವಿಮರ್ಶೆಯ ವಿಮರ್ಶೆ, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.

▪ ಸ್ವರೂಪ ಮತ್ತು ನಿಗೂಢ ಮನುಷ್ಯರು, ೨೦೦೯, ಪುಸ್ತಕ ಪ್ರಕಾಶನ, ಮೈಸೂರು.

▪ ಹುಲಿಯೂರಿನ ಸರಹದ್ದು ಮತ್ತು ಇತರ ಕಥೆಗಳು, ೨೦೦೭, ಪುಸ್ತಕ ಪ್ರಕಾಶನ, ಮೈಸೂರು.

೨೫) ಪ್ರಧಾನ್ ಗುರುದತ್ತ (ಸಂ.), ಪೂರ್ಣಚಂದ್ರ ತೇಜಸ್ವಿ, ೨೦೦೮, ನವಕರ್ನಾಟಕ ಪ್ರಕಾಶನ, ಮೈಸೂರು.

೨೬) ಪ್ರಭಾಕರ ಎ.ಎಸ್.(ಸಂ.), ಲೋಹಿಯಾ ವರ್ತಮಾನದ ಮುಖಾಮುಖಿ, ೨೦೧೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭) ಪ್ರಸಾದಸ್ವಾಮಿ ಎಸ್., ಕಥೆ-ಕಥನ , ೨೦೦೭, ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು.

೨೮) ಪ್ರಹ್ಲಾದ್ ಜಿ.ವಿ. (ಸಂ.), ಸಂಚಯ ಸಾಂಸ್ಕೃತಿಕ ಪತ್ರಿಕೆ, ೨೦೦೨, ಬೆಂಗಳೂರು ಮುದ್ರಣ.

೨೯) ಬೋರಲಿಂಗಯ್ಯ ಹಿ.ಚಿ.(ಸಂ.), ಕುವೆಂಪು :ಮಹಿಳಾ ಮಂಥನ , ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೩೦) ಮುರಾರಿ ಬಲ್ಲಾಳ ನಿ. ಸಾಹಿತ್ಯ ಸಮ್ಮುಖ, ೨೦೦೦, ಕರ್ನಾಟಕ ಸಂಘ, ಪುತ್ತೂರು.

೩೧) ರಮೇಶ್ ಸ.ಚಿ.,

▪ ಬೇಟೆ : ಸಾಂಸ್ಕೃತಿಕ ಪದಕೋಶ . ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

▪ ಶಿಕಾರಿ ಪರಂಪರೆ, ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨) ರಹಮತ್ ತರೀಕೆರೆ.,

- ಕತ್ತಿಯಂಚಿನ ದಾರಿ , ೨೦೦೭, ಅಭಿನವ , ಬೆಂಗಳೂರು.
- ಮಲೆಗಳಲ್ಲಿ ಮದುಮಗಳು : ಸಾಂಸ್ಕೃತಿಕ ಮುಖಾಮುಖಿ (ಸಂ.), ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಮಾತು ತಲೆಯೆತ್ತುವ ಬಗೆ (ಸಂ.), ೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩) ರಾಘವೇಂದ್ರರಾವ್ ಎಚ್.ಎಸ್., ನಮಸ್ಕಾರ, ೨೦೦೭, ಅಭಿನವ ಪ್ರಕಾಶನ, ಬೆಂಗಳೂರು.

೩೪) ರಾಜಾರಾಮ ಹೆಗ್ಗಡೆ, ಗತ ಕಥನ , ೨೦೦೫, ಆನಂದ ಕಂದ ಗ್ರಂಥಮಾಲೆ, ಚಿತ್ರದುರ್ಗ.

೩೫) ರಾಜೇಶ್ವರಿ ತೇಜಸ್ವಿ ನನ್ನ ತೇಜಸ್ವಿ, ೨೦೧೧, ಪುಸ್ತಕ ಪ್ರಕಾಶನ, ಮೈಸೂರು.

೩೬) ಲಕ್ಷ್ಮೀನಾರಾಯಣ ಭಟ್ ಎನ್.ಎಸ್., ಸಾಹಿತ್ಯ ಸನ್ನಿಧಿ, ೨೦೧೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೭) ವೀರಪ್ಪ ಜಿ.ಟಿ. (ಸಂ.), ತೇಜಸ್ವಿ ಸಾಹಿತ್ಯ ಕೃಷಿ, ೨೦೦೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೮) ಶಿವರುದ್ರಪ್ಪ ಜಿ.ಎಸ್.,

- ಕುವೆಂಪು ಪುನರಾಲೋಕನ, ೨೦೦೯, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
- ಕಾವ್ಯಾರ್ಥ ಚಿಂತನ, ೨೦೦೯, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೯) ಶಿವಾರೆಡ್ಡಿ ಕೆ.ಸಿ., ಸಮಗ್ರ ಗದ್ಯ ಸಂಪುಟ – ೩, ೨೦೦೮, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦) ಶೇಷಗಿರಿರಾವ್ ಎಲ್.ಎನ್., ಸಮಗ್ರ ವಿಮರ್ಶಾ ಸಾಹಿತ್ಯ ಸಂಪುಟ-೭,೮, ೨೦೧೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೧) ಶ್ರೀಕಂಠಯ್ಯ ತೀ.ನಂ., ಭಾರತೀಯ ಕಾವ್ಯಮೀಮಾಂಸೆ, ಪ್ರಸಾರಂಗ, ೨೦೦೫, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೨) ಸಬೀಹಾ ಭೂಮಿಗೌಡ (ಸಂ.), ಕುವೆಂಪು-ಶತಮಾನೋತ್ತರ ನೋಟ, ೨೦೦೯, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ, ಕುಪ್ಪಳ್ಳಿ.

೪೩) ಸುಬ್ಬಣ್ಣ ಕೆ.ವಿ.,

- ಅರೆಶತಮಾನದ ಅಲೆ ಬರಹಗಳು, ೨೦೦೮, ಅಕ್ಷರ ಪ್ರಕಾಶನ, ಶಿವಮೊಗ್ಗ.
- ಕುವೆಂಪುಗೆ ಪುಟ್ಟ ಕನ್ನಡಿ, ೧೯೯೫, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೪) ಸುಜನಾ., ಪರಂಪರೆ ಮತ್ತು ಕುವೆಂಪು, ೨೦೧೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.